|| ಶ್ರೀಗುರುಭ್ಯೋ ನಮಃ ||

# ಅನುಭವಾಮೃತ

## ಮೊದಲನೆಯ ಅಧ್ಯಾಯ

### ಅಧಿಕಾರಲಕ್ಷಣ

ಸೂ|| ವ್ಯಾಸಮುನಿಪತಿ ಶುಕಮುನಿಗೆ ಸಂ | ತೋಷದಿಂದಲಿ ತತ್ತ್ವಬೋಧೆಯ |
ಲೇಸೆನಲು ವಿಸ್ತರಿಸಿ ಹೇಳಿದನಾತ್ಮವಿದರೊಲಿಯೆ ||

ಶ್ರೀಮದನುಪಮತೇಜ, ನತಜನ | ಕಾಮಿತಾರ್ಥಫಲಪ್ರದಾಯಕ, |
ಸೋಮಶೇಖರ, ಸುರಮುನೀಂದ್ರಾರ್ಚಿತಪದಾಂಭೋಜ, ||
ಸಾಮಗಾನಪ್ರಿಯ, ಸದಾಶಿವ, | ವಾಮಭಾಗಾಶ್ರಿತಭವಾನೀ |
ಪ್ರೇಮ, ಶ್ರೀಗಿರಿಮಲ್ಲಿಕಾರ್ಜುನ, ಸಲಹು ಮೂಜಗವ || ೧ ||

---

|| ಶ್ರೀಸಚ್ಚಿದಾನಂದಗುರುಪರಬ್ರಹ್ಮಣೇ ನಮಃ ||

## ಸರ್ವಾರ್ಥಸಂದರ್ಶಿನಿ

ಎಂಬ ಟೀಕು

ಸೂ|| ವ್ಯಾಸಮುನಿಪತಿ ಶುಕಮುನಿಗೆ— ಈ ಗ್ರಂಥವನ್ನು ವ್ಯಾಸರು ತಮ್ಮ ಮಗನಾದ ಶುಕನಿಗೆ ಹೇಳಿದ್ದಾಗಿರುವದನ್ನು ನೋಡಿದರೆ ಪುತ್ರವಾತ್ಸಲ್ಯದಿಂದ ಅವರು ಇದರಲ್ಲಿ ಸರ್ವಾರ್ಥಗಳನ್ನೂ ಪ್ರಕಾಶಮಾಡಿರುವರೆಂಬ ಭಾವವು ತೋರುವದು. ವ್ಯಾಸರು ಶುಕರಿಗೆ ಹೇಳಿದ ಅರ್ಥವನ್ನು ಕವಿಯು ಈ ಗ್ರಂಥದಲ್ಲಿ ಭಾಮಿನೀ ಷಟ್ಪದಿಯ ರೂಪದಿಂದ ಹೇಳಿರುವನು.

೧. ವಾಮ....ಪ್ರೇಮ- ಎಡತೊಡೆಯ ಮೇಲಿರುವ ಪಾರ್ವತಿಯ ಮೇಲೆ ಪ್ರೇಮವುಳ್ಳವನೆ. ಶ್ರೀಗಿರಿಮಲ್ಲಿಕಾರ್ಜುನ— ಶ್ರೀಶೈಲವೆಂಬ ಮಹಾಕ್ಷೇತ್ರದ ಸ್ವಾಮಿಯಾದ ಮಲ್ಲಿಕಾರ್ಜುನದೇವರೆ (ಎಂದು ಸಂಬೋಧನೆ). ಈ ಶ್ರೀಶೈಲವು ಕರ್ನೂಲುಜಿಲ್ಲೆಯಲ್ಲಿದೆ.

ಶ್ರೀಗಿರೀಶ್ವರಪಾದಪದ್ಮಪ । ರಾಗರಂಜಿತಮೌಳಿ, ಭ್ರಮರಾಂ ।
ಬಾಗುಣಾರ್ಣವಮಗ್ನಚಿತ್ತ, ವಚೋವಿಚಕ್ಷಣನು ॥
ಶ್ರೀಗುರುವಿನುಪದೇಶದಿಂದನು । ರಾಗವುದಿಸಲು ರಂಗನಾಥನು ।
ಯೋಗಿಜನರಹುದೆನಲು । ಪೇಳಿದನನುಭವಾಮೃತವ ॥ ೨ ॥

ಘನತರದ ಸಹವಾಸಿವಂಶದೊ । ಳನುಪಮನು, ಮಹಲಿಂಗದೇವನ ।
ತನಯನಹ ಶ್ರೀರಂಗ, ಸಹಜಾನಂದಗುರುಪದವ ॥
ನೆನೆದು, ಸಮ್ಯಗ್ಜ್ಞಾನವನು ಬ । ಲ್ಲನುಭವಿಗಳಹುದೆನಲು ಪೇಳಿದ; ।
ವಿನುತರಾಸ್ವಾದಿಸುವದೊಲಿದೀ । ಅನುಭವಾಮೃತವ ॥ ೩ ॥

ಕನ್ನಡದ ನುಡಿಯೆಂದುಪೇಕ್ಷಿಸ । ಲಿನ್ನು ಹಿರಿಯರಿಗಂಜಿ ನುಡಿವೆನು ; ।
ಕನ್ನಡಿಯೆ ದರ್ಪಣವದಲ್ಲದೆ ಭೇದವೇನಿದಕೆ ? ॥
ಮುನ್ನಲುಪನಿಷದರ್ಥವನು ಸಂ । ಪನ್ನಮತಿಗಳು ಪೇಳ್ದುದನೆ ನಾ ।
ಕನ್ನಡಿಸಿದೆನು; ಕೊರತೆಯಿರ್ದೊಡೆ ಮನ್ನಿಸುವದೊಲಿದು ॥ ೪ ॥

---

೨. ಭ್ರಮರಾಂಬಾ—ಪಾರ್ವತೀದೇವಿ (ಶ್ರೀಗಿರಿಮಲ್ಲಿಕಾರ್ಜುನೇಶ್ವರನ ಅರ್ಧಾಂಗಿ) ' ಮಗ್ನಚಿತ್ತ ' ಎಂಬಲ್ಲಿ ಕೆಲವು ಕಡೆ ' ಪೂರ್ಣಚಂದ್ರ ' ಎಂದಿದೆ. ಹೀಗಿದ್ದರೆ ರಂಗನಾಥನ ಸಾನ್ನಿಧ್ಯದಿಂದ ಭ್ರಮರಾಂಬೆಯ ಗುಣವು ಉತ್ಕರ್ಷವನ್ನು ಪಡೆಯುವದೆಂದರ್ಥವಾಗುತ್ತದೆ. ಇದರಿಂದ ರಂಗನಾಥನಿಗೇ ಪ್ರಾಶಸ್ತ್ಯವು ತೋರುತ್ತದೆ. ದೇವಿಗೆ ಪ್ರಾಶಸ್ತ್ಯವುಂಟಾಗುವ ಈ ಪಾಠವು ಬಹು ಕಡೆ ಇದೆ. ಯೋಗಿಜನರಹುದೆನಲು—ಇಲ್ಲಿ ಯೋಗಿಗಳೆಂದರೆ ಪಾತಂಜಲಯೋಗಶಾಸ್ತ್ರದಂತೆ ಉಸಿರು ಹಿಡಿದು ಸಾಧಿಸುವ ಯೋಗಿಗಳೆಂದರ್ಥವನ್ನು ಮಾಡಬಾರದು ; ಏಕೆಂದರೆ ಆ ಜನರು ತಲೆದೂಗುವಂಥ ವಿಚಾರಗಳು ಇಲ್ಲಿಲ್ಲ. ವಿಚಾರದಿಂದ ಜೀವಬ್ರಹ್ಮೈಕ್ಯವನ್ನು ಸಾಧಿಸುವಂಥ ವಿಷಯಗಳೇ ಇಲ್ಲಿರುವದರಿಂದ ಇಲ್ಲಿರುವ ಯೋಗಿಗಳೆಂಬ ಮಾತಿಗೆ ರಾಜಯೋಗಿಗಳೆಂದೋ ಅಥವಾ ಜ್ಞಾನಯೋಗಿಗಳೆಂದೋ ಅರ್ಥವನ್ನು ಮಾಡಿಕೊಳ್ಳಬೇಕು.

೩. ಸಹವಾಸಿವಂಶ—ಸಹವಾಸಿಯೆಂಬುವದು ಈ ಗ್ರಂಥಕರ್ತನ ಕುಲದ ಹೆಸರು. ಇದರ ವಿಷಯದಲ್ಲಿ ಹೆಚ್ಚಿನ ವಿಚಾರಕ್ಕೆ ಪೀಠಿಕೆಯನ್ನು ನೋಡಿ.

೪. ಕನ್ನಡಿಯೆ—ಕನ್ನಡಿಯೆಂಬ ಮಾತಿನಿಂದ ಕನ್ನಡದಲ್ಲಿ ಹೇಳಿದ್ದೆಂಬ ಅರ್ಥವೂ ಸೂಚಿತವಾಗುತ್ತದೆ. ಕನ್ನಡಿಯೆಂಬ ಮಾತಿಗೆ ಪ್ರತಿಬಿಂಬವು ಕಾಣುವಂಥ ಗಾಜೆಂಬರ್ಥವಂತೂ ರೂಢಿಯಲ್ಲಿಯೇ ಇದೆ. ಇದರಿಂದ ಕನ್ನಡಿಯಲ್ಲಿ ಯಾವ ವಸ್ತುವಾದ

ಸುಲಿದ ಬಾಳೆಯ ಹಣ್ಣಿನಂದದಿ, ಕಳೆದ ಸಿಗುರಿನ ಕಬ್ಬಿನಂದದ ।
ಲಳಿದ ಉಷ್ಣದ ಹಾಲಿನಂದದಿ ಸುಲಭವಾಗಿರ್ಪ ॥
ಲಲಿತವಹ ಕನ್ನಡದ ನುಡಿಯಲಿ । ತಿಳಿದು ತನ್ನೊಳು ತನ್ನ ಮೋಕ್ಷವ ।
ಗಳಿಸಿಕೊಂಡರೆ ಸಾಲದೇ ? ಸಂಸ್ಕೃತದಲಿನ್ನೇನು ! ॥ ೫ ॥

ಬರೆದು ಪರಿಸೀಗ್ರಂಥದರ್ಥವ । ಹಿರಿಯರಿಂದರಿದವರಿಗೀಗಲೆ ।
ಕರತಲಾಮಲಕದವೊಲಾತ್ಮನು ಸ್ಫುರಿಸಿ ತೋರುವನು ; ॥
ಬರಿಯ ಭ್ರಾಂತಿಯ ಬಿಟ್ಟು ಯತ್ನದಿ । ಮರಳಿಮರಳೀ ಗ್ರಂಥದರ್ಥದ ।
ಪರಿಚಯವ ನೆರೆ ಮಾಡಿ ಪಡೆವುದು ಮೋಕ್ಷಸಂಪದವ ॥ ೬ ॥

ಹಾಲನೆರೆದರೆ ಕುಡಿಯಲೊಲ್ಲದ । ಬಾಲಕನ ತೆರನಂತೆ ಮನವಿದು ।
ಕೇಳಲೊಲ್ಲದು ಹಿತವನರಿಯದ ಮೂರ್ಖನಂದದಲಿ ; ॥
ಬಾಲಕಿಯನುಪಲಾಲಿಸುವವೊಲು । ಬೋಳಯಿಸಿ ತನ್ನೊಳಗು ಮಾಡಲು ।
ಮೇಲೆಮೇಲದು ಮೆಲ್ಲಮೆಲ್ಲನೆ ಕೇಳತೊಡಗುವದು ॥ ೭ ॥

ಕೇಳತೊಡಗಿದ ಬಳಿಕ ಬಿಡದದು; ।ಲೋಲಪ್ರೌಢೆಯ ತೆರದಿ ಹಗಲಿರು ।
ಳಾಲಿಸುತ್ತದರಲ್ಲಿ ಮಿಗಿಲಾಸಕತಿಯಾಗಿಹುದು ; ॥

---

ಯೂ ಇದ್ದದ್ದಿದ್ದಂತೆ ಹೇಗೆ ಪ್ರತಿಬಿಂಬಿಸುವದೊ ಹಾಗೆ ಸಂಸ್ಕೃತದಿಂದ ಅಥವಾ ಬೇರೆ ಯಾವ ಭಾಷೆಯಿಂದಾದರೂ ತಂದ ಯಾವ ವಿಚಾರವಾದರೂ ಇದ್ದದ್ದಿದ್ದಂತೆ ಕನ್ನಡದ ಮಾತಿನಲ್ಲಿ ಇಳಿದು ಬಂದೇ ಬರುವದೆಂದು ಧ್ವನಿ ; ಮತ್ತು ಕನ್ನಡಿಯೆಂದರೂ ದರ್ಪಣವೆಂದರೂ ಪದಾರ್ಥವು ಒಂದೇ ಆದ್ದರಿಂದ ಕನ್ನಡದಲ್ಲಿ ಹೇಳಿದ ಮಾತ್ರಕ್ಕೇ ಯಾವ ಕೊರತೆಯೂ ಇಲ್ಲವೆಂದು ತಾತ್ಪರ್ಯ.

೫. ಮೋಕ್ಷವ—ಹುಟ್ಟುಸಾವುಗಳ ದುಃಖವೆಂಬ ತೊಡಕಿನಿಂದ ಬಿಡುಗಡೆಯಾಗುವದನ್ನು.

೬. ಕರತಲಾಮಲಕದವೊಲ್—ಅಂಗಯ್ಯೊಳಗಣ ನೆಲ್ಲಿಯ ಕಾಯಂತೆ. • ಬರಿಯ ಭ್ರಾಂತಿಯ ...ಪ್ರಾಪಂಚಿಕವಸ್ತುಗಳಿಂದ ಸುಖವಾದೀತೆಂಬ ವ್ಯರ್ಥವಾದ ತಪ್ಪುತಿಳಿವಳಿಕೆಯನ್ನು. ಪರಿಚಯವ ನೆರೆ ಮಾಡಿ—ಚೆನ್ನಾಗಿ ವಿಚಾರವನ್ನು ಮಾಡಿ.

೭. ಬೋಳಯಿಸಿ—ತಲೆಯನ್ನು ತಡವಿ.

೮. ಅದು-ಮನಸ್ಸು. ಅಭ್ಯಾಸವಶದಿಂ—“ ಅಭ್ಯಾಸೇನ ತು ಕೌಂತೇಯ ವೈರಾ

ಹೇಳಲೇನಭ್ಯಾಸವಶದಿಂ । ಮೇಲೆ ಪರಮಾನಂದಪದದೊಳ ।
ಗಾಳಿ ನಿಜಸಾಯುಜ್ಯಪದವಿಯ ಪಡೆದು ಸುಖಿಯಹುದು ॥ ೮ ॥

ಅಖಿಲವೇದಾಂತಾರ್ಥವನು ನಾ । ಯುಕುತಿಯಲಿ ಸಂಗ್ರಹಿಸಿ ಪೇಳುವೆ ।
ಸಕಲರಿಗೆ ತಿಳಿವಂತೆ ಸುಲಭೋಪಾಯದಿಂದೊಲಿದು ; ॥
ಶುಕಮುನೀಶ್ವರನಂತೆ ನೀವಾ । ಸಕತಿಯಲಿ ನೆರೆ ತಿಳಿದು ನಿಜವಹ ।
ಮುಕುತಿಸುಖಸಾಮ್ರಾಜ್ಯಪದದಲಿ ನಿಂದು ಸುಖಿಯಾಗಿ ॥ ೯ ॥

ಹಿಂದೆ ಮಾಡಿದ ಸಕಲಪಾತಕ । ಬೆಂದುಹೋಹುದು ಬ್ರಹ್ಮಚಿಂತೆಯೊ।
ಳೊಂದುನಿಮಿಷದೊಳಿರ್ದೊಡದರಿಂ ಹೇಳಲೇನದನು ! ॥
ತಂದೆತಾಯ್ಗಳು ಧನ್ಯರಾತನ । ಬಂಧುಗಳು ಕುಲವೆಲ್ಲ ಪಾವನ; ।:
ಬಂದು ನಿಂದೆಡೆಯೆಲ್ಲ ಪುಣ್ಯಕ್ಷೇತ್ರವೆನಿಸುವದು ॥ ೧೦ ॥

ಮೇರುಸಾಮ್ಯಸುವರ್ಣದಾನವ, । ವಾರಿನಿಧಿಪರ್ಯಂತಭೂಮಿಯ, ।
ಭೂರಿಕನ್ಯಾದಾನಗೋದಾನಗಳಸಂಖ್ಯಗಳ ॥
ಧಾರಿಣಿಯ ದಿವಿಜರಿಗೆ ಪರವೋ । ದಾರಬುದ್ಧಿಯಲಿತ್ತ ಫಲ ಕೈ ।
ಸೇರುವದು ನಿಮಿಷಾರ್ಧವಾತ್ಮಧ್ಯಾನನಿಷ್ಠರಿಗೆ ॥ ೧೧ ॥

ಅದು ನಿಮಿತ್ತದಲಾತ್ಮವಿದ್ಯಾ । ಹೃದಯವಾದೀ ಗ್ರಂಥವನು ಪೇ ।
ಳಿದೆನೊಡೆಯನಾ ಮಲ್ಲಿಕಾರ್ಜುನನಾತನಾಜ್ಞೆಯಲಿ ॥
ಮುದದಿ ಸಹಜಾನಂದಗುರುಗಳ । ಪದಪಯೋಜವ ನೆನೆದು ಹೃದಯದೊ।
ಳಿದರೊಳೆಳ್ಳನಿತಿಲ್ಲವೆನಗೆ ಸ್ವತಂತ್ರದಭಿಮಾನ ॥ ೧೨ ॥

ಒಂದುದಿನ ಶುಕಯೋಗಿ ವಿನಯದಿ । ತಂದೆಯಡಿಗಳಿಗೆರಗಿ ಚಿತ್ತಯಿ ।
ಸೊಂದು ಬಿನ್ನಹ ; ಬ್ರಹ್ಮವೆಂದೊಡದೆಂತಿಹುದು ? ತಿಳಿವಾ ॥

---

ಗ್ಯೇಣ ಚ ಗೃಹ್ಯತೇ " ಎಂಬ ಗೀತೋಕ್ತಿಯಂತೆ ಎಡೆಬಿಡದೆ ಅದನ್ನೆ ಮತ್ತೆ ಮತ್ತೆ ನೆನೆಯುವದರಿಂದ. (ಪದದೊಳಗೆ+) ಅಳಿ—ಮುಳುಗಿ.

೯. ಸುಖಿಯಾಗಿ—ನೀವು ಸುಖವನ್ನು ಪಡೆಯಿರೆಂದರ್ಥ.

೧೧. ಮೇರುಸಾಮ್ಯ-ಮೇರುಪರ್ವತದಂತೆ ಹೇರಳವಾದ. ಗೋದಾನಗಳ+ಅಸಂಖ್ಯಗಳ—ಲೆಕ್ಕವಿಲ್ಲದಷ್ಟು ಗೋವುಗಳ ದಾನವನ್ನು.

೧೨. ಹೃದಯ—ರಹಸ್ಯ, ಮರ್ಮ.

ಚಂದವಾವುದು ? ತಿಳಿಯೆ ಫಲವೇ । ನೆಂದು ಕೇಳಲು ವ್ಯಾಸಮುನಿಪತಿ ।
ಮಂದಹಾಸದಲಂದು ನುಡಿದನು ಕಂದಗುತ್ತರವ ॥ ೧೩ ॥

ಕಂದ, ಕೇಳ್ಳೈ ಬ್ರಹ್ಮವೆನಲದ । ರಿಂದಧಿಕವೇನಿಲ್ಲವದು ತ ।
ನ್ನಿಂದ ತಾನೇ ತೋರುತಿರ್ಪುದು ; ಸ್ವಪ್ರಕಾಶವದು ; ॥
ಒಂದದದ್ವಯವಪ್ರತರ್ಕ್ಯವ । ದೆಂದು ಪೇಳ್ವರು ; ತಿಳಿವ ಪರಿಯಿಂ ।
ತೆಂದೆನಲು ಶ್ರುತಿಗುರುಗಳಿಂದದು ಸ್ವಾನುಭವವೇದ್ಯ ॥ ೧೪ ॥

ಶ್ರುತಿಗುರುಗಳುಪದೇಶದಿಂದಲಿ । ಮಥಿಸಿ ತನ್ನೊಳು ತಾನೆ ತಿಳಿದದ ।
ಸತತ ಮನನಾಭ್ಯಾಸವಶದಿಂ ದೃಢತರವ ಮಾಡೆ ॥
ಅತಿಶಯಜ್ಞಾನಾಪರೋಕ್ಷ । ಸ್ಥಿತಿಯೆನಿಸುವನುಭವವದಾಗಲು ।
ಗತಿಯ ಪಡೆವರು ; ಯೋಗಸಹಜಾನಂದಫಲವದಕೆ ॥ ೧೫ ॥

ಅನುಭವಾಮೃತದಲ್ಲಿ ಪೇಳುವೆ । ನಿನಗೆ ಮೊದಲಧಿಕಾರಲಕ್ಷಣ ।
ವನು, ಇಹಾಮುತ್ರಾರ್ಥಫಲಭೋಗದ ವಿರಾಗವನು, ॥
ತನಯ, ತ್ವಂಪದತತ್ಪದದ ಶೋ । ಧನೆಯ ಲಕ್ಷ್ಯವನಸಿಪದದೊಳೊಂ ।
ದೆನಿಸುವೈಕ್ಯವ, ಭೂಮಿಕೆಗಳಭ್ಯಾಸದಿರವುಗಳ ॥ ೧೬ ॥

---

೧೪. ಸ್ವಪ್ರಕಾಶ—ಮತ್ತೊಂದರಿಂದ ಬೆಳಗದೆ ತಾನೇ ಬೆಳಗುವದು (ಇದೂ ' ತನ್ನಿಂದ ತಾನೇ ತೋರುತಿರ್ಪುದು ' ಎಂಬ ಮಾತಿನ ಪ್ರಕಾರಾಂತರವು). ಒಂದು— ತನ್ನ ಜಾತಿಯ ರೂಪವಾದ (ಸಜಾತೀಯ) ಮತ್ತು ತನ್ನ ಅವಯವರೂಪವಾದ (ಸ್ವಗತ) ಎಂಬ ಭೇದವಿಲ್ಲದ್ದು. ಅದ್ವಯ—ಬೇರೆ ಜಾತಿಯ (ವಿಜಾತೀಯ) ಭೇದವಿಲ್ಲದ್ದು. ಅಪ್ರತರ್ಕ್ಯ—ಊಹಿಸಿ ತಿಳಿಯಲಶಕ್ಯ. ಶ್ರುತಿ .. ವೇದ್ಯ— ಶ್ರುತಿಯ ಮತ್ತು ಗುರುಗಳ ಬೋಧೆಯಿಂದ ತನ್ನನುಭವಕ್ಕೆ ಬಂದು ಗೊತ್ತಾಗತಕ್ಕದ್ದು.

೧೫. ಮಥಿಸಿ—ಕಡೆದು (ಯುಕ್ತಿಗಳಿಂದ ಚೆನ್ನಾಗಿ ವಿಮರ್ಶೆಮಾಡಿ). ಅತಿಶಯಜ್ಞಾನಾಪರೋಕ್ಷಸ್ಥಿತಿ—ಉತ್ಕೃಷ್ಟವಾದ ಜ್ಞಾನದ ಸಾಕ್ಷಾತ್ಕಾರವಾಗಿರುವಿಕೆ. ಗತಿ —ಜ್ಞಾನ. ಯೋಗಸಹಜಾನಂದ—ಜ್ಞಾನಯೋಗದಿಂದ ಸಿಕ್ಕುವ ಸ್ವಭಾವಸಿದ್ಧವಾದ ಆನಂದ.

೧೬. ಇಹಾಮುತ್ರಾರ್ಥಫಲಭೋಗ—ಈ ಲೋಕದ ಮತ್ತು ಪರಲೋಕದ ಫಲಗಳ ಸುಖ. ತ್ವಂಪದತತ್ಪದದ—ನೀನು ಎಂಬರ್ಥದ "ತ್ವಂ" ಎಂಬ ಮತ್ತು ' ಅದು ' ಎಂಬರ್ಥದ " ತತ್ " ಎಂಬ ಸಂಸ್ಕೃತ ಶಬ್ದಗಳ. ಅಸಿಪದದೊಳು...“ ಅಸಿ ”

ಶ್ರವಣಮನನಾದಿಗಳ ವಿವಳವ, । ಸವನಿಸುವ ಸುಸಮಾಧಿಭೇದವ ।
ನವಿರಳದ ಪರಮಾತ್ಮಪದವನಭೇದವಾದವನು, ॥
ವಿವರವಹ ಜೀವತ್ರಯಂಗಳ, । ಭವರಹಿತಯೋಗಿಗಳ ಚರಿತೆಯ, ।
ಸುವಿಮಲಾತ್ಮಕನಿರ್ಗುಣಾರಾಧನೆಯ ನಿರ್ಣಯವ ॥ ೧೭ ॥

ಮಗನೆ, ಬ್ರಹ್ಮವ ತಿಳಿಯಲಧಿಕಾ । ರಿಗಳನರಿಯಲುಬೇಕು ಮೊದಲಲಿ;।
ಬಗೆದು ಸುಕ್ಷೇತ್ರದಲಿ ಬೀಜವ ಬಿತ್ತೆ ಫಲವಹುದು ; ॥
ನಗೆಯಲಾ! ಊಷರದ ಭೂಮಿಯೊ। ಳೊಗೆಯಲದು ಫಲಕಾರಿಯಹುದೇ?।
ಸೊಗಸದದು ಕೇಳನಧಿಕಾರಿಗೆ ಯೋಗ್ಯವಲ್ಲೆಂದ ॥ ೧೮ ॥

ದಾನಧರ್ಮದಯಾನ್ವಿತರು, ನಿ । ರ್ಮಾನಮದಮತ್ಸರರು, ವಿಹಿತರು, ।
ಮೌನ ಮೊದಲಾಗಿರ್ದ ನಿಯಮಧ್ಯಾನತತ್ಪರರು, ॥
ಜ್ಞಾನಸಾಧನಶಮದಮಾದಿವಿ । ಧಾನನಿರತರು, ದಂಭದರ್ಪಗ ।
ಳೇನುಮಿಲ್ಲದ ಶಾಂತರೇ ತತ್ತ್ವಾಧಿಕಾರಿಗಳು ॥ ೧೯॥

ಸತ್ಯಶೌಚಾಚಾರನಿರತರು, । ಚಿತ್ತದಲಿ ನಿರ್ಮಲರು, ನಿಸ್ಪೃಹ ।
ವೃತ್ತಿಯಲಿ ವರ್ತಿಸುವರಾಶಾಪಾಶವರ್ಜಿತರು, ॥
ಉತ್ತಮೋತ್ತಮರಾದ ಗುರುಪದ । ಭಕ್ತಿಯುಕ್ತರು, ಭವದ ಬೇರನು ।
ಕಿತ್ತು ಬಿಸುಡುವ ನಿಪುಣರೇ ತತ್ತ್ವಾಧಿಕಾರಿಗಳು ॥ ೨೦ ॥

---

ಎಂಬ ಸಂಸ್ಕೃತದ ಶಬ್ದದಲ್ಲಿ. ಭೂಮಿಕೆಗಳ—ಏಳು ಮೆಟ್ಟಲುಗಳ (ಸಪ್ತಭೂಮಿಕೆಗಳ ವಿಚಾರವೂ ಮುಂದಿನ ಪದ್ಯದಲ್ಲಿ ಸೂಚಿಸುವ ಶ್ರವಣ, ಮನನ ಮತ್ತು ಸಮಾಧಿ ಇವುಗಳ ವಿಚಾರಗಳೂ ಒಂದೇ ಅಧ್ಯಾಯದಲ್ಲಿರುವವು).

೧೭. ಸವನಿಸುವ--ದೊರೆಯುವ. ಅಭೇದವಾದವ-ಅದ್ವೈತವನ್ನು.

೧೮. ಬಗೆದು- ವಿಚಾರಮಾಡಿ. ನಗೆಯಲಾ--ನಗೆಗೀಡಲ್ಲವೆ ! ಊಷರದ—ಮರು ಭೂಮಿಯ.

೨೦. ನಿರ್ಮಲರು— ಪಾಪವಿಲ್ಲದವರು. ನಿಸ್ಪೃಹ—ದುರಾಶೆಯಿಲ್ಲದ. ಭವದ—ಹುಟ್ಟುಸಾವುಗಳ. ತತ್ತ್ವಾಧಿಕಾರಿಗಳು- ತಾವು ಬ್ರಹ್ಮರೆಂಬದನ್ನು ತಿಳಿಯುವದಕ್ಕೆ ತಕ್ಕವರು.

೨೧. ಕಳೆದ—ಮಾಡದೆ ಬಿಟ್ಟ. ಆ ಪ್ರತ್ಯವಾಯಕೆ—ಮಾಡದೆ ಬಿಟ್ಟದ್ದರಿಂದ ಬಂದ ಆ ದೋಷಕ್ಕೆ. ಪ್ರಾಯಶ್ಚಿತ್ತವನು--ತಪ್ಪನ್ನು ಕಳೆದುಕೊಳ್ಳುವದಕ್ಕೆ ಮಾಡಬೇಕಾದ

ನಿತ್ಯನೈಮಿತ್ತಿಕವ ಕಳೆದಾ । ಪ್ರತ್ಯವಾಯಕೆ ಮಾಡಿ ಪ್ರಾಯ ।
ಶ್ಚಿತ್ತವನು, ಜಪತಪದಿ, ಕಾಮ್ಯನಿಷಿದ್ಧಗಳ ಬಿಟ್ಟು, ॥
ಭಕ್ತಿಯಿಂದೀಶ್ವರನ ಪೂಜಿಸಿ, । ಚಿತ್ತಶುದ್ಧಿಯ ಪಡೆದು, ಮೋಕ್ಷವ ।
ನರ್ಥಿಸುತ್ತಿಹ ಸಾಧುಗಳೆ ತತ್ತ್ವಾಧಿಕಾರಿಗಳು ॥ ೨೧ ॥

ಅಷ್ಟಪಾಶವ ಹರಿದು, ಕ್ಲೇಶಗ । ಳಿಟ್ಟಣಿಯ ನೆರೆ ಮುರಿದು, ಮನಸಿನ ।
ದುಷ್ಟತನವನು ಬಿಡಿಸುತರಿಗಳನಾರ ಪರಿಹರಿಸಿ, ॥
ನಿಷ್ಠೆಯಿಂ ಗುರುಹಿರಿಯರಲಿ ಮನ । ಮುಟ್ಟಿ ಭಕ್ತಿಯ ಮಾಡಿ, ಬ್ರಹ್ಮದ ।
ಬಟ್ಟೆಯನು ಹಿಡಿದವರೆ ನೆರೆ ತತ್ತ್ವಾಧಿಕಾರಿಗಳು ॥ ೨೨ ॥

ಮನದಿ ವಾಕ್ಕಾಯದಲಿ ಪಾಪವ । ನೆನೆಯ; ನುಡಿಯನುಮಾಡನನ್ಯರು ।
ತನಗೆ ಮಾಡಿದೊಡಪಕೃತಿಯನದು ಪೂರ್ವಕೃತವೆಂಬ ; ॥
ತನುಜರನುಜರು ತಾಯಿತಂದೆಗ । ಳೆನಿತು ತನ್ನನು ದೂಷಿಸಲು ಭೂ ।
ಷಣವ ಮಾಡಲು ಹಿಗ್ಗಿ ತಗ್ಗನು ಮೋಕ್ಷಕಾಂಕ್ಷಕನು ॥ ೨೩ ॥

ಬಂದ ಸುಖದುಃಖಗಳು ತನ್ನನು । ಮುಂದುಗೆಡಿಸಲು ನೋಯದುಬ್ಬದೆ
ಬಂದುದೆಲ್ಲವುಮೀಶ್ವರಾಜ್ಞೆಯೆನುತ್ತ ಧೈರ್ಯವನು ॥

---

ಕರ್ಮವನ್ನು. ಕಾಮ್ಯನಿಷಿದ್ಧಗಳ ಬಿಟ್ಟು—ಫಲಾಶೆಯಿಂದ ಕರ್ಮ ಮಾಡುವದನ್ನೂ ಮಾಡಬಾರದ ಕೆಸಲಗಳನ್ನು ಮಾಡುವದನ್ನೂ ಬಿಟ್ಟು. ಅರ್ಥಿಸುತ್ತಿಹ-–ಬಯಸುತ್ತಿರುವ.

೨೨. ಅಷ್ಟಪಾಶಗಳು.–"ಘೃಣಾ, ಶಂಕಾ, ಭಯಂ, ಲಜ್ಜಾ, ಜುಗುಪ್ಸಾ (ಚೇತಿ ಪಂಚಮೀ), ಕುಲಂ, ಶೀಲಂ, (ತಥಾ) ಜಾತಿ (ರಷ್ಟೌ ಪಾಶಾಃ ಪ್ರಕೀರ್ತಿತಾಃ)". ಇವುಗಳ ವಿವರಣೆಯನ್ನು ಕವಿಯು ಮುಂದೆ ೧೦ ಅ. ೧೧ ಪ. ದಲ್ಲಿ ತಾನೇ ಹೇಳುವನು. ಕ್ಲೇಶಗಳ—ಕ್ಲೇಶಗಳು ಅವಿದ್ಯೆ, ಅಸ್ಮಿತೆ, ರಾಗ, ದ್ವೇಷ, ಅಭಿನಿವೇಶ ಎಂದು ಐದು ಇವೆ. ಇವುಗಳ ವಿವರವನ್ನು ಕವಿಯು ಮುಂದೆ ೧೦ ಅ. ೬ ಮತ್ತು ೭ ಪ. ಗಳಲ್ಲಿ ತಾನೇ ಹೇಳುವನು. ಇಟ್ಟಣಿ—ಗುಂಪು. ಅರಿಗಳನು + ಆರ—ಕಾಮ, ಕ್ರೋಧ, ಲೋಭ, ಮೋಹ, ಮದ, ಮಾತ್ಸರ್ಯ ಎಂಬ ಆರು ಶತ್ರುಗಳನ್ನು. ಬಟ್ಟೆಯನು—ದಾರಿಯನ್ನು.

೨೩. ನುಡಿಯನುಂ (ಒಂದು ಮಾತನ್ನೂ)+ ಆಡನು+ ಅನ್ಯರು. ಪೂರ್ವಕೃತವು—ಹಿಂದೆ ಮಾಡಿದ ಪಾಪದ ಫಲವು.

ತಂದು; ಮನದಲಿ ದೃಢವಿರಕ್ತಿಯ । ಹೊಂದಿ, ಭೋಗಭ್ರಾಂತಿ ತನಗಳಿ ।
ದಂದು ಮೋಕ್ಷಾಪೇಕ್ಷೆಯಾಗೆ ಮುಮುಕ್ಷುವೆನಿಸುವನು ॥ ೨೪ ॥

ಬಲ್ಲವರ ಬೆಸಗೊಂಬ; ಶಾಸ್ತ್ರದೊ । ಳುಳ್ಳ ಸಾರವ ತಿಳಿವ; ಸಾಧುಗ ।
ಳಲ್ಲಿ ಸಂಗವ ಪಡೆವನವರಾಚರಣೆಯಲಿ ನಡೆವ ; ॥
ಸಲ್ಲಲಿತಸದ್ವಾಸನೆಗಳನು । ಮೆಲ್ಲನಭ್ಯಾಸವನು ಮಾಡುವ ।
ನೊಳ್ಳಿತಹ ಮಾರ್ಗದಲಿ ನಡೆದು ಮುಮುಕ್ಷುವೆನಿಸುವನು ॥ ೨೫ ॥

ಹಿಂದೆ ಬಹುಜನ್ಮಗಳ ಸುಕೃತಗ । ಳಿಂದ ಜನಿಸಿದೆ ವಿಪ್ರಕುಲದಲಿ ; ।
ಮುಂದೆ ತನಗಿನ್ನಾವ ಗತಿಯಹುದೆಂದು ಕಾಣಿಸದು ; ॥
ಎಂದು ಮನದಲಿ ದೃಢವಿವೇಕವ । ತಂದು ಸದ್ಗುರುಪಾದಪದ್ಮವ ।
ಹೊಂದಿ ತನ್ನನು ತಿಳಿಯಲವನೆ ಮುಮುಕ್ಷುವೆನಿಸುವನು ॥ ೨೬ ॥

ಕಪಟಕಲ್ಮಷವಿಲ್ಲ ಬುದ್ಧಿಗೆ ; । ಚಪಲವೃತ್ತಿಯ ಚೇಷ್ಟೆಯಿಲ್ಲತಿ ।
ಕೃಪಣತನದಾಟೋಪದಾಗ್ರಹವೇನು ತನಗಿಲ್ಲ ; ॥
ಶ್ವಪಚಜನಗಳ ಗೋಷ್ಠಿಯೊಳಗಿರ । ದುಪನಿಷದ್ವಾಕ್ಯಾರ್ಥವನು ಗುರು ।
ಕೃಪೆಯೆಲರಿದಿಹ ನಿಪುಣನವನೆ ಮುಮುಕ್ಷು ನೋಡೆಂದ ॥ ೨೭ ॥

ತರುಣಿಯರು ತನ್ನಿದಿರೊಳೆಸೆದಿರೆ । ಕುರುಡನಂತಿಹ ; ಪರರ ನಿಂದೆಯ।
ನೊರೆಯುಲನ್ಯರು ಬಧಿರನಂದದಿ ಕೇಳನದನೊಲಿದು ; ॥
ಕರವಿಕಲನಂದದಲಿ ಹಿರಿದಹ । ಪರರ ಧನವನು ಹಿಡಿಯ ; ದುಷ್ಟರು ।
ಜರಿಯೆ ತನ್ನನು ಮರಳಿ ಜರಿಯ ; ಮುಮುಕ್ಷು ನೋಡೆಂದ ॥ ೨೮ ॥

---

೨೪. ಭೋಗಭ್ರಾಂತಿ- ಪ್ರಾಪಂಚಿಕಪದಾರ್ಥಗಳಿಂದ ಸುಖವನ್ನು ಸಾಧಿಸುತ್ತೇನೆಂಬ ತಪ್ಪು ತಿಳಿವಳಿಕೆಯು. ಅಳಿದಂದು- ನಾಶವಾದಾಗ.

೨೫. ಬೆಸಗೊಂಬ-ಕೇಳುವನು. ಸದ್ವಾಸನೆ- ಒಳ್ಳೆಯ ಕೆಲಸಗಳ ಕಡೆಯ ಒಲವು.

೨೭. ಕಪಟ - ಮೋಸ. ಕಲ್ಮಷ - ಕೆಟ್ಟ ಯೋಚನೆ. (ಇಲ್ಲ + ಅತಿಕೃಪಣತನದ) ಆಗ್ರಹ—ಪಟ್ಟು ಹಿಡಿಯುವದು. ಶ್ವಪಚ- (ನಾಯಿಯನ್ನು ಬೇಯಿಸಿಕೊಂಡು ತಿನ್ನುವ) ಕೊಳಕರು. ಗೋಷ್ಠಿ- ಗುಂಪು.

೨೮. ಬಧಿರ–ಕಿವುಡ. ಕರವಿಕಲ–ಕೈ ಇಲ್ಲದವನು.

ಎಡರಿನಲ್ಲಿ ಬೆಗುಂಪಡುಬ್ಬದೆ, । ಪ್ರೊಡವಿಗಧಿಪತಿಯಾಗೆ ಹಿಗ್ಗದೆ, ।
ಬಡತನದಿ ಕಂಗೆಡದೆ, ವಿತ್ತವ ಗಳಿಸಿ ಗರ್ವಿಸದೆ, ॥
ಮಡದಿ ಮನೆ ಮನೆವಾರ್ತೆ ಮಕ್ಕಳ । ಗೊಡವೆಯಲಿ ಕಡುಮಮತೆಯಿಲ್ಲದೆ।
ದೃಢವಿರಕ್ತಿಯಲಿರಲು ಮೋಕ್ಷವ ಪಡೆವನವನೆಂದ　　　　॥ ೨೯ ॥

ತನಯ, ಕೇಳಧ್ಯಾತ್ಮವಾಸನೆ । ಯನವರತ ಶಾಸ್ತ್ರಾರ್ಥಚಿಂತನೆ, ।
ಘನವಿವೇಕ, ವಿರಕ್ತಿ, ಸದ್ಗುಣವೃತ್ತಿ, ಸತ್ಸಂಗ, ॥
ಅನಘ ಗುರುಶುಶ್ರೂಷೆ ಮೊದಲಾ । ದಿನಿತು ಸದ್ವರ್ತನೆಯೊಳೊಂದಿಹ ।
ಮನುಜನೇ ತತ್ತ್ವಾಧಿಕಾರಿ ಮುಮುಕ್ಷುವೆನಿಸುವನು　　　　॥ ೩೦ ॥

ವೇದಶಾಸ್ತ್ರದ ಹೊಲಬನರಿಯದೆ, । ಭೇದವಾದವ ಮಾಡಿ, ಪಾಷಂ ।
ಡಾದಿಮತದಲಿ ನಡೆದು, ದಂಭಾಚಾರಪರನಾಗಿ, ॥
ಸಾದರದಿ ಸಂಸಾರದಲಿ ಹರಿ । ದಾದ ಯತ್ನದಿ ಕುದಿವ ಖೂಳಗೆ ।
ಬೋಧೆಯೇತಕೆ ? ಮಗನೆ, ಮರ್ಕಟಗೇಕೆ ಮಾಣಿಕವು ?　　　　॥ ೩೧ ॥

ಕಾಯಸುಖವನು ಬಯಸಿ, ಧನವನು । ಸಾಯಸದಲಾರ್ಜಿಸಿ, ಮದಾಂ
ಗಾಯಕರ ಪಾಠಕರ ಭಂಡರ ಭಯಕೆಗಳ ಬಯಸಿ ॥　　　　[ಧರ

---

೨೯. ಎಡರಿನಲ್ಲಿ—ಅಡಚಣೆಗಳೊದಗಿದಾಗ. ಮನೆವಾರ್ತೆ—ಮನೆಯ ವ್ಯವಹಾರ 'ಗೊಡವೆ' ಎಂಬಲ್ಲಿ ಬಹುಕಡೆ 'ಪಡವೆ' ಎಂದಿದೆ. ಗೊಡವೆ- ಸಂಬಂಧ.

೩೦. ವಿವೇಕ- ಪರಮಾತ್ಮನೊಬ್ಬನೇ ಯಾವಾಗಲೂ ನಿಜವಾಗಿ ಇರತಕ್ಕವನೆಂದೂ ಉಳಿದವುಗಳೆಲ್ಲಾ ಬರೀ ತೋರಿಕೆಯವುಗಳಾಗಿದ್ದು ನಾಶವಾಗತಕ್ಕವುಗಳೆಂದೂ ಬಿಡಿಸಿ ತಿಳಿಯುವದು. ಅನಘ—ಪಾಪರಹಿತನಾದ ಶುಕನೇ (ಎಂದು ಸಂಬೋಧನೆ). ಶುಶ್ರೂಷೆ—ಸೇವೆ.

೩೧. ಹೊಲಬು—ಗುರ್ತು. ಪಾಷಂಡ—ನಾಸ್ತಿಕ (ದೇವರೇ ಇಲ್ಲವೆಂದು ಹೇಳುವವನು). ಬೋಧೆಯೇತಕೆ— ಉಪದೇಶವೇಕೆ ? ಪರಮಾರ್ಥವಿಷಯವಾದ ಉಪದೇಶವನ್ನು ಅಧಿಕಾರಿಗೆ ಮಾತ್ರವೇ ಮಾಡಬೇಕೆಂಬ ಸಂಪ್ರದಾಯವಿದೆ. ಭಗವದ್ಗೀತೆಯಲ್ಲಿ "ಇದಂ ತೇ ನಾತಪಸ್ಕಾಯ ನಾಭಕ್ತಾಯ ಕದಾಚನ ॥ ನ ಚಾಶುಶ್ರೂಷವೇ ವಾಚ್ಯಂ ನ ಚ ಮಾಂ ಯೋಽಭ್ಯಸೂಯತಿ ॥" ಎಂಬ ಶ್ಲೋಕದಲ್ಲಿ ತಪಸ್ವಿಗಳಲ್ಲದವರೇ ಮೊದಲಾದವರಿಗೆ ಆತ್ಮಬೋಧೆಯನ್ನು ಹೇಳಬೇಡವೆಂದು ಭಗವಂತನು ಎಚ್ಚರಿಕೆಯನ್ನು ಕೊಟ್ಟಿದ್ದಾನೆ.

ಬಾಯಬಡಿಕರು ಬಗುಳವರು; ನಿ। ಶ್ರೇಯಸಾಭ್ಯಾಸಿಗಳ ನಿಂದಿಪ।
ನಾಯಿಗೇತಕೆ ನವರಸಾನ್ನವು ? ಮಗನೆ, ಕೇಳೆಂದ ॥ ೩೨ ॥

ಮನಕೆ ರಾಗದ್ವೇಷ, ಬುದ್ಧಿಗೆ । ನೆನಹು ದುರ್ವ್ಯಸನದಲಿ, ತನುವಿಗೆ ।
ವನಿತೆಯೊಡಗೂಟದಲಿ ಭೋಗಾಸಕತಿಯಾಗಿರಲು ॥
ತನಯ, ತತ್ತ್ವಜ್ಞಾನಚಿಂತೆಯ । ಘನತೆ ದೊರಕುವದೆಂತು ? ಮಾಯಾ ।
ಜನಿತದುರ್ವಾಸನೆಯಲೊಂದಿಹ ಮರುಳುಮಾನವಗೆ ॥ ೩೩ ॥

ಕನಸಿನೊಳು ತೋರುವದು ಜಾಗ್ರದ। ನೆನಹು; ದುರ್ವಾಸನೆಯ ಕೋಟಲೆ।
ಮನಕೆ ಬಿಡದದು ; ಜನ್ಮಜನ್ಮಾಂತರಗಳಿಂದಾದ ॥
ಅನುಭವದ ವಾಸನೆಗಳಿಂದಲೆ । ಜನಿಸಿದೀ ಸಂಸಾರಲಂಪಟ ।
ದನುವು ತಾನರಿದೆನಿಪುದಾತ್ಮಜ್ಞಾನಶೂನ್ಯರಿಗೆ ॥ ೩೪ ॥

ಕಾಲ ಸಂಕಲೆಯಿರಲು ಕೊರಳಿಗೆ । ಕೋಳವನು ಬಲವಾಗಿ ತೊಡಿಸುವ।
ವೋಲು ಬಹುವಿಧವಾದ ಸಂಸೃತಿಬಂಧ ಬಿಗಿದಿರಲು ॥
ಮೇಲೆ ವಿಷಯಾಸಕ್ತನಾದೊಡೆ । ಹೇಳಲೇನದ ? ಮೋಕ್ಷಶಾಸ್ತ್ರದ ।
ಗಾಳಿಯೆಂಬುದು ಸೋಂಕಿದರೆ ಸೈರಿಸನು ಕೇಳೆಂದ ॥ ೩೫ ॥

ಮೊದಲೆ ಮರ್ಕಟ, ಮೇಲೆ ಮದ್ಯದ। ಮದವೆದೆಯ ಹಿಡಿದಿರಲು, ವೃಶ್ಚಿಕ।
ತುದಿಯ ಕಾಲನು ಕಚ್ಚಿದರೆ ಕುಣಿದಾಡುವಂದದಲಿ ॥

---

೩೨. ಸಾಯಸದಲಿ (ಸ + ಆಯಸದಲಿ) ಕಷ್ಟದಿಂದ. ಪಾಠಕರ—ಹೊಗಳುವ ಭಟ್ಟರ. ಬಗುಳುವರು—ಸಾಧಕರನ್ನು ಹೀಯಾಳಿಸುವರು. ನಿಶ್ರೇಯಸಾಭ್ಯಾಸಿಗಳ—ಮೋಕ್ಷಕ್ಕಾಗಿ ಸಾಧನಗಳನ್ನು ಮಾಡುವವರನ್ನು ನವರಸಾನ್ನ— ಆಗತಾನೆ ಮಾಡಿದ (ಉಪ್ಪು, ಹುಳಿ, ಕಾರ, ಸಿಹಿ, ಕಹಿ, ಒಗರು ಎಂಬ) ಷಡ್ರಸಗಳಿಂದ ಕೂಡಿದ ಆಹಾರ.

೩೩. ನೆನಹು—ತೊಳಲಿಕೆಯು. ದುರ್ವ್ಯಸನದಲಿ—ಕೆಟ್ಟ ಚಟಗಳಲ್ಲಿ. ಮಾಯಾಜನಿತದುರ್ವಾಸನೆಯಲಿ—ಬರೀ ತೋರಿಕೆಯ ವಿಷಯಗಳನ್ನು ಹೇಗೋ ನಿತ್ಯವೆಂದು ನಂಬಿ ಮೋಸಹೋಗುವದರಿಂದ ಹುಟ್ಟಿದ ಕೆಟ್ಟ ಚಟಗಳಲ್ಲಿ.

೩೪. ಸಂಸಾರಲಂಪಟದ ಅನುವು—ಸಂಸಾರದ ತೊಳಲಿಕೆಯ ಮೋಹಕತ್ವವು. ಅರಿದೆನಿಪುದು—ಹೋಗಲಾಡಿಸಿಕೊಳ್ಳುವದಕ್ಕೆ ಅಸಾಧ್ಯವೆನಿಸುವದು.

೩೫. ಕೋಳ—ಬೇಡಿ. ಮೇಲೆ—ಇದರ ಜೊತೆಗೆ.

ಅಧಿಕಧನ, ಸಂಪತ್ತು, ಯೌವನ । ವೊದಗಿರಲು ವನಿತಾದಿವಿಷಯಾ ।
ಸ್ಪದನೆನಿಸುತೊಡಲರಿಯದವಗಧ್ಯಾತ್ಮವೇಕೆಂದ ॥ ೩೬ ॥

ಮರುಳು ಹಿಡಿದವ ಮದ್ದುಗುಣಿಕೆಯ। ನರೆದು ಕುಡಿವಂದದಲಿ ಮಾಯಾ।
ವರಣದಲಿ ಮರೆದಿರ್ದು ತನ್ನನು ಮೂಢಭಾವದಲಿ ॥
ಪರಿಪರಿಯ ಸಂಸಾರವಿಷಯದಿ । ಹಿರಿದು ಬಿಗಿವಡೆದಿರ್ಪ ಮನುಜಗೆ ।
ದೊರಕುವದೆ ಪರತತ್ತ್ವ ? ತೆರಳೆಯ ಹುಳುವಿನಂತಿಹಗೆ ॥ ೩೭ ॥

ಒರಳೊಳಗೆ ತಲೆಯಿರ್ದೊಡೊನಕೆಯ । ಭರದ ಗಾಯವ ತಪ್ಪಿಸಲ್ಕಾ ।
ರರಿವರ್ಥೈ ? ಬಹುದುಃಖಸಂಗ್ರಹವಾದ ಸಂಸೃತಿಯ ॥
ಶರಧಿಯೊಳು ಬಿದ್ದವಗದೆಂದಿಗೆ । ಪರಿಹರಿಸಲಾಗುವದು ಜರೆ, ಮರೆ, ।
ಮರಣ, ಜನ್ಮಂಗಳನು ? ತತ್ತ್ವವನರಿಯದವಗೆಂದ ॥ ೩೮ ॥

ಕೊರಳ ಸುತ್ತಿದ ಹಾವು ಕಚ್ಚದೆ। ಮರಳುವದೆ? ಮಾಯಾಪ್ರಬಂಧದಿ ।
ಹೊರಳುತಿಹ ಪಾಮರಗೆ ಪರಿಹರವಹುದೆ ಭವಬಂಧ ? ॥
ಕುರುಡ ಕಾಣದಗಾಧಕೂಪದೊ । ಳುರುಳುವಂತೆ ವಿವೇಕಶೂನ್ಯನು ।
ತಿರುಗುವನು ಭವಮಾಲೆಯಲಿ ಮೋಕ್ಷವನಪೇಕ್ಷಿಸದೆ ॥ ೩೯ ॥

ಕಾಣವಗೆ ಕನ್ನಡಿಯದೇತಕೆ ? । ಗಾಣದೆತ್ತಿಗೆ ಗೆಜ್ಜೆಯೇತಕೆ ? ।
ಗೋಣಿಗೇತಕೆ ಗವಸಣಿಗೆ ? ನರಿಗೇಕೆ ಸುರಲೋಕ ? ॥

---

೩೬, ಮದ್ಯದ—ಹೆಂಡ ಮೊದಲಾದ ಅಮಲೇರುವ ವಸ್ತುಗಳ. ಒಡಲರಿಯದವಗೆ—ಮೈಮೇಲೆ ಎಚ್ಚರವಿಲ್ಲದವನಿಗೆ. ಈ ಪದ್ಯದಲ್ಲಿರುವ ಮರ್ಕಟದ ಉದಾಹರಣೆಯನ್ನು ಶ್ರೀಸ್ವಾಮಿವಿವೇಕಾನಂದರು ತಮ್ಮ ರಾಜಯೋಗದ ಉಪನ್ಯಾಸದಲ್ಲಿಯೂ ಉಪಯೋಗಿಸಿದ್ದಾರೆ.

೩೭. ಮರುಳು—ದೆವ್ವ. ಮದ್ದುಗುಣಿಕೆ—ದುತ್ತೂರ (ಇದನ್ನು ತಿಂದರೆ ಹುಚ್ಚು ಹಿಡಿಯುವದು). ಮಾಯಾವರಣದಲಿ—ಅಜ್ಞಾನವೆಂಬ ಮುಸುಕಿನೊಳಗೆ ಸಿಕ್ಕಿದವನಾಗಿ. ತನ್ನನು—ಯಾವ ಸಂಬಂಧವೂ ಇಲ್ಲದೆ ಚೈತನ್ಯಸ್ವರೂಪನಾಗಿರುವ ತನ್ನನ್ನು. ತೆರಳೆಯ ಹುಳು—ಸಗಣಿಯನ್ನು ಉಂಡೆ ಮಾಡಿ ಉರುಳಿಸಿಕೊಂಡು ಹೋಗುವ ಹುಳು. 'ತೆರಳೆಯ ಹುಳುವಿನಂತಿಹಗೆ' ಎಂಬುದು 'ಮನುಜಗೆ' ಎಂಬುದಕ್ಕೆ ವಿಶೇಷಣ.

೩೯. ಮರಳುವದೆ—ಹಿಂದಕ್ಕೆ ಹೋಗುವದೆ ? ಮಾಯಾಪ್ರಬಂಧದಿ— ಅಜ್ಞಾನವೆಂಬ ಬಿಗಿತದಿಂದ. ಭವಮಾಲೆ—ಹುಟ್ಟುಸಾವುಗಳ ಚಕ್ರ.

ರಾಣಿಯೇಕೆ ನಪುಂಸಕಗೆ ? ಗೀ । ರ್ವಾಣಭಾಷೆಯದೇಕೆ ಗೊರವಗೆ ? ।
ಕೇಣವಿಲ್ಲದ ವಿಷಯಲಂಪಟಗೇಕೆ ನಿರ್ವಾಣ ॥ ? ॥ ೪೦ ॥

ಎತ್ತು ತೆಂಗಿನ ಕಾಯ ಬಲ್ಲುದೆ ? । ಕತ್ತೆಯರಿವುದೆ ಕತ್ತುರಿಯ? ನೆರೆ ।
ಬುತ್ತಿಗಳ್ಳರಿಗೇಕೆ ಸತ್ಯವ್ರತ, ಸದಾಚಾರ ? ॥
ದತ್ತಪುತ್ರನಿಗೇತಕ್ಕೆ ಪಿತೃ । ಭಕ್ತಿ ? ಮಾಲ್ಯಸುಗಂಧವನಿತಾ ।
ಸಕ್ತರಿಗೆ ಪರತತ್ತ್ವಚಿಂತೆಯದೇಕೆ ? ಹೇಳೆಂದ ॥ ೪೧ ॥

ನರಿಗಳೂರನು ಸೇರುವವೆ ? ಭಾ । ಸ್ಕರನ ಬೆಳಕಿಗೆ ಗೂಗೆಗಳು ಸಂ ।
ಚರಿಸುವವೆ ? ಬೆಳದಿಂಗಳಿಷ್ಟವೆ ಜಾರಚೋರರಿಗೆ ? ॥
ಸರಸಕವಿತಾಪ್ರೌಢಿಯೆಲ್ಲರಿ । ಗರಿಯಲಹುದೇ ? ದುರ್ವ್ಯಸನದಿಂ ।
ದುರಿವ ಪಾತಕಿಗೇತಕ್ಕೆ ನಿಶ್ರ್ಶೇಯಸಾಭ್ಯಾಸ ? ॥ ೪೨ ॥

ಎತ್ತಿಗುತ್ತಮಲಿಂಗಮುದ್ರೆಯ । ನೊತ್ತಲಾಗದ ಬಸವನೆಂಬರು; ।
ಕತ್ತೆಯನು ಹಿಡಿತಂದು ಮುದ್ರೆಯನೊತ್ತಲಾ ಕತ್ತೆ ॥
ಕತ್ತೆಯಲ್ಲದೆ ಬಸವನಪ್ಪುದೆ ? । ಸತ್ಯಸಂಧಗೆ ಯೋಗ್ಯವಲ್ಲದೆ ।
ತೊತ್ತುಬಡಿಕಂಗೇಕೆ ತತ್ತ್ವವಿಚಾರ ? ಹೇಳೆಂದ ॥ ೪೩ ॥

ಚರ್ಮಖಂಡವ ಕಡಿವ ಶುನಕಗೆ । ಕಮ್ಮನೆಯ ತುಪ್ಪವದರೋಚಕ; ।
ಕರ್ಮಕಿಂಕರರಾದ ಕಾಮ್ಯಫಲಾಭಿಲಾಷರಿಗೆ ॥
ಬ್ರಹ್ಮವಿದ್ಯಾಭ್ಯಾಸದಲಿ ಮನ । ನೆಮ್ಮದದರಿಂದಾತ್ಮಸುಖವದು ।
ದುರ್ಮತಿಗಳಿಗೆ ದೂರವಾಗಿಹುದರಸಿ ನೋಡಿದರೆ ॥ ೪೪ ॥

---

೪೦. ಗವಸಣಿಗೆ—ಮೇಲುಚೀಲ. ಗೊರವ—ಮೂಢ. ಕೇಣವಿಲ್ಲದ—ಮಿತಿಯಿಲ್ಲದ. ನಿರ್ವಾಣ—ಮೋಕ್ಷ.

೪೧. ಬುತ್ತಿಗಳ್ಳ—ಅನ್ನವನ್ನು ಕದಿಯುವವನು.

೪೨. 'ದುರಿವ' ಎಂಬಲ್ಲಿ 'ದಿರುವ ಎಂದೂ ಕೆಲವು ಕಡೆ ಇದೆ.

೪೩. ಬಸವ—ಈಶ್ವರನ ವಾಹನವಾದ ವೃಷಭ. ಸತ್ಯಸಂಧ—ಸತ್ಯಸ್ವರೂಪನಾದ ಪರಮಾತ್ಮನನ್ನೇ ಯಾವಾಗಲೂ ಅನುಸಂಧಾನ ಮಾಡುವವನು ಅಥವಾ ಯಾವಾಗಲೂ ಸತ್ಯವಾದ ಮಾತನ್ನೇ ಆಡುವ ವ್ರತವನ್ನು ಹಿಡಿದಿರುವವನು. ತೊತ್ತುಬಡಿಕ—ದೀನನಾಗಿ ವಿಷಯಗಳಿಗೆ ಅಳುತನದಲ್ಲಿರುವವನು.

ಜ್ಞಾನದಭ್ಯಾಸವನು ಮಾಡದ । ಮಾನವನೆ ತಿಳಿ ಹೀನಕುಲದವ ; ।
ತಾನೆ ಬ್ರಹ್ಮವದೆಂದು ಕಾಣದ ನರನೆ ಪಾಮರನು ; ॥
ಸ್ವಾನುಭವವಿಲ್ಲದ ಮನುಷ್ಯನು । ತಾನೆ ದನುಜನು ; ಗುರುಪದಾಬ್ಜ । ।
ಧ್ಯಾನನಿಷ್ಠೆಯ ಭಕ್ತಿಯಿಲ್ಲದ ಮರ್ತ್ಯನವ ವ್ಯರ್ಥ ॥ ೪೫ ॥

ಏನ ಕಲಿತೊಡದೇನು? ಯತ್ನದ । ಲೇನ ಮಾಡಿದೊಡೇನು? ಸರ್ವವು ।
ಕಾನನದ ಬೆಳದಿಂಗಳಂದದಿ ವ್ಯರ್ಥವಾಗಿಹುದು ; ॥
ಸ್ವಾನುಭವಸುಜ್ಞಾನವಿಲ್ಲದ । ಮಾನವನು ಬದುಕಿದೊಡದೇನವ ।
ಶ್ವಾನಸೂಕರರಂತೆ ಹೊಟ್ಟೆಯ ಹೊರೆದುಕೊಂಡಿಹನು ॥ ೪೬ ॥

ವೇದಶಾಸ್ತ್ರವ ವಿಪ್ರ, ಜೀವವ । ಮೇದಿನೀಪತಿ, ವೈಶ್ಯ ವಸ್ತುವ, ।
ಪಾದಜನು ಪರಿಚರಿಯಶಕ್ತಿಯ, ಸೂಳೆ ಚೆಲುವಿಕೆಯ ॥
ಆದಿತೇಯರು ಸ್ವಪ್ರಭಾವವ । ಕಾದ ಹೊಟ್ಟೆಗೆ ಕ್ರಯವ ಮಾಳ್ಪರು ।
ಬೋಧವಿರಹಿತರಾದ ಶಿಶ್ನೋದರಪರಾಯಣರು ॥ ೪೭ ॥

ಕೆಲರು ಜಪತಪಗಳಲಿ, ಕೆಲಬರು । ಬಲುಮೆಯಹ ಶಾಸ್ತ್ರದಲಿ, ಕೆಲ
ಹಲವುವಿಧಯಾಗದಲಿ, ಕೆಲಬರು ದಾನಧರ್ಮದಲಿ ॥ [ಬರು ।

---

೪೪. ಅರೋಚಕ—ರುಚಿಸದೆ ಹೋಗುವದು. ಕರ್ಮಕಿಂಕರರು—ಕರ್ಮವೇ ತಮಗೆ ಸರ್ವೇಷ್ಟಗಳನ್ನೂ ಕೊಡತಕ್ಕದ್ದೆಂದು ಅದಕ್ಕೆ ದಾಸರಾದವರು. ನೆಮ್ಮದು—ನೆಡುವದಿಲ್ಲ. ಅರಸಿ—ಹುಡುಕಿ (ವಿಚಾರಮಾಡಿ).

೪೫. ಸ್ವಾನುಭವವಿಲ್ಲದ—ತನ್ನ ಆತ್ಮವು ಬ್ರಹ್ಮವೆಂಬದನ್ನು ತನ್ನ ಅನುಭವದಲ್ಲಿ ಇಟ್ಟುಕೊಳ್ಳದೆ ಇರುವ.

೪೬. ಸ್ವಾನುಭವಸುಜ್ಞಾನವಿಲ್ಲದ—ಜ್ಞಾನಸ್ವರೂಪನಾದ ಪರಮಾತ್ಮನನ್ನು ತನ್ನ ಅನುಭವಕ್ಕೆ ತಂದುಕೊಳ್ಳದೆ ಇರುವ. ಶ್ವಾನಸೂಕರರಂತೆ—ನಾಯಿ ಮತ್ತು ಹಂದಿ ಇವುಗಳ ಹಾಗೆ. ಹೊರೆದುಕೊಂಡಿಹನು—ಕಾಪಾಡಿಕೊಂಡಿರುವನು.

೪೭. ಮೇದಿನೀಪತಿ—ಕ್ಷತ್ರಿಯನು (ಇವನು ತನ್ನ ಹೊಟ್ಟೆಯ ಪಾಡಿಗಾಗಿ ಯುದ್ಧದಲ್ಲಿ ಮಡಿಯುವದಕ್ಕೂ ಸಿದ್ಧನಾಗುವನು). ಪಾದಜನು— ಶೂದ್ರನು ("ಪದ್ಭ್ಯಾಂ ಶೂದ್ರೋ ಅಜಾಯತ" ಎಂಬ ಶ್ರುತಿಯಂತೆ ಪಾದದಿಂದ ಹುಟ್ಟಿದವನು). ಆದಿತೇಯರು—ದೇವತೆಗಳು (ಇವರು ತಮಗಾಗಿ ಯಾಗದಲ್ಲಿ ಹೋಮವನ್ನು ಮಾಡಿದವರಿಗೆ ವರವನ್ನು ಕೊಡುವರು). ಕಾದ ಹೊಟ್ಟೆಗೆ—ಹಸಿದ ಹೊಟ್ಟೆಗಾಗಿ. ಶಿಶ್ನೋದರಪರಾಯಣರು—ಸ್ತ್ರೀ ಪುರುಷರ ಸಂಯೋಗದಿಂದಾಗುವ ಸುಖ, ಹೊಟ್ಟೆಯ ಪಾಡು ಇವುಗಳೇ ಹೆಚ್ಚಿನವೆಂದು ತಿಳಿದಿರುವವರು.

ಬಳಲುವರು ಬಹುಕಷ್ಟದಿಂದಲಿ । ಗಳಿಸಲೆಂದೇ ವಿಷಯಸುಖಗಳ ।
ತಿಳಿಯಲರಿಯದೆ ನಿತ್ಯಸುಖವನು ಸುಲಭಮಾರ್ಗದಲಿ ॥ ೪೮ ॥

ಮೀನು ನೀರೊಳಗಿರ್ದೊಡೇನೈ? । ಧ್ಯಾನವನು ಬಕ ಮಾಡಲೇನದು? ।
ಕಾನನವನಾಶ್ರಯಿಸಿ ಮರ್ಕಟವಿದ್ದು ಫಲವೇನು ॥
ಮೌನದಲಿ ಕೋಗಿಲೆಯಿರಲ್ಕದ । ಕೇನು ಫಲ ? ಸುಜ್ಞಾನವಿಲ್ಲದ ।
ಸ್ನಾನ ಮೊದಲಾದವುಗಳಿಂ ಫಲವಿಲ್ಲ ಕೇಳೆಂದ ॥ ೪೯ ॥

ಹುತ್ತ ಬಡಿದರೆ ಹಾವು ಸಾವುದೆ । ವ್ಯರ್ಥವಾದುಪವಾಸ ಮೊದಲಾ ।
ಗುತ್ತಲಿಹ ವ್ರತಗಳಲಿ ದೇಹವ ದಂಡಿಸಲು ಬರಿದೆ ॥
ಮುಕ್ತಿ ದೊರಕುವದೇ? ವಿವೇಕ, ವಿರಕ್ತಿ, ಶಮೆ,ದಮೆ, ಗುರುಪದಾಂಬುಜ ।
ಭಕ್ತಿಯಿಲ್ಲದ ಕಾಮ್ಯಕರ್ಮಾಸಕ್ತರಿಂಗೆಂದ ॥ ೫೦ ॥

ಪಶುಗಳಿಗು ಮನುಜರಿಗು ಭೇದವ । ನುಸುರಬಾರದದೇಕೆನಲು ಸರಿ ; ।
ಹುಸಿಯ ಭೌತಿಕದೇಹ, ನಿದ್ರಾಹಾರ, ಭಯ, ಸಂಗ, ॥

---

೪೮. ಬಲುಮೆಯಹ—(ಬುದ್ಧಿಯ) ಬಲವನ್ನುಂಟುಮಾಡುವಂಥ. ಗಳಿಸಲೆಂದೇ—ಸಂಪಾದಿಸಲೆಂದೇ. ವಿಷಯಸುಖಗಳ—ಶಬ್ದ, ಸ್ಪರ್ಶ, ರೂಪ, ರಸ, ಗಂಧ ಎಂಬ ಐದು ವಿಷಯಗಳಿಂದಾಗುವ ಅನಿತ್ಯಸೌಖ್ಯಗಳನ್ನು.

೪೯. ಫಲವಿಲ್ಲ—(ತಾತ್ಪರ್ಯ) ಮೀನಿನ ಸ್ನಾನ ಮೊದಲಾದವುಗಳು ಅವಕ್ಕೆ ಪರಲೋಕದ ಸುಖವನ್ನು ಕೊಡುವದಿಲ್ಲ. ಅದರಂತೆ ಜ್ಞಾನವಿಲ್ಲದೆ ಮಾಡಿದ ಸ್ನಾನಾದಿಗಳೂ ಮನುಷ್ಯನಿಗೆ ನಿತ್ಯಸುಖವನ್ನು ಕೊಡುವದಿಲ್ಲ.

೫೦. ಮುಕ್ತಿದೊರಕುವದೇ—(ತಾತ್ಪರ್ಯ) ವಿವೇಕಾದಿಯಾದ ಸಾಧನಗಳಿಲ್ಲದೆ ಯಾವದಾದರೊಂದು ಬಯಕೆಯಿಂದ ಸುಮ್ಮನೆ ಉಪವಾಸಾದಿಗಳನ್ನು ಮಾಡುವದು ಬಂಧನಾಶಕವಾಗಲಾರದು.

೫೧. ಸರಿ—ಹಾಗೆ ಭೇದವನ್ನು ಮಾಡದೆ ಇರುವದು ಯೋಗ್ಯವು. ಸಂಗ—ಸ್ತ್ರೀಪುರುಷರ ಕೂಟದಿಂದಾಗುವ ಸುಖ. ವ್ಯಸನ—ಚಟ. ಪಶುಗಳಿಗೂ ಮನುಷ್ಯರಿಗೂ ಭೇದವಿಲ್ಲವೆಂಬ ಈ ಕಲ್ಪನೆಯು " ಆಹಾರನಿದ್ರಾಭಯಮೈಥುನಂ ಚ ಸಾಮಾನ್ಯಮೇತತ್ಪಶುಭಿರ್ನರಾಣಾಂ " ಎಂಬ ಸುಭಾಷಿತದ ಶ್ಲೋಕವನ್ನು ನೆನೆಪು ಕೊಡುತ್ತದೆ. ವಿಷಯಬುದ್ಧಿ—ಯಾವಾಗಲೂ ಶಬ್ದಸ್ಪರ್ಶಾದಿವಿಷಯಗಳನ್ನೇ ಚಿಂತಿಮಾಡುವ ಬುದ್ಧಿ.

೫೨. ಈಶ್ವರಾಜ್ಞಾಪಾಶಪರಿವೃತರು—ಈಶ್ವರನು ವೇದದಲ್ಲಿ ಮಾಡಿರುವ ಕರ್ಮರೂಪವಾದ ಆಜ್ಞೆಯೆಂಬ ಹಗ್ಗದಿಂದ ಸುತ್ತಲ್ಪಟ್ಟವರು. ಉಸುರಲೇನು— ಹೇಳಲೇನು?

ವ್ಯಸನ ಮೊದಲಾದವು ಸಮಾನಗ । ಳೆಸೆದು ತೋರ್ಪುವು ; ನಿತ್ಯದೊಳು ತಾ।
ವಿಷಯಬುದ್ಧಿಯೆನುಳಿದವನೆ ಪಶುಪತಿಯವೊಲ್ಮೆರೆವ ॥ ೫೧ ॥

ವಿಷಯಲಂಪಟರಾಗಿ ಸಂಸೃತಿ । ವ್ಯಸನದಲ್ಲಿಹ ಜೀವರೆಲ್ಲರು ।
ಪಶುಗಳೆನಿಸುವರೀಶ್ವರಾಜ್ಞಾಪಾಶಪರಿವೃತರು ; ॥
ಉಸುರಲೇನದನೊಡೆಯನಿಂ ಪ್ರೇ । ರಿಸಿದನಡ್ವನವೋಲು ನರಕವ ।
ನೆಸೆವ ಸ್ವರ್ಗವನೆರಡುಕಡೆಯಾಡುತ್ತಲಿಹರೆಂದ ॥ ೫೨ ॥

ಅದು ನಿಮಿತ್ತದಿ ಮಗನೆ, ಅಧ್ಯಾತ್ಮದಲಿ ಬಿಡದಾಸಕ್ತರಾಗಿಹ ।
ಸದುಹೃದಯರಿಂಗೊಲಿದು ಪೇಳೀ ಅನುಭವಾಮೃತವ ; ॥
ಕದಡುಕಲ್ಮಷಚಿತ್ತರಾದರಿ । ಗಿದನುಸುರದಿರು ; ಮುಕ್ತಿಮಾರ್ಗಾ ।
ಸ್ಪದಕೆ ಸಹಜಾನಂದಗುರುಪದಭಕ್ತಿಯೇ ಸುಲಭ ॥ ೫೩ ॥

ಕಾಲ, ಕಾಲಾತೀತ, ಕಲಿಮಲ । ಜಾಲಮೂಲೋನ್ಮೂಲ, ನಿಗಮವಿ ।
ಶಾಲನುತ, ನಿಶ್ಚಲ, ನಿಜಾತ್ಮ, ನಿರಾಳ, ನಿರ್ಮಾಯ, ॥
ಭಾಳಲೋಚನ, ಭರ್ಗ, ಭಸಿತೋ । ದ್ಧೂಳನ, ಭವೌಘಪ್ರಭೇದನ, ।
ಶೂಲಧರ, ಶ್ರೀ ಮಲ್ಲಿಕಾರ್ಜುನ, ಸಲಹು ಮೂಜಗವ ॥ ೫೪ ॥

ಶ್ರೀಮತ್ಪರಮಹಂಸ ಪರಿವ್ರಾಜಕಾಚಾರ್ಯ ಸಹಜಾನಂದ ಗುರುವರ್ಯ
ಪಾದಕಮಲಭೃಂಗಾಯಮಾಣ ಸಹವಾಸಿ ಮಹಲಿಂಗರಂಗ
ವಿರಚಿತವಾದ ಅನುಭವಾಮೃತವೆಂಬ ಗ್ರಂಥದಲ್ಲಿ ಅಧಿಕಾರ
ಲಕ್ಷಣವೆಂಬ ಮೊದಲನೆಯಧ್ಯಾಯವು ಮುಗಿದುದು.

---

ಅನಡ್ವ—ಎತ್ತು. ಎಡೆಯಾಡುತ್ತಲಿಹರು—ವಿಷಯದಲ್ಲಿ ಆಸಕ್ತಿಯಿರುವವರು ಸ್ವರ್ಗಕ್ಕೂ ನರಕಕ್ಕೂ ಹೋಗಿ ಬರುತ್ತಿರುವರು.

೫೪. ಕಾಲ—ಕಾಲಸ್ವರೂಪನು. ಕಾಲಾತೀತ—ಕಾಲವನ್ನು ಮೀರಿದವನು. ಕಲಿಮಲಜಾಲಮೂಲೋನ್ಮೂಲ—ಕಲಿಕಲ್ಮಷವೆಂಬ ಬಲೆಯ ಮೂಲವನ್ನು ಕಿತ್ತುಹಾಕುವವನು. (ಅಥವಾ ಕಾಲಕಾಲ—ಯಮನಿಗೆ ಯಮನಾಗಿರುವ. ಅತೀತಕಲಿಮಲಜಾಲ—ಕಲಿಕಲ್ಮಷಸಮೂಹವನ್ನು ದಾಟಿರುವ. ಮೂಲೋನ್ಮೂಲ—ಸಂಸಾರದ ಬೇರನ್ನು ಕಿತ್ತುಹಾಕುವ.) ನಿರಾಳ—ಯಾವ ತಾಪತ್ರಯದ ಯೋಚನೆಯೂ ಇಲ್ಲದವನು. ಭವೌಘಪ್ರಭೇದನ—ಸಂಸಾರದ ಕಷ್ಟಗಳ ಸಮೂಹವನ್ನು ಹೋಗಲಾಡಿಸುವವನು. ಸಲಹು ಮೂಜಗವ—ಇದು " ಲೋಕಾಸ್ಸಮಸ್ತಾಸ್ಸುಖಿನೋ ಭವನ್ತು " ಎಂಬ ಸಂಸ್ಕೃತ ಶ್ಲೋಕಭಾಗದ ಅನುವಾದವು.

## ಎರಡನೆಯ ಅಧ್ಯಾಯ

### ವೈರಾಗ್ಯಪ್ರಕರಣ

ಸೂ|| ಕಷ್ಟವಹ ಸಂಸಾರಧರ್ಮವ | ದಿಷ್ಟವಲ್ಲವೆನುತ್ತ ತನಯಗೆ |
ಶಿಷ್ಟವೇದವ್ಯಾಸಮುನಿಪತಿ ಬೋಧಿಸಿದನೊಲಿದು ||

ಸರಸಿರುಹಭವಶಾರ್ಙ್ಗಿರುದ್ರೇ | ಶ್ವರಸದಾಶಿವರಾವಳೊಬ್ಬಳ |
ಚರಣಪೀಠದ ಕೆಳಗೆ ಕರಗಳ ಮುಗಿದುಕೊಂಡಿಹರು ||
ಆರರೆ ! ಆಕೆಯದಾವನಂಘ್ರಿಗೆ | ಶಿರವ ಬಾಗುವಳಾ ಮಹಾತ್ಮನ |
ನರಕುರಿಗಳೆಂತರಿವರೈ ಶ್ರೀಗಿರಿಯಧೀಶ್ವರನ ? || ೧ ||

ಭಂಡರಿಗೆ, ಬಹುಭಾಷಿಗಳಿಗೆ, ಪ್ರ | ಚಂಡರಿಗೆ, ಪರಸತಿಯ ಬೇಟೆಯ |
ಪುಂಡತನದಲಿ ಹೆಂಡಿರನು ಬಿಟ್ಟಿರ್ಪ ಪೋಟರಿಗೆ, ||
ಕುಂಡಗೋಳಕರಿಂಗೆ, ಸತತವು | ಕಂಡವರ ಕೂಡೆಲ್ಲ ಕಲಹಿಪ |
ಮುಂಡರಿಗೆ ಹೇಳದಿರು ಮರೆದೀ ಅನುಭವಾಮೃತವ || ೨ ||

---

೧. ರುದ್ರ, ಈಶ್ವರ, ಸದಾಶಿವ--ಇವು ಈಶ್ವರನ ಬೇರೆ ಬೇರೆ ಮೂರ್ತಿವಿಶೇಷಗಳು. ಆವಳೊಬ್ಬಳ—ಸತ್ತ್ವರಜಸ್ತಮೋಗುಣಾತ್ಮಕಳಾದ ಆದಿಶಕ್ತಿಯ. ಇಲ್ಲಿ ಆದಿಶಕ್ತಿ ಎಂಬ ಮಾತಿನಿಂದ ರೂಢಿಯಲ್ಲಿರುವ ಶಾರದಾ, ಲಕ್ಷ್ಮಿ ಮೊದಲಾದ ಸಗುಣರೂಪವನ್ನು ಗ್ರಹಿಸಬಾರದು. ಏಕೆಂದರೆ ಆ ಸಗುಣಶಕ್ತಿಯ ರೂಪವಿಶೇಷಗಳು ಬ್ರಹ್ಮ, ವಿಷ್ಣು ಮೊದಲಾದವರಿಗೆ ಪತ್ನಿಯ ಸ್ವರೂಪಗಳಾಗಿವೆ. ಈ ಪದ್ಯದಲ್ಲಿ ಆ ಬ್ರಹ್ಮ, ವಿಷ್ಣು ಮೊದಲಾದವರೆಲ್ಲ ಆಕೆಗೆ ಕೈಮುಗಿಯುವದರಿಂದ ಆಕೆಯು ಆ ಬ್ರಹ್ಮ, ವಿಷ್ಣು ಮೊದಲಾದವರ ಉತ್ಪತ್ತಿಗೂ ಕಾರಣಳಾದ ಆದಿಶಕ್ತಿಯಾಗಿರಬೇಕು. ಶ್ರೀಗಿರಿಯಧೀಶ್ವರನ—ಈ ಮಾತು ಮಲ್ಲಿಕಾರ್ಜುನನೆಂಬ ಈಶ್ವರನ ಸುಗುಣಮೂರ್ತಿಗೆ ಅನ್ವಯಿಸಿದರೂ ಇಲ್ಲಿ ಆ ಅರ್ಥವನ್ನು ತೆಗೆದುಕೊಳ್ಳಬಾರದು. ಏಕೆಂದರೆ ಈಶ್ವರನ ಸುಗುಣಮೂರ್ತಿಗಳಾದ ರುದ್ರ, ಈಶ್ವರ, ಸದಾಶಿವ ಇವರೆಲ್ಲರಿಂದ ಕೈಮುಗಿಸಿಕೊಳ್ಳುವ ಆದಿಶಕ್ತಿಯಿಂದ ಉಪಚಾರವನ್ನು ಪಡೆಯುವ ಸ್ವರೂಪವು ಪ್ರಕೃತದ ವಿಷಯವಾಹ್ದರಿಂದ ಎಲ್ಲ ಸಗುಣಸ್ವರೂಪಗಳಿಗೂ ಆಧಾರವಾದ ನಿರ್ಗುಣಬ್ರಹ್ಮದ ಸ್ವರೂಪವನ್ನು ಇಲ್ಲಿ ಗ್ರಹಿಸಬೇಕು. ಉಪಾಸಕರು ಪರಬ್ರಹ್ಮನ ರೂಪವನ್ನು ತಮ್ಮ ಉಪಾಸ್ಯದೇವತೆಯಾಗಿ ವರ್ಣಿಸುವದುಂಟು.

ಸತ್ಯವಚನವ ನುಡಿವರಿಗೆ, ಸುವಿ । ರಕ್ತರಿಗೆ, ಸುಖದುಃಖದಲಿ ಸಮ ।
ಚಿತ್ತರಿಗೆ, ಸಕಲರಲಿ ಕರುಣಾವೃತ್ತಿಯುಳ್ಳರಿಗೆ, ॥
ಉತ್ತಮಶ್ಲೋಕರಿಗೆ, ಸದ್ಗುರು । ಭಕ್ತರಿಗೆ, ಪರತತ್ತ್ವಚಿಂತಾ ।
ಸಕ್ತರಿಗೆ ಬೋಧಿಸುವದೊಲಿದೀ ಅನುಭವಾಮೃತವ ॥ ೩ ॥

ಕೇಳು ಶುಕಯೋಗೀಂದ್ರ, ಸಂಸೃತಿ । ಹಾಳುವಾದವಲಾ ! ವಿಚಾರಿಸೆ ।
ಹೇಳಲೇನದು ಬಯಲ ಬಳಲಿಕೆ, ನಿಷ್ಫಲಾರಂಭ ; ॥
ಕಾಳು ಸತಿಸುತಗೃಹಧನಂಗಳು । ಗಾಳಿಗೊಡ್ಡಿದ ಸೊಡರಿನಂದದಿ ।
ಕಾಲವಶದಲಿ ಕೆಟ್ಟುಹೋಹವು ನಿತ್ಯವಲ್ಲೆಂದ ॥ ೪ ॥

ಆರು ಮಾರೆಲ್ಲರಿದು ಕಾರಾ । ಗಾರದಂದದಿ ತೋರ್ಪ ಘೋರಾ ।
ಕಾರಸಂಸಾರವನು ಸಚರಾಚರದ ಜೀವಿಗಳು ॥
ಹಾರಿ ಸ್ವರ್ಗವ, ತೂರಿ ನರಕವ, । ಸೇರಿ ಧರಣಿಯ, ಸುಕೃತದುಷ್ಕೃತ ।
ಕಾರಿಯದ ಸುಖದುಃಖದೊಳಗೋಲಾಡುತಿಹರೆಂದ ॥ ೫ ॥

---

೨. ಬಹುಭಾಷಿಗಳಿಗೆ--ಹರಟೆಗಾರರಿಗೆ. ಬೇಟೆಯ--ಹಿಂದಟ್ಟಿಕೊಂಡು ಹೋಗುವ ಪೋಟರಿಗೆ—ಅವಿವೇಕಿಗಳಿಗೆ. ಕುಂಡ--ಹಾದರಗಿತ್ತಿಯ ಮಗ. ಗೋಳಕ— ತಂದೆ ಸತ್ತ ಮೇಲೆ ಹುಟ್ಟಿದವನು.

೩. ಉತ್ತಮಶ್ಲೋಕರಿಗೆ—ಒಳ್ಳೇ ಹೆಸರನ್ನು ಪಡೆದವರಿಗೆ.

೪. ಸಂಸೃತಿ--ಸಂಸಾರವು. ಹೆಂಡಿರುಮಕ್ಕಳ ತೊಡಕಿಗೂ ಸಂಸಾರವೆಂದು ಹೆಸರು ; ಹುಟ್ಟುಸಾವುಗಳ ಸುತ್ತುವಿಕೆಗೂ ಸಂಸಾರವೆಂದು ಹೆಸರು. ಕಾಳು--(ಕಾಡು) ಕೀಳು. ಸೊಡರಿನಂದದಿ–ದೀಪದಂತೆ.

೫. ಆರು--ಯಾರೂ. ಕಾರಾಗಾರ--ಸೆರೆಮನೆ. ಸಚರಾಚರದ ಜೀವಿಗಳು–ಸ್ಥಿರವಾದ ಮತ್ತು ಚರವಾದ ಪ್ರಾಣಿಗಳು. ಚರವಾದ ಜೀವಿಗಳೆಂದರೆ ಮನುಷ್ಯರು, ಪಶು, ಪಕ್ಷಿ ಮೊದಲಾದವು. ಸ್ಥಿರವಾದ ಜೀವಿಗಳೆಂದರೆ ಸಾಮಾನ್ಯವಾಗಿ ಸಸ್ಯಾದಿಗಳೆಂದು ರೂಢಿಯಿದೆ. ಆದರೂ ಅದರ ಜೊತೆಗೆ ಶಿಲೆಗಳನ್ನು ಕೂಡ ಸೇರಿಸಿಕೊಳ್ಳಬಹುದು. ಕಲ್ಲು ಮೊದಲಾದವುಗಳಲ್ಲಿಯೂ ಜೀವವಿರುವದೆಂದು ಡಾಕ್ಟರ್ ಬೋಸರವರು ಈಚೀಚೆಗೆ ಭೌತಿಕಶಾಸ್ತ್ರದಿಂದ ಕೂಡ ಸಿದ್ಧಮಾಡಿರುತ್ತಾರೆ. "ವಿಜ್ಞಾನಂ ಚಾವಿಜ್ಞಾನಂ ಚ" ಎಂದರೆ ಚೇತನವಸ್ತುಗಳೂ ಜಡವಸ್ತುಗಳೂ ಎಲ್ಲವೂ ಬ್ರಹ್ಮವೆ" ಎಂಬ ಶ್ರುತಿಯೂ ಇದಕ್ಕೆ ಉಪಕಾರಕವಾಗಿರುವದು. ಈ ಶ್ರುತ್ಯರ್ಥವನ್ನು ಲಕ್ಷ್ಯಕ್ಕೆ ತಂದುಕೊಂಡರೆ ಜಡವಸ್ತುಗಳಲ್ಲಿಯೂ ಜೀವವಿರುವದೆಂಬ ತಿಳಿವು ನಮ್ಮ ದೇಶದ ಅಧ್ಯಾ

ಕೆಲರುಮನೆಮನೆವಾರ್ತೆಮಕ್ಕಳಿ। ಗೊಲಿದುಮಮತೆಯಮಾಡಿ,ಧನವನು।
ಗಳಿಸಿ, ಸಂಸ್ಕೃತಿಸಂಭ್ರಮದಲಾಸಕ್ತರಾಗಿಹರು ॥
ಫಲವ ಕಂಡರದೇನನಕಟಾ ! । ಗಳಿಲನೆಲ್ಲವು ಬಟ್ಟಬಯಲಾ ।
ಗಳಿವುದದರಿಂ ದುಃಖವಲ್ಲದೆ ಸುಖವದೆಲ್ಲಿಯದು ? ॥ ೬ ॥

ಕ್ಷಣಿಕವಹ ಸಂಸಾರವೆಂದಿದ । ನೆಣಿಸನಾಚಂದ್ರಾರ್ಕವಿಹುದೆಂ ।
ದೆಣಿಸಿಕೊಂಡಿಹ ಬ್ರಹ್ಮಪಟ್ಟವ ಕಟ್ಟಿಕೊಂಡಂತೆ ; ॥
ದಣಿಯನೆಷ್ಟೊದಗಿದರು ; ಮಿಗೆ ಸಂ । ದಣಿಯ ಸೈರಿಸ ; ಕಾಲಪಾಶದ ।
ಕುಣಿಕೆಯಲಿ ಬಿಗಿವಡೆದು ಬಿದ್ದಿಹ ಪಶುವಿನಂತಿಹನು ॥ ೭ ॥

ಅನ್ಯರೇತೋಜಾತೆ ಹೆಂಡತಿ, । ತನ್ನ ಮೋಹಾಕೆಯ ಮಲದಲು ।
ತ್ಪನ್ನನಾದ ಕುಮಾರನಿಂತೀ ಮಲದ ಮೂಲದಲಿ ॥
ಅನ್ವಯಾಂಕುರ ಹಬ್ಬಿ ಹಸರಿಪು । ಮನ್ನತದ ಮಲಕೂಪದೊಳಗು ।
ತ್ಪನ್ನವಾಗಿಹ ಕ್ರಿಮಿಗಳಂದದಿ ಕ್ರೀಡಿಸುತ್ತಿಹನು ॥ ೮ ॥

ತನ್ನ ಹಿತವನು ತಿಳಿಯಲರಿಯದೆ। ಕುನ್ನಿ ಬರಿದೇ ಬಯಸಿ ಬಯಲಿಗೆ,।
ಹೊನ್ನುಹೆಣ್ಣೆಂದೆಂಬ ಗಂಟಲ ಗಾಣದಲಿ ಸಿಲುಕಿ ॥
ಬನ್ನಬಡುವನು ಭವಭವದಿ ಬಹು । ಜನ್ಮ, ಜರೆ, ಮರಣಾದಿದುಃಖದಿ ।
ಹಣ್ಣೆನುತ ಕಿಚ್ಚಿನಲಿ ಬೀಳುವ ಶಲಭನಂದದಲಿ ॥ ೯ ॥

---

ತ್ಮಶಾಸ್ತ್ರಜ್ಞರಿಗೆ ಎಷ್ಟೋ ಹಳೆಯದೆಂದು ವ್ಯಕ್ತವಾಗುವದು. ಕಾರಿಯದ—ಕಾರ್‍ಯದ (ಕಾರ್ಯಗಳಿಂದ ದೊರೆಯುವಂಥ).

೭. ಆಚಂದ್ರಾರ್ಕ—ಸೂರ್ಯಚಂದ್ರರಿರುವವರೆಗೆ. ಬ್ರಹ್ಮಪಟ್ಟವ ಕಟ್ಟಿಕೊಂಡಂತೆ—ಬ್ರಹ್ಮಪಟ್ಟವೇ ತನಗೆ ಬಂದಂತೆ. ದಣಿಯನು—(ತಣಿಯನು) ತೃಪ್ತನಾಗನು. ಸಂದಣಿಯ—(ತನ್ನಿಂದ ಹೊಟ್ಟೆಯನ್ನು ಹೊರೆಯುವ) ಜನರ ಗುಂಪನ್ನು. ಕಾಲಪಾಶದ—ಸಾವೆಂಬ ಕಟ್ಟಿನ ಅಥವಾ ಯಮನ ಹಗ್ಗದ.

೮. ಅನ್ಯರೇತೋಜಾತೆ—ಮತ್ತೊಬ್ಬನ ರೇತಸ್ಸಿನಿಂದ ಹುಟ್ಟಿದವಳು. ಅನ್ವಯಾಂಕುರ—ಸಂತತಿಯ ಮೊಳಕೆ. ಹಸರಿಪುದು—ಹರಡುವದು. ಮಲಕೂಪ. . ಕ್ರೀಡಿಸುತ್ತಿಹನು—ಕಶ್ಮಲದ ಗುಂಡಿಯಲ್ಲಿ ಹುಟ್ಟಿರುವ ಹುಳುಗಳಂತೆ ಆಡುತ್ತಿರುವನು.

೯. ಕುನ್ನಿ—ನೀಚ (ನಾಯಿಯಂತಿರುವ ಮನುಷ್ಯ). ಬಯಲಿಗೆ—ವ್ಯರ್ಥವಾದದ್ದಕ್ಕೆ. ಗಂಟಲ ಗಾಣ—ಮೀನಿನ ಗಂಟಲಿಗೆ ಸಿಕ್ಕುವ ಎರೇಹುಳುವಿನ ಗಾಣ. ಬನ್ನ—ಸಂಕಟ. ಭವಭವದಿ—ಜನ್ಮಜನ್ಮಗಳಲ್ಲಿ. ಶಲಭ—ಪತಂಗದ ಹುಳು.

ಸಾವವರ ನೋಡುತ್ತ, ದುಃಖದಿ। ಬೇವವರ ಕಾಣುತ್ತ, ಮನದಲಿ।
ಹೇವರಿಸಿ ಸುಡಲೆಂದು ಬಿಡನದ ಮರೆವನಾಕ್ಷಣಕೆ ॥
ಭಾವೆಯಳಿಯಲಿ, ವಿತ್ತ ಪೋಗಲಿ, । ತಾವುದಪ್ಪಲಿ, ಮಗುಳದೆಲ್ಲವ ।
ನಾವ ಪರಿಯಲಿ ಕಷ್ಟಪಟ್ಟವ ಗಳಿಸಲನುಗೈವ ॥ ೧೦ ॥

ಹೆಂಡಿರೇತಕೆ ? ಮಕ್ಕಳೇತಕೆ ? । ಬಂಡಿ ತುಂಬಿದ ಧನವವೇತಕೆ ? ।
ಮಂಡೆ ತುಂಬಿದ ಬಳಗವಿದ್ದೇನಹುದು ? ಯಮಭಟರು ॥
ಚಂಡಪಾಶದಿ ಕಟ್ಟಿ ಖಳನನು । ಕೊಂಡು ಹೋಹಂದಿನಲಿ ಹಿತವರು ।
ಕಂಡು ಬಿಡಿಸುವರುಂಟೆ ? ಯಾರಿದ್ದೇನು ಫಲವೆಂದ ॥ ೧೧ ॥

ಏಕೆಮನೆ,ಮನೆವಾರ್ತೆ?ಮಕ್ಕಳ । ದೇಕೆ? ಮಡದಿಯಗೊಡವೆಯೇತಕೆ? ।
ಕಾಕಲಾ ! ಸಂಸಾರವಧ್ರುವವಾರು ನಂಬುವರು ? ॥
ಸಾಕು ಸಾಕದು ಬೇಡ ಬರಿದೇ । ಶೋಕಮೋಹಾಸ್ಪದವೆನುತ್ತದ ।
ನೋಕರಿಸಿ ಬಿಡರಹಹ ! ಬರಿದೇ ಬದ್ಧರಾಗಿಹರು ॥ ೧೨ ॥

ಕಡುನರಕವಹ ಜನ್ಮವೆಂದದ । ಬಿಡಲುಪಾಯದ ಬಟ್ಟೆಯನು ತಾ ।
ಪಡೆಯಲರಿಯದೆ ಮನುಜನೊಡಲನು ಪಡೆದು ಫಲವೇನು ? ॥
ಸುಡಲವನ ಜನ್ಮವನು ! ದುಃಖದ । ಕಡಲೊಳಗೆ ಬಿದ್ದಾಳುತೇಳುತ ।
ತಡಿಯ ಕಾಣದೆ ತೊಳಲುತಿಹನಪಗವಧಿಯಿಲ್ಲೆಂದ ॥ ೧೩ ॥

ಹುಟ್ಟುತಲಿ ತಾನೊಬ್ಬ ; ಕಡೆಯಲಿ । ಕೆಟ್ಟಳಿದು ಹೋಹಾಗಲೊಬ್ಬನೆ; ।
ನಟ್ಟನಡುವೀ ಬಂಧುಬಳಗಗಳೆಂಬ ಬಲುತೊಡಕು ; ॥

---

೧೦. ಹೇವರಿಸಿ—ಅಸಹ್ಯಪಟ್ಟು. ಅದ ಮರೆವನು—ಸಾವನ್ನೂ ದುಃಖವನ್ನೂ ಮರೆಯುವನು. ಭಾವೆ—ಹೆಂಡತಿ. ತಾವು—ಸ್ಥಲ. ಮಗುಳೆ—(ಮತ್ತೆ) + ಅದೆಲ್ಲವ. ಅನುಗೈವ—ಪ್ರಯತ್ನಿಸುವನು. (ಕಷ್ಟಪಟ್ಟು) + ಅವ—ಅವೆಲ್ಲವನ್ನೂ.

೧೧. ಮಂಡೆ—ತಲೆ (ತಲೆ ತುಂಬಿದ ಬಳಗವೆಂದರೆ ಬಹಳ ಬಳಗವೆಂದರ್ಥ. ತಲೆಯಲ್ಲಿ ಕೂದಲುಗಳೆಷ್ಟೋ ಅಷ್ಟು ಹೆಚ್ಚೆಂದು ಭಾವ).

೧೨. ಕಾಕು—ಕೀಳಾದದ್ದು. ಅಧ್ರುವ—ನಿತ್ಯವಲ್ಲ. ಓಕರಿಸಿ—ವಾಂತಿಮಾಡಿ.

೧೩. ಬಟ್ಟೆ—ದಾರಿ. ಸುಡಲಿ + ಅವನ + ಜನ್ಮವನು. ತಡಿಯ—ದಡವನ್ನು.

ಕಷ್ಟವಿದು ಸಂಸಾರವೆನ್ನುತ । ನೆಟ್ಟನೆ ವಿವೇಕದಲಿ ತಿಳಿದದ ।
ಸುಟ್ಟು ಸುಖವನು ಪಡೆದೊಡಾತನೆ ಶಿಷ್ಟನೆನಿಸುವನು ॥ ೧೪ ॥

ಊರ ದಾರಿಯ ನಡೆವ ಮನುಜರು । ನೀರಡಿಸುತರವಟಿಗೆಯನು ನೆರೆ ।
ಸಾರಿ, ತೃಷೆಯನು ಕಳೆದು, ಸಖ್ಯದಲೆಲ್ಲರೊಡಗೂಡಿ ॥
ಬೇರೆಬೇರಿಹ ತಮ್ಮ ದಾರಿಯ । ಸಾರಿ ಹೋಹಂದದಲಿ ಸತಿಸುತ ।
ರಾರಿಗಾರು ? ಋಣಾನುಬಂಧವು ತೀರಲವರಿರರು ॥ ೧೫ ॥

ಒಂದು ವೃಕ್ಷದ ಮೇಲೆ ಪಕ್ಷಿಗಳೊಂದು ನಿಮಿಷದಿ ಗಜಬಜೆನುತಲಿ ।
ಹೊಂದಿಕೊಳ್ಳುತ ಮಗುಳೆ ಕಂಡೆಡೆಗೈದುವಂದದಲಿ ॥
ತಂದೆತಾಯ್ಗಳು ಬಂಧು ಬಳಗಗ । ಳೊಂದು ನಿಮಿಷದಿ ತೋರಿ ತಾವ್ ತ
ಮ್ಮಂದದಲಿ ತೊಲಗುವರು ಋಣಸಂಬಂಧ ತೀರಿದರೆ ॥ ೧೬ ॥

ಬುದ್ಧಿವಂತನು ಗಳಿಸಿದರ್ಥವು । ಬಿದ್ದು ಹೋಹುದು ಕಡೆಗೆ ಮರಳಿನ ।
ಗದ್ದೆಗೆತ್ತಿದ ನೀರ ತೆರದಲಿ ; ಮಡದಿಮಕ್ಕಳನು ॥
ಉದ್ಧರಿಸಿ ಸಲಹಿದರೆ ಸಂಗಡ । ಲೆದ್ದು ಬಾರರು ಯಮಪುರಕೆ ; ತನು ।
ಹದ್ದು ಕಾಗೆಯ ಪಾಲದಾರಿಗೆ ಬಿದ್ದ ಪಾಡೆಂದ ॥ ೧೭ ॥

ವಿದ್ಯೆಯನು ಕಲಿತೇನುಫಲ ? ಬಿಡ । ದುದ್ಯಮದಿ ತಾನಿದ್ದು ಧನವನು ॥
ಬುದ್ಧಿಯಿಂದಾರ್ಜಿಸಿದೊಡದರಿಂದೇನು ಫಲ ತನಗೆ ? ॥
ಮುಗ್ಧೆಯನು ವರಿಸಿರ್ದೊಡೇನದು ? । ಉದ್ಭುರುಳುವನಿತರೊಳು ತನುವಿದು ।
ಬಿದ್ದು ಹೋಹುದು ; ಬಳಿಕಲವು ತಾವಾರ ಹೊಂದುವವು? ॥ ೧೮ ॥

---

೧೫. 'ನಡೆವ' ಎಂಬಲ್ಲಿ ಕೆಲವು ಕಡೆ 'ನಡುವೆ' ಎಂದೂ ಇದೆ.

೧೭. (ಪಾಲು) + ಅದಾರಿಗೆ ಬಿದ್ದ ಪಾಡು—ನಾವು ಕಷ್ಟಪಟ್ಟದ್ದು ಯಾರಿಗಾಗಿ ? (ಮಡದಿಮಕ್ಕಳಿಗಾಗಿಯೂ ಶರೀರಕ್ಕಾಗಿಯೂ ನಾವು ದುಡಿದದ್ದು ವ್ಯರ್ಥವೆಂದು ತಾತ್ಪರ್ಯ).

೧೮. ಉದ್ಯಮ—ಉದ್ಯೋಗ. ಆರ್ಜಿಸಿದೊಡೆ—ಸಂಪಾದಿಸಿದರೆ. ಮುಗ್ಧೆಯನು—ಸುಂದರಸ್ತ್ರೀಯನ್ನು. ವರಿಸಿರ್ದೊಡೆ—ಮದುವೆಯಾಗಿದ್ದರೆ. (ಬಳಿಕಲಿ+) ಅವು—ವಿದ್ಯೆ, ಉದ್ಯಮ, ಧನ, ಮುಗ್ಧೆ ಇವರೆಲ್ಲರೂ.

ಕಂದ ಕೇಳ್ಕೆ ಬಾಲ್ಯದಲಿ ತಾ । ಯ್ತಂದೆಗಳು ರಕ್ಷಕರು ; ಯೌವನ ।
ಬಂದರಾಗ ಸ್ವತಂತ್ರನಾಗಿಹ ಸರ್ವಕೃತ್ಯದಲಿ; ॥
ಮುಂದೆ ವಾರ್ಧಕ್ಯದಲಿ ಮಕ್ಕಳು । ಬಂಧುಗಳು ಸಲಹುವರು ; ಕಡೆಯಲಿ ।
ಬೆಂದು ಹೋಹುದು ಕಿಚ್ಚಿನಲಿ; ಕೇಳಾರದೀ ತನುವು ? ॥ ೧೯ ॥

ನೀರ ಮೇಲಣ ಗುಳ್ಳೆ ಲಿಂಗಾ । ಕಾರದಲಿ ತೋಳೆವುತಿರಲದನವಿ ।
ಚಾರದಿಂ ಲೋಹದಲಿ ಬಂಧಿಪೆನೆಂಬನಂದದಲಿ ॥
ತೋರುತಡಗುವ ಮಿಂಚಿನಂತೆ ಶ । ರೀರವಧ್ರುವವಿದನು ಹಿರಿದೆಂ ।
ದಾರು ಸಲಹುವರವರೆ ಅರೆಮರುಳುಗಳು ಕೇಳೆಂದ ॥ ೨೦ ॥

ಮಗನ ಮುದ್ದಾಡಿದರೆ ಗಂಡನು । ನಗುವ ಜಾರೆಯ ತೆರದಿ, ದೇಹವ ।
ಬಗೆದು ತನ್ನದೆನುತ್ತ ಮಮತೆಯ ಮಾಡಿ ರಕ್ಷಿಸಲು ॥
ಮುಗುಳುನಗೆಯಲಿ ಮೃತ್ಯುದೇವತೆ । ಬಗೆವಳಾತನ ಮುಗ್ಧನೆಂದೀ ।
ತೆಗೆವಳಸುವನು ; ನಿತ್ಯವಾರಿಗೆ ತನುವು ? ನೋಡೆಂದ ॥ ೨೧ ॥

ಹರಕೆಗೆಂದೇ ತಂದ ಕುರಿ ತಾ । ನರಿಯದಕಟಾ ! ಕೊಲುವರೆಂಬುದ ।
ಹಿರಿದು ಹಸಿವಿಗೆ ತಳಿರ ಮೆಲುವದು ತೋರಣಕೆ ತಂದ ॥
ನರಕುರಿಗಳದರಂತೆ ತಮಗಹ । ಮರಣವನು ತಾವರಿಯದೀ ಸಂ ।
ರಸಣದುಃಖದಿ ಮುಗ್ನರಾಗಿಯೆ ಮೃತ್ಯುವಶರಹರು ॥ ೨೨ ॥

ಆವ ಕಾಲದಲಾವ ಠಾವಿನ । ಲಾವ ವಿಧದಲಿ ತಮಗೆ ಬಹುದೀ ।
ನೋವಿದೆಂಬುದನರಿಯಬಾರದು ದೇವದೈತ್ಯರಿಗೆ ॥
ತಾವದಾರಿವರಿಂದಲಧಿಕರೆ ? । ಸಾವು ತಪ್ಪದು ಸಕಲಜನಕದ ।
ಭಾವಿಸದೆ ಬಹುಯತ್ನದಲಿ ಫಲವೇನು ಹೇಳೆಂದ ॥ ೨೩ ॥

---

೨೦. ಅರೆಮರುಳುಗಳು—ಅರ್ಧ ಹುಚ್ಚರು.

೨೧. ಜಾರೆ—ಹಾದರಗಿತ್ತಿ. ಮುಗ್ಧ—ದಡ್ಡ.

೨೨. ಹರಕೆಗೆಂದೇ—ಹರಸಿಕೊಂಡಿರುವಂತೆ ಬಲಿಯನ್ನು ಕೊಡುವದಕ್ಕಾಗಿ. ತೋರಣಕೆ ತಂದ—ಇದು 'ತಳಿರ' ಎಂಬುದಕ್ಕೆ ವಿಶೇಷಣ.

೨೩. ದೇವದೈತ್ಯರಿಗೆ—ದೇವತೆಗಳಿಗೂ ರಾಕ್ಷಸರಿಗೂ ಕೂಡ (ತಿಳಿಯುವದಿಲ್ಲವೆಂದು ತಾತ್ಪರ್ಯ).

ಬ್ರಹ್ಮ ಮೊದಲು ಪಿಪೀಲಿಕಾಂತವು। ಸುಮ್ಮನೇ ಹಮ್ಮಿನಲಿ ಕೆಡುವರು; ।
ತಮ್ಮ ಬದುಕಿದನಿತ್ಯವೆಂಬುದನೊಮ್ಮೆ ಚಿಂತಿಸರು ; ॥
ಹೆಮ್ಮೆಯಲಿ ಹಿರಿದಾಗಿ ಸಂಸ್ಕೃತಿ । ಧರ್ಮದಲಿ ಮರೆದಿರಲು ತಮ್ಮನು ।
ಸುಮ್ಮನೆಂದಾ ಮೃತ್ಯುವೊಯ್ವಳೊ! ಕಾಣರವರೆಂದ ॥ ೨೪ ॥

ಸರ್ಪವದನಗ್ರಾಸವಾಗಿಹ । ಕಪ್ಪೆ ಮಕ್ಷಿಕಭಕ್ಷಣವ ಬಯ ।
ಸಿಪ್ಪ ತೆರದಲಿ ಕಾಲವಶನಾಗಿರ್ಪ ಮಾನವನು ॥
ದರ್ಪದಿಂದಲಿ ಕೇಡ ಬಗೆವನು । ತಪ್ಪ ಸಾಧಿಸಿ ಸಕಲಜನಕದು ।
ತಪ್ಪುವದೆ ತನಗಕಟ! ನಗುವಳು ಹೆಡತಲೆಯ ಮೃತ್ಯು ॥ ೨೫ ॥

ಒಡವೆಯುಳ್ಳೊಡೆ ಮಡದಿಮಕ್ಕಳು। ಕಡುಮಮತೆಯೆನು ಮಾಳ್ಪರಾತಗೆ; ।
ಬಡತನಗಳಡಸಿದರೆ ಮೆಲ್ಲನೆ ಸಡಿಲಿ ತೊಲಗುವರು; ॥
ಬಿಡದು ಕರು ಹಾಲಿರಲು ತಾಯನು; । ಕಡೆಗೆ ಹೋಹುದು ಬತ್ತಿದರೆ; ತಾ ।
ಕೆಡುವ ಕಾಲಕ್ಕಾರಿಗಾರ್ಹೆ? ಮಗನೆ ಕೇಳೆಂದ ॥ ೨೬ ॥

ಒಂದುಕೊರತೆಯುತೋರದಂದದಿ। ತಂದುತಂದೊದಗಿಸಿದೊಡದರೊಳು।
ಕುಂದುಗಳನೇ ಹಿಡಿದು ಹೆಂಡಿರುಮಕ್ಕಳುಗಳೆಲ್ಲ ॥
ಇಂದು ತಮಗಿದು ಕಡಿಮೆಯಾಗಿಹು। ದೆಂದು ಹೋರುವರವರು ; ತನಗದ ।
ರಿಂದ ಸುಖವನು ಕಾಣ; ಬರಿದೇ ಭ್ರಮೆಯ ಬಳಲಿಕೆಯು ॥ ೨೭ ॥

---

೨೪. ಬ್ರಹ್ಮ–ಸೃಷ್ಟಿಕರ್ತನಾದ ಚತುರ್ಮುಖಬ್ರಹ್ಮ (ನಿರ್ಗುಣಬ್ರಹ್ಮವಲ್ಲ ; ಏಕೆಂದರೆ ಹಮ್ಮಿನಿಂದ ಕೆಡುವ ಸಂಭವವು ಅದಕ್ಕಿಲ್ಲ). ಪಿಪೀಲಿಕಾಂತವು ಇರುವೆಯವರೆಗೆ. ಬದುಕು—ಜೀವಿಸಿರುವದು. ಸುಮ್ಮನೆ + ಎಂದು (—ಯಾವಾಗ) + ಆ ಮೃತ್ಯು + ಒಯ್ವಳೊ.

೨೫. ಗ್ರಾಸ–ತುತ್ತು. ಮಕ್ಷಿಕ–ನೊಣ. ಕಾಲವಶನಾಗಿರ್ಪ–ಮೃತ್ಯುವಿಗೆ ಅಧೀನನಾಗಿರುವ. ಹೆಡತಲೆಯ–ಕತ್ತಿನ ಮೇಲೆ ಇರುವ.

೨೬. ಅಡಸಿದರೆ–ಬಂದರೆ. 'ಸಡಿಲಿ ತೊಲಗುವರು' ಎಂಬಲ್ಲಿ ಕೆಲವು ಕಡೆ 'ಸಡಿಲ ತೊಡಗುವರು' ಎಂದಿದೆ.

೨೭. ಹೋರುವರು—ಜಗಳವಾಡುವರು.

ತಂದೆತಾಯ್ಗಳಿಸಿರ್ದ ಧನವನು । ನಂದನರು ತಮ್ಮೊಳಗೆ ಭಾಗಿಸ ।
ಲೆಂದು ಕೂಗಾಡುತ್ತಲರಮನೆಗರಿಕೆಯನು ಮಾಡಿ ॥
ಹಿಂದುಮುಂದನು ನೋಡದವರನು । ಬಂಧಿಸುತ್ತದ ತೆಗೆದುಕೊಂಬರು ; ।
ಮುಂದೆ ಭಿಕ್ಷಾಪಾತ್ರೆಗಧಿಕಾರಿಗಳು ತಾವೆಂದ ॥ ೨೮ ॥

ತಾಯಿತಂದೆಯ ಬಿಟ್ಟು, ಹೆಂಡಿರ । ಮಾಯೆಗಳಿಗೊಳಗಾಗಿ, ಸರ್ವರ ।
ಬಾಯ ಬಡಿದೆಲ್ಲವನು ಮಕ್ಕಳಿಗಿತ್ತು ಮಮತೆಯಲಿ ॥
ನೋಯ ನುಡಿದಾರೇನನೆನಲ । ನ್ಯಾಯನಿಕರದಿ ನಡೆವ ಲುಬ್ಧಗೆ ।
ನಾಯಕಮಹಾನರಕವಲ್ಲದೆ ಮೋಕ್ಷವಿಲ್ಲೆಂದ ॥ ೨೯ ॥

ಆಗಹೋಗದ ಬಯಲ ಭ್ರಮೆಗೊಳ । ಗಾಗಿ, ಬಹುಯತ್ನಗಳ ಮಾಡಿ, ನಿ ।
ದಾಘದಲಿ ಬೇವಂತೆ ಮನದನುತಾಪದಲಿ ಬೆಂದು, ॥
ಭೋಗಲೋಲುಪತೆಯಲಿ ದುಃಖದ । ಸಾಗರದಲೋಲಾಡಿ ದೇಹವ ।
ನೀಗಿ ಕಳೆವರು ಮರುಳರವರೆಲೆ ಮಗನೆ ಕೇಳೆಂದ ॥ ೩೦ ॥

ದುಃಖ ವೆಕ್ಕಸವಾಗೆ ಸರ್ವರು । ಸುಕ್ಕಿ ಮನದಲಿ ಮರುಗುವರು ; ತಮ ।
ಗಕ್ಕರೆಯ ಸುಖವಾಗೆ ಸೊಕ್ಕುವರೆಲ್ಲರನು ಮರೆದು ; ॥
ಅಕ್ಕಟಕಟಾ ! ಸುರನರೋರಗ । ಪಕ್ಷಿಕೃಮಿಮೊದಲಾಗಿ ಮಾಯೆಗೆ ।
ಸಿಕ್ಕಿ ಸುಖದುಃಖದಲಿ ಹೊರಳುತ ನರಳುತಿಹವೆಂದ ॥ ೩೧ ॥

ದುಃಖ ಬೆರೆಯದ ಸುಖವದಾರಿಗೆ । ಸಿಕ್ಕುವದು ಶುಕಯೋಗಿ ? ಮರ್ಕಟ ।
ಸೊಕ್ಕಿ ಕೀಲನು ಕಿತ್ತು ಬಿಸುಟಂದದಲಿ, ಮಧುಘೃತವ ॥

---

೨೯. ಮಾಯೆಗಳಿಗೆ---ಮೋಹಕವಾದ ನಡೆವಳಿಕೆಗಳಿಗೆ. ನೋಯ + ನುಡಿದು + ಆರು + ಏನನು + ಎನಲು---ಮನಸ್ಸಿಗೆ ದುಃಖವಾಗುವ ಮಾತಿನಿಂದ ಯಾರು ಏನೆಂದು ಹೇಳಿದರೂ. ಅನ್ಯಾಯನಿಕರದಿ---ಯೋಗ್ಯವಲ್ಲದ ಅನೇಕ ನಡೆವಳಿಕೆಗಳಲ್ಲಿ. ನಾಯಕ--ಹಿರಿದಾದ.

೩೦. ಆಗಹೋಗದ (ಆಗದ+ಹೋಗದ) ನಡೆಯದಿರುವಂಥ. ನಿದಾಘ---ಬೇಸಗೆ.

೩೧. ವೆಕ್ಕಸವಾಗೆ--ಹೆಚ್ಚಲು. ಮಾಯೆ-- ಹೊರಗಣ ಯಾವ ಪದಾರ್ಥಗಳಲ್ಲಿಯೂ ಹುರುಳಿಲ್ಲವೆಂದು ನಮಗೆ ಎಷ್ಟೋ ವೇಳೆ ಕಂಡರೂ ಅದನ್ನು ಮನಸ್ಸಿಗೆ ತಂದುಕೊಳ್ಳದೆ ನಮ್ಮ ಅಭ್ಯುದಯವೆಲ್ಲ ಅವುಗಳನ್ನೇ ಅವಲಂಬಿಸಿಕೊಂಡಿರುವದೆಂಬ ಭ್ರಮೆ.

ಇಕ್ಕಿ ನೆಕ್ಕಲು ಖಡ್ಗಧಾರೆಗೆ । ಸಿಕ್ಕಿ ನಾಲಗೆ ಸೀಳುವಂದದ ।
ಉಕ್ಕಿ ವಿಷಯಸುಖಕ್ಕೆಳಸಿ ಕಡುದುಃಖಬಡುತಿಹರು ॥ ೩೨ ॥

ಮುನ್ನಲೀಶ್ವರಕಲ್ಪನೆಯಲೇ । ತನ್ನ ಪಾಲಿಗೆ ಬಹುದು ತಾನೆ ಮ ।
ಹೋನ್ನತದ ಸುಖದುಃಖ ದೇವಾಸುರರಿಗೊಳಗಾಗಿ ; ॥
ತನ್ನ ಹಣೆಯಲಿ ಬರಹವಿಲ್ಲದು । ದನ್ನು ತಾ ಬಯಸಿದರೆ ಬಾರದು ; ।
ತನ್ನ ವಶವೇ ? ಈಶ್ವರಾಜ್ಞೆಯ ಮೀರಿ ನಡೆವುದಕೆ ॥ ೩೩ ॥

ಹಣೆಯ ಬರಹವ ಮೀರಿ ನಡೆವಡೆ। ತ್ರಿಣಯನಿಗುಮಳವಲ್ಲ ; ಮಿಕ್ಕಿನ ।
ಬಣಗುಗಳ ಪಾಡೇನು ! ಪೂರ್ವದ ಕರ್ಮಫಲಗಳನು ॥
ಜುಣುಗಿ ತಾನುಣಲೊಲ್ಲೆನೆಂದಿರ । ಲಣಕವೇ ? ತಮ್ಮಪ್ಪನುಂಬನೆ ? ।
ಎಣಿಸಿ ನೋಡಿದೊಡೀಶ್ವರಾಜ್ಞೆಯ ಮೀರಲಳವಲ್ಲ ॥ ೩೪ ॥

ಕೇಳು ಸಚರಾಚರ ಸಮಸ್ತವು । ಕಾಲಕರ್ಮಕೆ ಸಿಲುಕಿಹವು ; ತ ।
ತ್ಕಾಲಕರ್ಮಗಳೀಶ್ವರಾಜ್ಞಾಪಾಶವೆನಿಸಿಹವು ; ॥
ಪೇಳಲೇನದ ಕಳೆಯಲಳವೇ ? । ಕಾಲ ಸಂಕಲೆಯಾದ ಸತಿಸುತ ।
ಮೂಲಸಂಸೃತಿಬದ್ಧರಿಗೆ ಭೋಗಾಭಿಲಾಷರಿಗೆ ॥ ೩೫ ॥

---

೩೨. ಮರ್ಕಟ...ಬಿಸುಟಂದದಲಿ—ಗರಗಸದಿಂದ ಅರ್ಧ ಹಲಿಗೆಯನ್ನು ಕೊಯ್ದು ಅಲ್ಲಿಗೆ ಸಿಕ್ಕಿಸಿದ್ದ ಬೆಣೆಯನ್ನು ನೋಡಿ ಒಂದು ಕಪಿಯು ಅದನ್ನು ಕೀಳಹೋಗಲು ಅದರ ಬಾಲ ಮೊದಲಾದದ್ದು ಆ ಸಂದಿಗೆ ಸಿಕ್ಕಿ ಅದಕ್ಕೆ ಬಹಳ ವ್ಯಥೆಯಾಯಿತೆಂದು ಪಂಚತಂತ್ರದಲ್ಲಿ ಕಥೆ ಇದೆ. ಉಕ್ಕಿ—ಉಬ್ಬಿ.

೩೩. ಈಶ್ವರಕಲ್ಪನೆಯಲೇ—(ಮೊದಲು) ಈಶ್ವರನು (ಜೀವರ ಕರ್ಮಾನುಗುಣವಾಗಿ) ಮಾಡಿದ ಸಂಕಲ್ಪದಿಂದಲೇ. ದೇವಾಸುರರಿಗೊಳಗಾಗಿ—ದೇವತೆಗಳಿಗೂ ಅಸುರರಿಗೂ ಕೂಡ.

೩೪. ತ್ರಿಣಯ(ನ)—(ಮೂರುಕಣ್ಣುಳ್ಳವನು) ಈಶ್ವರ. ಬಣಗುಗಳ—ಕೆಲಸಕ್ಕೆ ಬರದವರ (ನಿರುಪಯೋಗಿಗಳ). ಜುಣುಗಿ—ಹಿಂಡಿ. ಅಣಕವೇ—ಹುಡುಗಾಟವೇ ?

೩೫. ಕಾಲಕರ್ಮಕೆ—ಸಾವಿಗೆ ಮತ್ತು ತಾವು ಮಾಡಿದ ಕರ್ಮದ ಫಲಕ್ಕೆ. ಈಶ್ವರಾಜ್ಞಾಪಾಶವೆನಿಸಿಹವು—ಪ್ರಾಣಿಗಳು ಸಾವಿಗೂ ತಾವು ಮಾಡಿದ ಕರ್ಮದ ಫಲಕ್ಕೂ ಕಟ್ಟು ಬಿದ್ದಿರಬೇಕೆಂಬ ಈಶ್ವರಾಜ್ಞೆಯ ರೂಪವಾದ ಕಟ್ಟುಗಳೆನಿಸಿಕೊಂಡಿರುವವು. ಕಾಲ—ಕಾಲಿನ. ಸಂಕಲೆ—ಬೇಡಿ.

ಕಾಯಸಿದ್ಧಿಯ ಪಡೆದ ಗರುವರು,। ಮಾಯೆಯಳಿದ ಮಹಾನುಭಾವರು, ।
ಸಾಯಸದಲಷ್ಟಾಂಗಯೋಗಾಭ್ಯಾಸವನು ಮಾಡಿ ॥
ನೋಯದಸುವನು ಬಿಡುವ ಯೋಗಿಗ । ಳಾ ಯತಿಗಳಾ ವ್ರತಿಗಳೆಲ್ಲರು ।
ಸಾಯದುಳಿದವರಿಲ್ಲ; ಕಾಲಾಧೀನರಾಗಿಹರು ॥ ೩೬ ॥

ವಾದ, ವಶ್ಯ, ವಯೋನಿರೋಧನ । ವಾದಿಯಾದಂಜನವದೃಶ್ಯಗ ।
ಳಾದ ಮಣಿಮಂತ್ರೌಷಧಂಗಳ ಯಂತ್ರತಂತ್ರಗಳ ॥
ಸಾದರದಿ ಸಾಧಿಸಿಹ, ಘುಟಿಕಾ । ಪಾದುಕಾಸಿದ್ಧಿಗಳ ಪಡೆದಿಹ !
ಸಾಧಕರು ಮೊದಲಾಗಿ ಕಾಲಾಧೀನರಾಗಿಹರು ॥ ೩೭ ॥

---

೩೬. ಕಾಯಸಿದ್ಧಿಯ ಪಡೆದ—ಸಾಯದಂತೆ ಸಿದ್ಧಿಯನ್ನು ಪಡೆದುಕೊಂಡ. ಗರುವರು—ಶ್ರೇಷ್ಠರು. ಸ + ಆಯಸದಲಿ=ಶ್ರಮಪಟ್ಟು. ಅಷ್ಟಾಂಗಯೋಗ—ಯಮ (ಅಹಿಂಸಾ, ಸತ್ಯ ಮೊದಲಾದವು) ; ನಿಯಮ (ಶುಚಿ, ಸಂತೋಷ ಮೊದಲಾದವು) ; ಆಸನ (ಬಹಳ ಹೊತ್ತಾದರೂ ಆಯಾಸವಾಗದಂತೆ ಕೂತುಕೊಳ್ಳುವ ಬಗೆ) ; ಪ್ರಾಣಾಯಾಮ (ಉಸಿರನ್ನು ಬಿಗಿಹಿಡಿಯುವದು) ; ಪ್ರತ್ಯಾಹಾರ (ಹೊರಕ್ಕೆ ಹೋದ ಮನಸ್ಸನ್ನೂ ಇಂದ್ರಿಯಗಳನ್ನೂ ಹಿಂದಟ್ಟಿಕೊಂಡು ಬರುವದು) ; ಧಾರಣಾ (ಹಿಂದಕ್ಕೆ ತಂದವುಗಳನ್ನು ಒಂದು ಸ್ಥಲದಲ್ಲಿ ನಿಲ್ಲಿಸುವದು) ; ಧ್ಯಾನ (ಅದನ್ನೆ ಎಡೆಬಿಡದೆ ನೆನೆಯುವದು) ; ಸಮಾಧಿ (ಬೇರೆ ಏನೂ ತೋಚದೆ ಆತ್ಮಸ್ಫೂರ್ತಿಯೊಂದೇ ಇರುವದು). ನೋಯದೆ+ಅಸುವನು ಬಿಡುವ ಯೋಗಿಗಳು—ಮರಣದ ದುಃಖವನ್ನು ಅನುಭವಿಸದೆ ತಾವಾಗಿಯೆ ಪ್ರಾಣವನ್ನು ಬಿಡುವ ಯೋಗಿಗಳು. (ಆ) ಯತಿಗಳು—ಸಂನ್ಯಾಸಿಗಳು. ವ್ರತಿಗಳು—ದೇವರ ಅನುಗ್ರಹಪನ್ನು ಪಡೆಯುವದಕ್ಕಾಗಿ ಯಾವದಾದರೂ ವ್ರತವನ್ನು ಹಿಡಿದಿರುವವರು.

೩೭. ವಾದ—ಚಿನ್ನವನ್ನು ಮಾಡುವದೇ ಮೊದಲಾದ ಧಾತುವಾದ. ವಶ್ಯ—ಇತರರು ತನಗೆ ಅಧೀನರಾಗುವಂತೆ ಮಾಡುವದು. ವಯೋನಿರೋಧನ—ಮುಪ್ಪು ಬರದ ಹಾಗೆ ಮಾಡುವದು. ಅಂಜನ—ಭೂಮಿಯಲ್ಲಿರುವ ನಿಕ್ಷೇಪ ಮೊದಲಾದದ್ದು ಕಾಣುವಂಥ ಕಣ್ಣುಕಪ್ಪು. ಅದೃಶ್ಯಗಳಾದ—ಎದುರಿಗಿದ್ದರೂ ತಾನು ಇತರರಿಗೆ ಕಾಣದಂತೆ ಮಾಡುವಂಥ. ಮಣಿಮಂತ್ರೌಷಧಂಗಳ—ನಾಗಮಣಿ, ಓಂಕಾರವೆಂಬ ಮಂತ್ರ, ಅಮೃತಸಂಜೀವಿನೀ ಮೊದಲಾದವುಗಳನ್ನು. ಯಂತ್ರತಂತ್ರಗಳ—ವಸುಚಕ್ರಾಂತವಾದ ಯಂತ್ರಗಳನ್ನೂ ಕೈಚಮತ್ಕಾರಗಳನ್ನೂ. ಘುಟಿಕಾಪಾದುಕಾಸಿದ್ಧಿಗಳ—ಒಂದು ಗುಳಿಗೆಯನ್ನು ಬಾಯಲ್ಲಿಟ್ಟುಕೊಳ್ಳುವದರಿಂದ ಅಥವಾ ಒಂದು ಪಾದುಕೆಯನ್ನು ಧರಿಸುವದರಿಂದ ಬೇಕಾದ ಕಡೆಗೆ ಕ್ಷಣಮಾತ್ರದಲ್ಲಿ ಹೋಗುವ ಸಾಮರ್ಥ್ಯವನ್ನು. ಸಾಧಕರು—ಈ

ವೇದಶಾಸ್ತ್ರಪುರಾಣಕಥೆಗಳ | ನೋದಿ, ನಿಯಮಾಚಾರನಿಷ್ಠೆಯ |
ಲಾದರದಿ ಪಿತೃದೇವತಾತಿಥಿಗಳನು ಪೂಜಿಸುತ, ||
ಕ್ರೋಧವಿಲ್ಲದೆ ಸಾಂಗವೆನೆ ಹಯ | ಮೇಧ ಮೊದಲಾಗಿರ್ಪ ಕ್ರತುಸಂ |
ಪಾದನೆಯ ದೀಕ್ಷಿತರು ಕಾಲಾಧೀನರಾಗಿಹರು || ೩೮ ||

ದುಶ್ಚರಗಳೆನಿಸಿರ್ಪ ಬಹುವಿಧ | ಕೃಚ್ಛ್ರಚಾಂದ್ರಾಯಣಗಳೆಂಬ ಮ |
ಹೋಚ್ಛ್ರಯದ ಪಂಚಾಗ್ನಿಮಧ್ಯದಿ ಮಳೆಚಳಿಗಳಿಂದ ||
ಬೆಚ್ಚದಾಹಾರವನು ವರ್ಜಿಸಿ | ನಿಚ್ಚ ನಿಶ್ಚಲರಾಗಿ ತಪವನು |
ಹೆಚ್ಚಿಸುವ ಸಚ್ಚರಿತರೆಲ್ಲರು ಕಾಲವಶರೆಂದ || ೩೯ ||

ಸುರನರೋರಗಯಕ್ಷಕಿನ್ನರ | ಗರುಡಗಂಧರ್ವಾದಿಸಿದ್ಧಾ |
ಸುರರು, ವಸುರುದ್ರಾಶ್ವಿನಿಗಳಾದಿತ್ಯರಪ್ಸರರು, ||
ಹರಿಹರಬ್ರಹ್ಮಾದಿಲೋಕಾಂ | ತರವನೈದಿದ ಸುಕೃತಿಗಳು, ಧರೆ |
ಗಿರಿಗಳಿವು ಮೊದಲಾಗಿ ಕಾಲಾಧೀನವಾಗಿಹವು || ೪೦ ||

ಬೇಸಗೆಯ ಬಿಸಿಲಿನಲಿ, ಬಿರ್ರನೆ | ಬೀಸುತಿಹ ಗಾಳಿಯಲಿ, ಮಳೆಯನು |
ಸೂಸುತಿಹ ಸೋನೆಯಲಿ, ಮಂಜನು ಸುರಿವ ಶೀತದಲಿ, ||
ಗಾಸಿಯಾಗುತ ಘೋರತಪದಾ | ಯಾಸದಲಿ ಯತ್ನವನು ಮಾಡುವ |
ರೈಸೆ! ಸುಖವಿನಿತಿಲ್ಲ; ಕಾಲಾಧೀನರಾಗಿಹರು || ೪೧ ||

---

ಮಾತಿಗೆ ಮೋಕ್ಷದ ಸಾಧನಗಳನ್ನು ಮಾಡುವವರೆಂದು ತಿಳಿಯಬಾರದು ; ಏಕೆಂದರೆ ವಾದ ಮೊದಲಾದ ಸಿದ್ಧಿಗಳ ಸಾಧನಗಳು ಮೋಕ್ಷದ ಸಾಧನಗಳಲ್ಲ ; ಇಲ್ಲಿ ಸಾಧಕ ರೆಂದರೆ ವಿಲಕ್ಷಣವಾದ ವ್ಯವಹಾರಸಾಮರ್ಥ್ಯವನ್ನು ಪಡೆಯಲು ಯತ್ನಿಸುವವರೆಂದರ್ಥ.

೩೮. ಕ್ರತುಸಂಪಾದನೆಯ---ಯಜ್ಞಗಳನ್ನು ಮಾಡುವಂಥ.

೩೯. ದುಶ್ಚರಗಳು---ಮಾಡುವದಕ್ಕೆ ಬಹುಕಷ್ಟವಾದವುಗಳು. ಕೃಚ್ಛ್ರ---೩ ದಿನ ಬರೀ ಹಗಲೂಟ ; ೩ ದಿನ ಬರೀ ಇರುಳೂಟ ; ೩ ದಿನ ತಾನಾಗಿ ದೊರೆತ ಊಟ ; ೩ ದಿನ ಊಟವೇ ಇಲ್ಲ ; ಇದು ೧೨ ದಿನಗಳ ಕೃಚ್ಛ್ರ. ಹೀಗೆ ಉಪವಾಸ ಪ್ರಧಾನ ವಾಗಿ ಅನೇಕ ಬಗೆಯ ಕೃಚ್ಛ್ರಗಳುಂಟು. ಚಾಂದ್ರಾಯಣ---ಶುಕ್ಲಪಕ್ಷದಲ್ಲಿ ಪಾಡ್ಯ ದಿಂದ ಒಂದೊಂದು ತುತ್ತು ಹೆಚ್ಚಿಸುತ್ತ ಕೃಷ್ಣಪಕ್ಷದಲ್ಲಿ ಪಾಡ್ಯದಿಂದ ಒಂದೊಂದು ತುತ್ತು ಇಳಿಸುತ್ತ ಶರೀರವನ್ನು ಸೊರಗಿಸುವದು. ಮಹೋಚ್ಛ್ರಯದ---ಬಹಳ ಹೆಚ್ಚಿನ. ಪಂಚಾಗ್ನಿಮಧ್ಯದಿ---ನಾಲ್ಕು ದಿಕ್ಕಿನಲ್ಲಿಯೂ ನಾಲ್ಕು ಅಗ್ನಿಕುಂಡಗಳು ; ಮೇಲೆ ಸೂರ್ಯ; ಹೀಗೆ ಐದು ಅಗ್ನಿಗಳ ನಡುವೆ. ಬೆಚ್ಚದೆ---ಬೆದರದೆ. ನಿಚ್ಚ---ಯಾವಾಗಲೂ.

ಗರ್ಭದೊಳಗಿಹ ದುಃಖ, ಬಳಿಕಿನ । ಲರ್ಭಕತ್ವದ ದುಃಖ, ಯೌವನ ।
ದುಬ್ಬುಕೊಬ್ಬಿನಲುಕ್ಕಿ ವನಿತಾವಿಷಯವಹ ದುಃಖ, ॥
ಉಬ್ಬುಸದ ರೋಗಗಳು ಮೊದಲಹ । ನಿರ್ಭರದ ವಾರ್ಧಕ್ಯದುಃಖವು ।
ಹಬ್ಬಿಕೊಂಡಿರೆ ಸುಖವ ಕಾಣರು ಕಾಲವಶರಾಗಿ ॥ ೪೨ ॥

ಚಕ್ರವರ್ತಿಗಳಾರ್‍ವರೀ ಭೂ । ಚಕ್ರವನು ಭುಜಬಲಸಮುಗ್ರಪ ।
ರಾಕ್ರಮದೊಳಾಳಿರ್ದರೇಕಚ್ಛತ್ರರೆಂದೆನಿಸಿ ॥
ಚಕ್ರ ಬೆಸಗೈದಿರ್ದುದಾದೊಡ । ಮಾ ಕ್ರಮದಲಿದ್ದೇನು ! ಕಾಲನ ।
ಚಕ್ರಕವರೊಳಗಾಗಿ ಹೋದರು ಮಗನೆ ಕೇಳಿಂದ ॥ ೪೩ ॥

ಆವ ಕರ್ಮಕಧೀನನಾಗಿ ವಿ । ಭಾವಸುವು ದಿನದಿನವು ಮೇರುವ ।
ತೀವಿ ತಿರುಗುತಲಿಪ್ಪನೆಂದಿಗು ; ನಿಲುಗಡೆಯ ಕಾಣ ॥
ಆ ವಿಧದಲಾ ಗ್ರಹಗಳಾ ತಾ । ರಾವಳಿಗಳಾ ಸರ್ವವೆಲ್ಲವು ।
ಭಾವಿಸುತ್ತಿರೆ ತಿರುಗುತಿರ್ಪವು ಕರ್ಮವಶದಿಂದ ॥ ೪೪ ॥

ಅಹಿಪತಿಗೆ ನೆರೆ ತಪ್ಪದೆಂದಿಗು । ಮಹಿಯ ಧರಿಸಿಹ ಕರ್ಮವಾ ಪರಿ ।
ಸಹಜವಾದುದು ಕೂರ್ಮದಿಗ್ಗಜಗಳಿಗೆ ನೋಡಿದರೆ; ॥
ದ್ರುಹಿಣ ಸೃಷ್ಟಿವಿಧಾನವನು ನಿ । ರ್ವಹಿಸಿಕೊಂಡಿಹ ; ವಿಷ್ಣುರುದ್ರರ ।
ಲಹುದಲಾ ಸ್ಥಿತ್ಯಂತಕರ್ಮಗಳಿಂದನಾ ಮುನಿಪ ॥ ೪೫ ॥

---

೪೨. ನಿರ್ಭರದ---ಹೆಚ್ಚಾದ.

೪೩. ಆರು ಚಕ್ರವರ್ತಿಗಳು—ಹರಿಶ್ಚಂದ್ರ, ನಲ, ಪುರುಕುತ್ಸ, ಪುರೂರವ, ಸಗರ, ಕಾರ್ತವೀರ್ಯ. ಏಕಚ್ಛತ್ರರು—ತಮ್ಮ ಒಂದೇ ಕೊಡೆಯ ನೆಳಲಲ್ಲಿ ಭೂಮಂಡಲವೆಲ್ಲಾ ಇರುವಂಥ ಚಕ್ರವರ್ತಿಗಳು. ಚಕ್ರ—ಭೂಚಕ್ರವೇ ಎಂದರೆ ಭೂಮಿಯಲ್ಲಿರುವ ಎಲ್ಲಾ ಜನರೂ. ಬೆಸಗೈದಿರ್ದುದು—ಅವರ ಆಜ್ಞೆಯನ್ನು ನಡೆಸುತ್ತಿದ್ದರು. ಈ ಕ್ರಮದಲಿದ್ದೇನು —ಎಷ್ಟು ಜನರ ಮೇಲೆ ಅಧಿಕಾರವನ್ನು ನಡೆಸಿಕೊಂಡಿದ್ದರೇನು?

೪೪. ವಿಭಾವಸು—ಸೂರ್ಯ. ತೀವಿ—ಅತಿಶಯವಾಗಿ.

೪೫. ಆ ಪರಿ—ಆದಿಶೇಷನು ಹೇಗೊ ಹಾಗೆ ತಾವೂ ಭೂಮಿಯನ್ನು ಹೊತ್ತಿರುವದು. ದ್ರುಹಿಣ—ಬ್ರಹ್ಮ. ಸ್ಥಿತ್ಯಂತಕರ್ಮಗಳು—ಸ್ಥಿತಿ (ರಕ್ಷಣೆ) ಅಂತ (ಸಂಹಾರ) ಕರ್ಮಗಳು. (ಕ್ರಮವಾಗಿ ವಿಷ್ಣುವಿನಿಂದಲೂ ರುದ್ರನಿಂದಲೂ ಆಗುವವೆಂದು ತಾತ್ಪರ್ಯ.)

ಬಲನಿಷೂದನ ಕಾಲಕಾಲದಿ । ಮಳೆಯ ಕರೆವುದು ಕರ್ಮ; ಜಲನಿಧಿ ।
ಬಳಸಿ ಭೂಮಿಯ ಮೀರಿದಪ್ಪದೆ ತೋರ್ಪುದೀ ಕರ್ಮ; ॥
ಉಳಿದ ದಿಕ್ಪಾಲಕರು, ಮನುಮುನಿ । ಗಳು, ಕುಲಾದ್ರಿಗಳೆಲ್ಲವಾಯಾ ।
ಕೆಲಸದಧಿಕಾರಿಗಳು ಕರ್ಮಾಧೀನರಾಗಿಹರು ॥ ೪೬ ॥

ಇವರು ಮೊದಲಾಗೀಶ್ವರಾಜ್ಞೆಯ । ನವಗಳೆಯಲಳವಲ್ಲವೆಂದೆನೆ ।
ಶಿವಶಿವಾ ! ಮೀರುವೊಡೆ ವಶವೇ ? ದನುಜಮನುಜರಿಗೆ ॥
ಭವಜಲಧಿಯೊಳಗಾಳುತೇಳುತ । ಬವಣೆ ಬಡುತಿಹರೀಶ್ವರನ ಕೃಪೆ ।
ಸವನಿಸುವ ಪರಿಯಂತ ಗತಿಯನು ಕಾಣರವರೆಂಬ ॥ ೪೭ ॥

ಕಾಲ ಕರ್ಮಾಧೀನವೆಂಬರು; । ಕೇಳು ದೈವದ ಸೂತ್ರವೆಂಬರು; ।
ಮೇಳಯಿಪ ಗ್ರಹಗತಿಗಳೆಂಬರು; ಪ್ರಾರಬ್ಧವೆಂದು; ॥
ಬಾಳಲಿಖಿತವಿದೆಂದು; ಪ್ರಾಪ್ತಿಯ । ಮೂಲವೆಂದದದೃಷ್ಟವೆಂದದ ।
ಹೇಳುವರು ಬಲ್ಲವರಿದೀಶ್ವರನಾಜ್ಞೆಯೆಂದೆನುತ ॥ ೪೮ ॥

ಇದನರಿಯದೀ ನರಸುರಾಸುರ । ರಧಿಕವಪ ಮೋಹಾಂಧಕಾರದ ।
ಉದಿಸಿದೀ ಹಮ್ಮಿನ ವಿಕಾರದ ಮದದ ಗರ್ವದಲಿ ॥
ಮದಿಸಿ ಕುಲ, ಬಲ, ರೂಪು, ಯೌವನ, । ಸುದತಿ, ಸಂಪದ್ವಿದ್ಯೆ, ತಪವೆಂ ।
ಬುದರೊಳೊಡಲನು ಮರೆದು ಕೆಡುತಿಹರೆಂವನಾ ಮುನಿಪ ॥ ೪೯ ॥

ತನ್ನ ಭುಜಗಳ ನೋಡಿಕೊಂಬನು; । ಸನ್ನೆಯನು ಮಾಡುವನು ಕಣ್ಣಿನ ।
ಲನ್ಯರೊಡಲನು ಕೆಲಕೆ ಕೆಡಹುತೆ ಗಹಗಹಿಸಿ ನಗುವ; ॥

---

೪೬. ಬಲನಿಷೂದನ—(ಬಲನೆಂಬ ರಾಕ್ಷಸನನ್ನು ಕೊಂದವನು.) ಇಂದ್ರ. ಕುಲಾದ್ರಿಗಳು—ಮಹೇಂದ್ರ, ಮಲಯ, ಸಹ್ಯ, ಸಾನುಮಾನ್, ಋಕ್ಷ, ವಿಂಧ್ಯ, ಪರಿಯಾತ್ರ ಈ ಏಳು.

೪೭. ಇವರು—ಇಂದ್ರ, ಸಮುದ್ರ, ದಿಕ್ಪಾಲಕರು, ಮನುಮುನಿಗಳು, ಕುಲಾದ್ರಿಗಳು ಅವಗಳೆಯಲು—ಮಾಡುವುದಿಲ್ಲವೆಂದು ಹೇಳಲು. ಬವಣೆ—(ಭ್ರಮಣೆ) ಕಷ್ಟ. ಸವನಿಸುವ—ದೊರೆಯುವ.

೪೮. ಕಾಲ—ಈ ಅದೃಷ್ಟವನ್ನು ಅನುಭವಿಸುವ ಕಾಲವು. ಮೇಳಯಿಪ—ಕೂಡುವ. ಬಾಳ—ಹಣೆ.

ತನ್ನತಂದನವೆಂದು ಪಾಡುವ; | ಕೆನ್ನೆಯಲಿ ತುರುಬಿಡುವನೊರಗಿಸಿ ; |
ಕುನ್ನಿ ಯೌವನವೆಂಬ ಸನ್ನಿವಿಕಾರವೆಡೆಗೊಂಡು || ೫೦ ||

ಮಣಿಯನಾರಿಗು; ಮಾನ್ಯರನುತಾ|ತೃಣಕುಬಗೆಯನು; ಗುಣಿಗಳೊಳಗವ|
ಗುಣವನೆಣಿಸುವ; ಕುಹಕಿಗಳು ಕೊಂಡಾಡೆ ಕೊನರುವನು ; ||
ಅಣಕವಾಡುವನಾರನಾದರು; | ಸೆಣಸುವನು ಸಜ್ಜನರ ಕಂಡರೆ; |
ಬಣಗುಮರ್ತ್ಯನು ಬರಿದೆ ಯೌವನವೆಂಬ ಗರ್ವದಲಿ || ೫೧ ||

ರಕ್ಕಸನು ಮನೆಯನರ ಕಂಡರೆ; | ಕರ್ಕಶನು ನೆರೆಹೊರೆಗೆ; ಸರ್ವರ |
ಸೊಕ್ಕಿ ವೆಕ್ಕಸವಾಗಿ ಗರ್ವದಿ ಧಿಕ್ಕರಿಸಿ ನುಡಿವ; ||
ಉಕ್ಕಿಯುರಿಯುತ್ತುತ್ತಮೋತ್ತಮ | ರೊಕ್ಕಲಿಗೆ ನೀರೆಳೆವನಕಟಾ! |
ಮುಕ್ಕಳಾಟಿಕೆಯಂತೆ ಕೆಕ್ಕನೆ ಕೆಲೆವನವನೆಂದ || ೫೨ ||

ಲಶುನಮಾಂಸಕಳಂಜಮದ್ಯಗ | ಳಶನ; ವಾರಾಂಗನೆಯರಲಿ ದು |
ರ್ವ್ಯಸನ; ಪಿಸುಣರ ಹಿಂಸಕರ ಗಡಣದಲಿ ನೆರೆ ಗೋಷ್ಠಿ; ||
ಹುಸಿಯ ನುಡಿ; ಹೊಸಪರಿಯ ವೇಷದಿ|ಹಸಿಯ ತುರುಕನವೋಲು ಕತ್ತಿಯ|
ಕೊಸರಿ ಝಳಪಿಸಿ ಕೂಗಿ ಕೊನರುವನೊಡಲ ನೇವರಿಸಿ || ೫೩ ||

---

೫೦. ಕೆಲಕೆ—ಒಂದು ಪಕ್ಕಕ್ಕೆ. ತನ್ನತಂದನ—ಅರ್ಥವಿಲ್ಲದ ಹಾಡುಗಾರಿಕೆ. ಕುನ್ನಿ—ನಾಯಿಯಂಥ ಮನುಷ್ಯನು (ಇದು ಈ ಪದ್ಯದಲ್ಲಿ ಕರ್ತೃ). ಸನ್ನಿವಿಕಾರವೆಡೆಗೊಂಡು--ಸನ್ನಿಯ ವಿಕಾರವು ತನ್ನನ್ನು ಆವರಿಸಿರುವದರಿಂದ.

೫೧. ಮಣಿಯನು—ಬಗ್ಗುವದಿಲ್ಲ. ತೃಣಕು ಬಗೆಯನು—ಹುಲ್ಲಿಗಿಂತ ಕಡೆಯಾಗಿ ಕಾಣುವನು. ಇಲ್ಲಿ ಕೆಲವು ಕಡೆ 'ತೃಣಕೆ ಬಗೆವನು' ಎಂದಿದೆ. ಎಂದರೆ ಹುಲ್ಲಿನಂತೆ ಕೀಳಾಗಿ ಕಾಣುವನೆಂದರ್ಥ. ಕೊನರುವನು.-ಉಬ್ಬುವನು. ಅಣಕವಾಡುವನು--ಹಾಸ್ಯ ಮಾಡುವನು.

೫೨. ಒಕ್ಕಲಿಗೆ ನೀರೆಳೆವನು--ಅವರ ಬಾಳುವಿಕೆಯನ್ನು ಹಾಳುಮಾಡುವನು. ಕೆಲೆವನು--ಆನಂದದಿಂದ ಗಟ್ಟಿಯಾಗಿ ಕೂಗುವನು.

೫೩. ಲಶುನ--ಬೆಳ್ಳುಳ್ಳಿ. ಕಳಂಜ--ವಿಷಯುಕ್ತವಾದ ಬಾಣದಿಂದ ಸತ್ತ ಮೃಗಪಕ್ಷಿಗಳ ಮಾಂಸ. ಪಿಸುಣರ --ಚಾಡಿಕೋರರ. ಹಸಿಯ--ಪ್ರಾಯಮದವುಳ್ಳ. ಒಡಲ ನೇವರಿಸಿ--ಎದೆಯನ್ನು ಉಬ್ಬಿಸಿಕೊಂಡು (ನೆಟ್ಟಗೆ ಮಾಡಿಕೊಂಡು).

ತರ್ಕಶಾಸ್ತ್ರವ ಕಲಿತು, ವಾದದ । ಯುಕ್ತಿ, ವೆಕ್ಕಸವಾಗಿ ವಾಸ್ಯರ ।
ಧಿಕ್ಕರಿಸಿ, ಸರ್ವಂಕಷತ್ವದಿ ಗರ್ವವೆಡೆಗೊಂಡು ॥
ಬೆಕ್ಕನೇ ಬೆರೆತಿಹ ದುರಾತ್ಮನು । ಸೊಕ್ಕಿ ತಾ ಸರ್ವಜ್ಞನೆಂಬ ಪ ।
ರಾಕ್ರಮದೊಳೊಡಲರಿಯ ವಿದ್ಯೋನ್ಮಾದವೆಡೆಗೊಂಡು ॥ ೫೪ ॥

ಎನ್ನ ತಾಯಿ ಕುಲಕ್ಕೆ ಮಿಗಿಲಹ । ಕೆನ್ನ ಸತಿಯುಳ ಹರೆಯವಾರಿಗೆ? ।
ಎನ್ನ ಪಿತನಿಂದಧಿಕರಾರೆನಗಾರು ಸರಿಯೆಂದು ॥
ತನ್ನ ತಾ ಕೊಂಡಾಡುತನ್ಯರ । ಚುನ್ನವಾಡುವ; ಹೆಮ್ಮೆಯಿಂದವ ।
ತನ್ನ ನೆಗುವರನರಿಯ; ಕುಲಮದವೆಂಬ ಗರ ಹೊಡೆದು ॥ ೫೫ ॥

ಯೋಗಸಿದ್ಧಿಯ ಪಡೆದು, ರಾಜ್ಯದ। ಭೋಗವನು ಭೋಗಿಸಿ, ಪರಾಕ್ರಮಿ।
ಯಾಗಿ, ಸಪ್ತದ್ವೀಪಗಳಿಗಧಿಪತಿಯು ತಾನೆನಿಸಿ, ॥
ಯೋಗಿಯಾಗಿಹ ಕಾರ್ತವೀರ್ಯನು । ಭಾರ್ಗವನ ಪರಶುವಿಗೆ ಭುಜಗಳ ।
ನೀಗಿ ಕಳೆದನು ರಾಜ್ಯಮುಪದಲಿ ಮಗನೆ ಕೇಳೆಂದ ॥ ೫೬ ॥

ಹೆಚ್ಚಿದತಿಕೋಪದಿ ತಪಸ್ವಿನ । ಹೆಚ್ಚಳದೊಳಿಂದ್ರನ ಸಮೃದ್ಧಿಯ ।
ತುಚ್ಛವಾಗಿಯೆ ಮಾಡಿದನು ದುರ್ವಾಸ ರೋಷದಲಿ ; ॥
ಸಚ್ಚರಿತನಾದಂಬರೀಷಗೆ । ಮುಚ್ಚರಿಸಲಚ್ಯುತನ ಚಕ್ರವು ।
ಹುಚ್ಚುಮಾಡಿತು; ಗರ್ವವಾರಿಗು ಸರ್ವಥಾ ಬೇಡ ॥ ೫೭ ॥

ಸರ್ವಕರ್ಮಂಗಳಲಿ ದಕ್ಷನು, । ಸರ್ವಜನಪಾಲಕನು ದಕ್ಷನು ।
ಶರ್ವವಿರಹಿತವಾದ ಯಜ್ಞವ ಮಾಡೆ ಗರ್ವದಲಿ ॥

---

೫೪. ಸರ್ವಂಕಷತ್ವ---ಎಲ್ಲರನ್ನೂ ಸೋಲಿಸುವದು. ಗರ್ವವೆಡೆಗೊಂಡು--ಗರ್ವವು ಮನಸ್ಸನ್ನು ಆವರಿಸಿಕೊಂಡು. ಒಡಲರಿಯ--ಮೈಮೇಲಿನ ಎಚ್ಚರವಿಲ್ಲದಿರುವನು. ವಿದ್ಯೋನ್ಮಾದ--ವಿದ್ಯಾಗರ್ವ.

೫೫. ಚುನ್ನವಾಡುವ---ಹಾಸ್ಯಮಾಡುವನು. ಗರ--ವಿಷ ಅಥವಾ ಗ್ರಹ (ಭೂತ).

೫೬. ಸಪ್ತದ್ವೀಪಗಳು--ಜಂಬೂ, ಪ್ಲಕ್ಷ, ಕುಶ, ಕ್ರೌಂಚ, ಶಾಕ, ಶಾಲ್ಮಲಿ, ಪುಷ್ಕರ. ಕಾರ್ತವೀರ್ಯನ ಕಥೆಗಾಗಿ ಪರಿಶಿಷ್ಟವನ್ನು ನೋಡಿ.

೫೭. ಹೆಚ್ಚಳ--ಗರ್ವ. ಇಂದ್ರನ ಮತ್ತು ದುರ್ವಾಸರ ಗರ್ವದ ಕಥೆಗಳಿಗೆ ಪರಿಶಿಷ್ಟವನ್ನು ನೋಡಿ.

ನಿರ್ವಹಿಸಲಾರದೆ ಸದಸ್ಯರು । ಸರ್ವಸಂಪತ್ತಿಸ್ವಸಹಿತ ಕೆಟ್ಟರು ; ।
ಸರ್ವಥಾ ಮದ ಮಾನ ಮತ್ಸರ ಕೇಡು ಮರ್ತ್ಯರಿಗೆ　　|| ೫೮ ||

ದರ್ಪಕನು ಲಾವಣ್ಯದರ್ಪದೊ । ಳಿರ್ಪ ಮತಿಯಿಂ ಮೇಲನರಿಯದೆ ।
ತಪ್ಪುಮಾಡಿಯೆ ಕೆಟ್ಟನಕಟಾ! ಸರ್ಪಭೂಷಣಗೆ ॥
ತಪ್ಪು, ಮದ, ಮಾತ್ಸರ್ಯ, ಮರ್ತ್ಯರಿ । ಗೊಪ್ಪುವದೆ? ಅದನರಿಯರಹಹಾ ! ।
ದರ್ಪಬುದ್ಧಿಯ ನೀಚರಿಗೆ ಗುರುದೈವವೆಲ್ಲಿಯದು ?　　|| ೫೯ ||

ಶೀಘ್ರದಿಂದಲಿ ಯಾಜ್ಞವಲ್ಕ್ಯ ಸ । ಮಗ್ರವಿದ್ಯೆಯ ಕಲಿತು ಮದದಿಂ ।
ವ್ಯಗ್ರನಾಗುತ್ತುಳಿದವರ ಜರಿದಾಡೆ ಗುರು ಕನಲಿ ॥
ಅಗ್ನಿ ಸನ್ನಿಭನಾಗಿ ವಿದ್ಯೆಯ । ಭಗ್ನವಾಗಿಸಿ ಕಾರಿಸಿದನ ।
ತ್ಯುಗ್ರದೊಳಗದರಿಂದ ಗುರುಹಿರಿಯರಲಿ ಮದ ಬೇಡ　　|| ೬೦ ||

---

೫೮. ದಕ್ಷನು--ಸಮರ್ಥನಾದ. ಇದು ಮುಂದಿನ ಪಾದದ ಕೊನೆಯಲ್ಲಿರುವ ದಕ್ಷ ಬ್ರಹ್ಮನೆಂಬರ್ಥದ ದಕ್ಷನು ಎಂಬ ಮಾತಿಗೆ ವಿಶೇಷಣ. ಸದಸ್ಯರು--ಸಭಿಕರು. ದಕ್ಷನ ಕಥೆಗಾಗಿ ಪರಿಶಿಷ್ಟವನ್ನು ನೋಡಿ.

೫೯. ದರ್ಪಕನು--ಮನ್ಮಥನು. ಅವನ ದರ್ಪದ ಕಥೆಗೆ ಪೀಠಿಕೆಯನ್ನು ನೋಡಿ. ಮೇಲನು+ ಅರಿಯದೆ--ಮುಂದಾಗುವದನ್ನು ತಿಳಿಯದೆ. ದರ್ಪಬುದ್ಧಿ--ಗರ್ವದಿಂದ ಕೂಡಿದ ಬುದ್ಧಿ.

೬೦. 'ಶೀಘ್ರದಿಂದಲಿ.... .ಕನಲಿ' ಎಂಬಲ್ಲಿ ಬಹು ಕಡೆ "ಯಾಜ್ಞವಲ್ಕ್ಯಕಹೋಳನಲ್ಲಿ ಸಮಗ್ರವಿದ್ಯೆಯ ಕಲಿತು ವಾದದಿ ನಿಗ್ರಹಸ್ಥಾನವನು ಗುರುವಿಗೆ ಮಾಡೆ ಕೋಪದಲಿ" ಎಂದಿದೆ. ಈ ಮೂಲದಿಂದ ಯಾಜ್ಞವಲ್ಕ್ಯರು ಕಹೋಳನೆಂಬ ಗುರುವಿನಲ್ಲಿ ಅಧ್ಯಯನಮಾಡಿದರೆಂದು ತಿಳಿಯುತ್ತದೆ. ಇದಕ್ಕೆ ನಮಗೆಲ್ಲಿಯೂ ಆಧಾರವು ದೊರೆತಿಲ್ಲ. ಅವರ ಗುರು ವೈಶಂಪಾಯನರೆಂದು ವಿಷ್ಣುಪುರಾಣದಲ್ಲಿದೆ. ಯಾಜ್ಞವಲ್ಕ್ಯರಿಗೂ ಕಹೋಳನಿಗೂ ಸಂಬಂಧಪಟ್ಟ ಕಥೆ ಬೃಹದಾರಣ್ಯಕೋಪನಿಷತ್ತಿನಲ್ಲಿ ಬಂದಿದೆ. ಆದರೆ ಅಲ್ಲಿ ಕಹೋಳನು ಯಾಜ್ಞವಲ್ಕ್ಯರ ಗುರುವಲ್ಲ. ಅಲ್ಲಿ ಅವನು ಯಾಜ್ಞವಲ್ಕ್ಯರಿಂದ ನಿಗ್ರಹಸ್ಥಾನವನ್ನು ಪಡೆದಿರುವದು ನಿಜ; ಆದರೆ ಅವರ ವಿದ್ಯೆಯನ್ನು ಕಕ್ಕಿಸಿಲ್ಲ-ವಿದ್ಯೆಯನ್ನು ಕಕ್ಕಿಸಿದ ಕಥೆ ಬೇರೆಯಿದೆ. ಪರಿಶಿಷ್ಟವನ್ನು ನೋಡಿ. ಇದರಿಂದಲೂ ಈ ಪದ್ಯವು ಮುಂದೆಲ್ಲ ಗಕಾರಪ್ರಾಸದ್ದಾಗಿದ್ದು ೧ ನೇ ಪಾದದಲ್ಲಿ "ಯಾಜ್ಞವಲ್ಕ್ಯ" ಎಂದು ಜಕಾರಪ್ರಾಸವು ಬಂದಂತಾಗುವದರಿಂದ ಈ ಪದ್ಯವನ್ನು ಈಗಿನ ರೂಪಕ್ಕೆ ತಿದ್ದಬೇಕಾಯಿತು. ಕನಲಿ--ಕೋಪಗೊಂಡು. ಅಗ್ನಿಸನ್ನಿಭನಾಗಿ---ಬೆಂಕಿಯಂತೆ ತಾಪಗೊಂಡು.

ಪರಶುರಾಮನು ಕ್ಷಾತ್ರಕುಲವನು । ತರಿದು, ನಿಃಕ್ಷತ್ರವನು ಮಾಡಿಯೆ, ।
ಧರೆಯ ಕಶ್ಯಪಗಿತ್ತೆನೆಂಬೀ ಶೌರ್ಯಗರ್ವದಲಿ ॥
ಅರಿಯದೇ ರಘುಪತಿಯ ಸತ್ತ್ವವ । ಪರಿಭವವನೈದಿದನು; ಬಲುಮೆಯ ।
ತೆರನ ಪರಿಯಿದು ಮಗನೆ; ಬಲುಮದ ಕಷ್ಟ ಕೇಳೆಂದ ॥ ೬೧ ॥

ಮಚ್ಚರದಿ ವಿಂಧ್ಯಾದ್ರಿ ಮೇರುವ । ತುಚ್ಛವಾಗಿಯೆ ಮಾಡಿ ಬೆಳೆದು ಮ ।
ಹೋಚ್ಛ್ರಯದಲಾದಿತ್ಯಮಂಡಲಕಡ್ಡವಾಗಿರಲು ॥
ಸಚ್ಚರಿತನಾಗಿದ್ದಗಸ್ತ್ಯನು । ಹೆಚ್ಚು ತಾನೆಂದೆಂಬ ಗರ್ವವ ।
ನುಚ್ಚುಮಾಡಿಯೆ ನೆಲದ ಸಮದಲಿ ಬೆಚ್ಚಿ ಬೆರಸಿದನು ॥ ೬೨ ॥

ಕುಲ, ಬಲ, ಧನಾಕಾರ, ಯೌವನ, । ಲಲನೆ, ರಾಜ್ಯಗಳೆಂಬ ಮದಗಳು ।
ತಲೆಯ ಹಿಡಿದಿರೆ ರಾಜರಾಜನ ನಿಜಕುಮಾರಕರು ॥
ಜಲದೊಳಂಗನೆಯರ ಸಮೇಳದ । ಲೊಲಿದು ವಿಹರಿಸುತಿರಲು ನಾರದ ।
ಮುಳಿದು ಶಪಿಸಲು ಮರಗಳಾದರು ಮಗನೆ ಕೇಳೆಂದ ॥ ೬೩ ॥

ಮಚ್ಚರದೊಳಿತರರಿಗೆ ಹಾನಿಯ । ಹೆಚ್ಚಿಸುವರತಿ ಮೂರ್ಖತನದಲಿ ।
ಹುಚ್ಚು ಹಿಡಿದವರಾಗುತೊಬ್ಬರಿಗೊಬ್ಬರಿದಿರಾಗಿ ; ॥
ನಿಚ್ಚನಿಚ್ಚಲು ಹೋರುವರು ಗಜ। ಕಚ್ಛಪನ್ಯಾಯದಲಿ; ಸರ್ಪವು ।
ಕಚ್ಚಿ ಬರಿಬಾಯೆಂಬ ಗಾದೆಯ ತೆರದಿ ನಿಷ್ಫಲವು ॥ ೬೪ ॥

---

೬೧. ನಿಃಕ್ಷತ್ರವನು---ಕ್ಷತ್ರಿಯರಿಲ್ಲದಂತೆ. ಪರಶುರಾಮನ ಪರಾಜಯದ ಕಥೆಗಾಗಿ ಪರಿಶಿಷ್ಟವನ್ನು ನೋಡಿ.

೬೨. ಬೆಚ್ಚಿ---ಬೆಸುಗೆಯನ್ನು ಹಾಕಿ. ವಿಂಧ್ಯಾದ್ರಿಯ ಗರ್ವದ ಕಥೆಗೆ ಪರಿಶಿಷ್ಟವನ್ನು ನೋಡಿ.

೬೩. ರಾಜರಾಜ---ಕುಬೇರ. ಈ ಕುಬೇರನ ಮಕ್ಕಳ ಕಥೆಗಾಗಿ ಪರಿಶಿಷ್ಟವನ್ನು ನೋಡಿ. ಮುಳಿದು--ಸಿಟ್ಟಾಗಿ. ಸಮೇಳದಲಿ--ಜೊತೆಯಲ್ಲಿ.

೬೪. ನಿಚ್ಚ--ನಿತ್ಯ. ಗಜಕಚ್ಛಪನ್ಯಾಯ--ಆನೆಯು ಯಾರನ್ನೂ ಲಕ್ಷ್ಯದಲ್ಲಿಡದ ದೊಡ್ಡ ಪ್ರಾಣಿ. ಕಚ್ಛಪ (ಆಮೆ) ವು ಬಹು ಹೆದರುವ ಸ್ವಭಾವದ ಸಣ್ಣ ಪ್ರಾಣಿ. ಇವೆರಡೂ ತಮ್ಮ ತಮ್ಮ ಯೋಗ್ಯತೆಗಳನ್ನು ನೋಡಿಕೊಳ್ಳದೆ ಒಂದಕ್ಕೊಂದು ಹೋರಾಡುವದು. ಈ ಸಂದರ್ಭಕ್ಕೊಂದು ಕಥೆಯೂ ಇದೆ. ಪರಿಶಿಷ್ಟವನ್ನು ನೋಡಿ. ಬರಿಬಾಯ್--ಹಾವು ಕಚ್ಚಿದರೆ ಅದರ ಬಾಯಿಗೆ ಆಹಾರವೇನೂ ಸಿಕ್ಕಿದಂತಾಗಲಿಲ್ಲವೆಂದು ತಾತ್ಪರ್ಯ.

ಕೋಪ ತನ್ನನು ಸುಡುವದವರಿಂ । ಪಾಪಿ; ಗುರುಹಿರಿಯರ ಮನಕೆ ಸಂ ।
ತಾಪಕಾರಣವಾಗಿಹುದು ; ಸ್ಮರಣೆ ಸಮಾಧಾನ ॥
ಪೋಪುದೊಡಲನುಮರೆವನದರಿಂ। ಭಾಪು! ಕೋಪದಮಹಿಮೆಯೆಂತುಟೊ!! ।
ಶಾಪದಿಂದ ವಸಿಷ್ಠನೂರ್ವಶಿಗುದಿಸನೇ? ಮುನ್ನ ॥ ೬೫ ॥

ಕಣ್ಣುಗಳು ಕೆಂಪಾಗೆ, ಮೋರೆಯ । ಬಣ್ಣವತಿರೌದ್ರವನು ತಳೆದಿರ ।
ಲನ್ನಪಾನದಲಿಚ್ಛೆಗೆಟ್ಟಿರೆ ಕೋಪತಾಪದಲಿ ॥
ಉಣ್ಣದುರಿಯುತ ಗುರುಹಿರಿಯರನು । ಕಣ್ಣುಗಾಣದೆ ಬರಿದೆ ಬಗುಳುವ, ।
ಸನ್ನಿ ಹಿಡಿದವನಂತೆ ನಡುಗುವ, ಕುಣಿವ, ಕೂಗುವನು ॥ ೬೬ ॥

ವಾಸಿಪಂಥಗಳೆಂಬ ಬಲುಮೆಯ । ಪಾಶದಲಿ ದೃಢವಾಗಿ ಬಿಗಿವಡೆ ।
ದಾ ಸುಯೋಧನಪಾಂಡುಪುತ್ರರು ಬಂಧುಜನಸಹಿತ ॥
ನಾಶವಾದರು ಮೂರ್ಖತನದಿಂ । ದೇಸು ಪುಣ್ಯವ ಗಳಿಸಿಕೊಂಡರು ।
ದ್ವೇಷವೆಂಬೀ ದೋಷದಿಂದಲಿ ಲೇಸು ದೊರಕುವದೆ? ॥ ೬೭ ॥

ಇಂಪು ತರತರವಾಗಲಕಟ! ಪ । ರಂಪರೆಯನೀಕ್ಷಿಸದೆ, ಗುಹ್ಯದ ।
ಲಂಪಟತ್ವದೊಳಿರುತ, ವೃದ್ಧಾಚಾರವನು ಬಿಟ್ಟು ॥
ಕೆಂಪುತುಟಿಯಬಲೆಯರ ರೂಪಿನ । ಲಂಪಟದ ಪುರುಷರನು ರತಿಪತಿ ।
ಕೆಂಪುದೋರದವೋಲು ಕೊರಳನು ಕಂಪಿಸದೆ ಕೊಯ್ವ ॥ ೬೮ ॥

ಹೆರನ ಹಣೆಗಣ್ಣಿಂದಲುರಿದವ । ಮರಳಿ ಮನಸಿಜನೆನಿಸಿ ಲೋಕವ ।
ಸರಳ ಮೊನೆಯಲಿ ಕೊರಳ ಕೊಯ್ವನು ಸಾಯದಂದದಲಿ ; ॥

---

೬೫. ವಸಿಷ್ಠನು ಊರ್ವಶಿಗೆ ಮಗನಾದ ಕಥೆಗಾಗಿ ಪರಿಶಿಷ್ಟವನ್ನು ನೋಡಿ.

೬೭. ವಾಸಿ--ಹಠ. ಪಂಥ--ಜೂಜು. ಸುಯೋಧನಪಾಂಡುಪುತ್ರರ ಕಥೆಗಾಗಿ ಪರಿಶಿಷ್ಟವನ್ನು ನೋಡಿ.

೬೮. ಗುಹ್ಯ---ಸ್ತ್ರೀಪುರುಷರು ಮುಚ್ಚಿಕೊಂಡಿರುವ ಅವಯವಗಳು (ಭಗ, ಶಿಶ್ನ). ಲಂಪಟತ್ವ--ಆಸಕ್ತಿ. ಕೆಂಪುದೋರದವೋಲು--ರಕ್ತವು ಕಾಣದಂತೆ. 'ಕೆಂಪು' ಎಂಬಲ್ಲಿ ಕಂಪು' ಎಂದೂ ಕೆಲವು ಕಡೆ ಉಂಟು. ಕಂಪು--ವಾಸನೆ. ಕಂಪುದೋರದವೋಲು--ಯಾರಿಗೂ ತಿಳಿಯದ ಹಾಗೆ.

ಪರಿಹರಿಸಲಳವಲ್ಲವಾರಿಗು ; । ಹರಿಹರಬ್ರಹ್ಮಾದಿಗಳು ಸ್ತ್ರೀ ||
ಪುರುಷವರ್ಗಮಿದೆಲ್ಲ ಗುಹ್ಯದ ಲಂಪಟದ ಬದುಕು || ೧೯ ||

ಮೂರುಕಾಲದಿ ಮುಳುಗಿ ನೀರಲಿ, । ನಾರ ಸೀರೆಯನುಟ್ಟು, ಪರ್ಣಾ ।
ಹಾರದಲಿ, ಮಳೆಗಾಳಿಗಂಜದೆ, ಬಿಸಿಲ ಲೆಕ್ಕಿಸದೆ, ||
ಘೋರತಪವನು ಮಾಡಿ, ವನವನು । ಸೇರಿಕೊಂಡಿಹ ಮುನಿಗಳೆಲ್ಲರು ।
ನಾರಿಯರ ವಶರಾಗಿ ಹೋದರು ಮಾರಗಿದಿರಾರು ? || ೨೦ ||

ಆರುಮಿಲ್ಲದ ವಿಪಿನದಲಿ ಹಾ । ಳೂರ ಕೋಳಕೆ ಕಾಲ ತಗಲಿಸಿ, ।
ದಾರಿಗರಿಗವ ಹಲ್ಲುಗಿರಿವಂದದಲಿ ಸಂಸೃತಿಯ ||
ಘೋರದುಃಖಾಟವಿಯ ಮಧ್ಯದಿ । ಮಾರಸೆಂಬ ಕಿರಾತನೊಡ್ಡಿದ ।
ನಾರಿಯೆಂಬೀ ಬಲೆಗೆ ಬಿದ್ದವಗಾರು ಗತಿಯೆಂದ || ೨೧ ||

ಬಡಿಶಗತವಹ ಮತ್ಸ್ಯದಂದದಿ । ಕೆಡೆದು, ಬಡಿಗಲ್ಲಿನಲಿ ಹೆಗ್ಗಣ ।
ಮಿಡುಕುವಂದದಿ ಮದನಶರಮಾಯಾಪ್ರಬಂಧದಲಿ ||
ತೊಡರಿ, ಮಡದಿಯ ನೋಟವೆಂಬೀ । ತಡಿಕೆಬಲೆಯಲಿ ಸಿಕ್ಕಿ, ರೆಕ್ಕೆಯ ।
ಕಡಿದ ಪಕ್ಷಿಯ ತೆರದೊಳಡಿಯಿಡಲಾರನವನೆಂದ || ೨೨ ||

ಕರಿ,ತುರಗ,ಪಶು,ಪಕ್ಷಿ,ಮೃಗ,ಸೂ । ಕರ,ಶುನಕ,ಮಾರ್ಜಾಲ,ಕುಕ್ಕುಟ, ।
ಸರಘ, ಶಲಭ, ಸರೀಸೃಪಾಳಿ, ಜಳೂಕ, ಕೃಮಿ, ಕೀಟ, ||
ಪುರಗಗನಜಲವನಚರಂಗಳು, । ಸುರನರೋರಗರೆಲ್ಲ ಮಿಥುನೀ !
ಕರಿಸಿಕೊಂಡಿಹರೈಸೆ ! ಗುಹ್ಯದ ಲಂಪಟದ ಬದುಕು || ೨೩ ||

---

೨೦. ಮಾರಗೆ--ಮನ್ಮಥನಿಗೆ.

೨೨. ಬಡಿಶ--ಮೀನನ್ನು ಹಿಡಿಯುವ ಗಾಳ. ಬಡಿಗಲ್ಲಿನಲಿ--ಇತರರು ತನ್ನ ಮೇಲೆ ಒಗೆಯುತ್ತಿರುವ ಕಲ್ಲಿನಿಂದ. ಮಿಡುಕುವಂದದಿ---ಕಣ್ಣುಕಣ್ಣುಬಿಡುವ ಹಾಗೆ. ತಡಿಕೆ ಬಲೆ---ತಪ್ಪಿಸಿಕೊಳ್ಳುವದಕ್ಕಾಗದಂತೆ ಒತ್ತೊತ್ತಾಗಿ ಹೆಣೆದಿರುವ ಬಲೆ.

೨೩. ಸೂಕರ---ಹಂದಿ. ಶುನಕ--ನಾಯಿ. ಸರಘ--ಜೇನುನೊಣ. ಶಲಭ--ಪತಂಗದ ಹುಳು. ಸರೀಸೃಪಾಳಿ--ಹಾವುಗಳ ಗುಂಪು. ಜಳೂಕ--ಜಿಗಳೆ. ಪುರ (ಚರಂಗಳು)--- ಹಸು, ಕುದುರೆ ಮೊದಲಾದ ಊರ ಪ್ರಾಣಿಗಳು. ಗಗನ(ಚರಂಗಳು)---ಕಾಗೆ, ಗುಬ್ಬಿ ಮೊದಲಾದ ಹಾರಾಡುವ ಪಕ್ಷಿಗಳು. ಜಲ(ಚರಂಗಳು)--ಮೀನು, ಮೊಸಳೆ

ಸ್ತ್ರೀಪುರುಷರೆಂದೆಂಬ ಭೇದವ । ರೂಪಗಳ ಕಲ್ಪಿಸಿ, ರತೀಚ್ಛೆಯ ।
ಲಾ ಪರಿಯಲನ್ಯೋನ್ಯಸಂಗದಿ ಸಖ್ಯವನು ಗೈಸಿ, ॥
ಈ ಪರಿಯ ವೀರ್ಯದಲಿ ಸಂತತಿ । ರೂಪನಾಮಗಳಾಗಿ ಪಸರಿಪ ।
ನೀ ಪರಿಯಿದೀಶ್ವರನ ಲೀಲಾಜಾಲ ನೋಡೆಂದ　　॥ ೭೪ ॥

ಸ್ತ್ರೀಯರಿಗೆ ಪುರುಷೇಚ್ಛೆ, ಪುರುಷರಿ । ಗಾ ಯುವತಿಯರೊಳಿಚ್ಛೆಯಿಂತೀ ।
ನ್ಯಾಯದ ಪರಂಪರೆಯ ನೋಡಲನಾದಿಸಿದ್ಧವಲಾ ! ॥
ಮಾಯೆ ತಾನಾ ಬ್ರಹ್ಮನೇ ಮೊದ । ಲಾ ಯಿರುವೆ ಕಡೆಯಾಗಿ ನಡೆದಿರೆ ।
ಬಾಯ ಮಾತಿನಲೇನು ! ಬರಿದೇ ಬಿಡದು ಕಡುಮೋಹ　　॥ ೭೫ ॥

ಆವನಾಗಲಿ ಚೆಲುವನಾಗಿರೆ । ಭಾವೆ ಬಯಸುವಳವನ ; ಭಾವೆಯ ।
ದಾವಳಾಗಲಿ ಚೆಲುವೆಯಾಗಿರೆ ಪುರುಷ ಕಾಮಿಸುವ ; ॥
ಈ ವಿಧದಲನ್ಯೋನ್ಯದೃಷ್ಟಿಯ । ಲಾವಂಸಿ ಮೋಹಾತಿಶಯದಲಿ ।
ಸಾವರೆಂತುಟೊ ! ದೇವ ಮಾಡಿದ ಮಾಯೆಯಕಟೆಂದ　　॥ ೭೬ ॥

ಸ್ತ್ರೀಪುರುಷರಿಗೆ ಸರಸ ಮಿಗೆ ಸ । ಲ್ಲಾಪದಿಂದಲಿ ಮದನಕದನೋ ।
ದ್ದೀಪನದಲನ್ಯೋನ್ಯವತಿಶಯವಾಗುತನುರಾಗ ॥
ಲೇಪವಡೆದಿರೆ, ಚಿತ್ತದಲಿ ಸಂ । ತಾಪವಗಲಿದರವರಿಗವರಿಗೆ, ।
ಭಾಪು! ಮಾಯೆಯ ಪರಿಯದೆಂತುಟೊ! ಬಯಲ ಭ್ರಮೆ ಬಿಡದು ॥ ೭೭ ॥

---

ಮೊದಲಾದವು. ವನ(ಚರಂಗಳು)–ಹುಲಿ, ಸಿಂಹ ಮೊದಲಾದ ಕಾಡುಮೃಗಗಳು. ಮಿಥುನೀಕರಿಸಿಕೊಂಡಿಹವು–ಗಂಡುಹೆಣ್ಣುಗಳ ಜೋಡಿಯಾಗಿರುವವು.

೭೪. ಪಸರಿಪನು–ಹರಡುವನು. ಲೀಲಾಜಾಲ–ಲೀಲೆ ಎಂಬ ಬಲೆ ಅಥವಾ ಲೀಲೆಗಳ ಸಮೂಹ.

೭೫. 'ತಾನಾಬ್ರಹ್ಮನೇ ಮೊದಲಾ' ಎಂಬಲ್ಲಿ ಕೆಲವು ಕಡೆ 'ಬ್ರಹ್ಮಾರಭ್ಯವಾಗಿರುತೀ' ಎಂದಿದೆ. ಆ ಬ್ರಹ್ಮನೇ ಮೊದಲು–ಆ ಬಹು ದೊಡ್ಡವನಾದ ಚತುರ್ಮುಖಬ್ರಹ್ಮನಿಂದ ಮೊದಲುಗೊಂಡು. ಆ ಇರುವೆ ಕಡೆಯಾಗಿ–ಬಹು ಸಣ್ಣದಾದ ಇರುವೆಯ ತನಕ.

೭೬. ಭಾವೆ–ಭಾಮೆ, ಸ್ತ್ರೀ.

೭೭. ಸಂತಾಪವು–ಅಗಲಿದರೆ ಅವರಿಗವರಿಗೆ ಸಂತಾಪವು ಆಗುವದೆಂದು ಭಾವ.

ಮಾಯೆಯೆಂದೆನಲೇನು? ವಿಷಯನಿ | ಕಾಯಲಂಪಟತನವವರೊಳಗು |
ಮಾ ಯುವತಿಯಲಿ ನೋಟಬೇಟದಿ ಕೂಟವನು ಪಡೆವು, ||
ಕಾಯವವಳಿಗಧೀನವಾಗಿರೆ, | ಗಾಯವಡೆದಂಗಜನ ಬಾಣಕೆ, |
ಬಾಯ ಕಿಸಿದಾಯಾಸಗೊಂಬುದೆ ಮಾಯೆ ಕೇಳೆಂದ || ೭೮ ||

ಚೆಂದುಟಿಯ, ಥಳಥಳಿಪ ಕದಪಿನ, | ಕುಂದರದನದ, ಕುಟಿಲಕುಂತಲ |
ದಿಂದೆಸೆವ ಪೆರೆನೊಸಲ, ಬೆಳಗುವ ಸೋಗೆಗಣ್ಣುಗಳ, ||
ಮಂದಹಾಸದಲಿಂದು ಸೌಖ್ಯವಿ | ದೆಂದು ಕೊರಚಾಡುವರು ಶ್ಲೇಷ್ಮದ |
ಮಂದಿರದ ಬಾಗಿಲುಗಳಂದದ ಮುಖದ ಚಂದವನು || ೭೯ ||

ಕಚ್ಚೆಪಚ್ಚಳಗಳನು ನೋಡಿನೊ | ಡಚ್ಚ ಹೇಸಿಗೆ ; ವಸ್ತ್ರದಿಂದಲಿ |
ಮುಚ್ಚಿಹುದು ; ಮೂಢರಿಗೆ ನೋಡಲು ಮೋಹಕರವಹುದು ; ||
ಹುಚ್ಚರದ ಕಣ್ಗಾಣರೇತಕೆ! | ನಿಚ್ಚನಿಚ್ಚಲು ತೋಳ ತೊಡೆಗಳ |
ಸ್ವಚ್ಛವಾಗಿಯೆ ತೊಳೆದೊಡಲ್ಲದೆ ಹೊದ್ದಲಳವಲ್ಲ || ೮೦ ||

ಬಂಡರಂಗನೆಯರ ಶರೀರವ | ಕಂಡು ಮೋಹಿಪರೇಕೆ ? ಮೂತ್ರದ |
ಗಂಡಿ ಹಿತ್ತಲ ಬಾಗಿಲಂದದೊಳಿಹುದಲಾ ಕುಂಡಿ ; ||
ಚೆಂಡಿನಂದದಿ ಬಿಗಿದ ಮಾಂಸವ | ದಿಂಡು ಮೊಲೆಗಳು; ಮುಖವು ಶ್ಲೇಷ್ಮದ|
ಜೊಂಡು; ಕಸದಂತೆಸೆವ ಕೇಶವು ಮುಸುಕಿಹುದು ಮುಂದೆ || ೮೧ ||

ಎಲುನರವಸೃಙ್ಮಾಂಸಸಂಕುಲ | ಹೊಲಸು ನಾರಲು ಕಂಡು ಹೇಸವೆ, |
ಲಲನೆಯೆಂಬೀ ರಕ್ತಮಲವೆಲುಮಾಂಸಪಿಂಡದಲಿ ||

---

೭೮. ವಿಷಯನಿಕಾಯಲಂಪಟತನ–ಹೊರಗಣ ಭೋಗಸಾಧನಗಳಲ್ಲಿ ಆಸಕ್ತನಾಗಿರುವದು. ಕೂಟ–ಸಂಗ.

೭೯. ಪೆರೆನೊಸಲ–ಚಂದ್ರನಂಥ ಹಣೆಯು. ಸೋಗೆಗಣ್ಣುಗಳ–ನವಿಲಿನ ಕಣ್ಣಿನಂಥ ಕಣ್ಣುಗಳ. ಕೊರಚಾಡುವರು–ಇಲ್ಲದಗುಣವನ್ನು ಆರೋಪಿಸಿ ಹೇಳುವರು. ಶ್ಲೇಷ್ಮದ ಮಂದಿರ–ಕಫದ ಮನೆ.

೮೦. ಕಚ್ಚೆ–ಕೌಪೀನ. ಪಚ್ಚಳಗಳು–ಬಚ್ಚಲಮನೆಗಳು (ಪ್ರಕ್ಷಾಳ–ತ್ಸ). ಹುಚ್ಚರು+ಅದ. ಹೊದ್ದಲು–ಸಮೀಪಕ್ಕೆ ಹೋಗುವದಕ್ಕೆ.

೮೧. ಬಂಡರು–ನಾಚಿಕೆ ಇಲ್ಲದವರು.

ಬಲುವೆುಯಾಗಿಯೆಭ್ರಮೆಯೊಳೊಂದಿದ। ಹೊಲೆಮನಕೆಹೋಲಿಕೆಯಪೇಳುವೆ
ಕೊಳೆತು ನಾರುವ ಹಡಿಕೆಗೆಳಸುವ ಹಳಿಯ ನಾಯಂತೆ ॥ ೮೨ ॥

ಗ್ರಾಮಸೂಕರಗೆಂತಮೇಧ್ಯವೆ । ಪ್ರೇಮವಾಗಿಹುದಾ ಪರಿಯೊಳೀ ।
ರಾಮಣೀಯಕ ಕಾಮುಕಗೆ ಕಾಮಿನಿಯ ದೇಹವಿದು; ॥
ಹಾ ! ಮಹೇಶ್ವರ!! ಎಂತು ಹಿತವೋ । ತಾಮಸರಿಗೀ ಮನುಜದೇಹವು।
ರೋಮಮಲವೆಲುಮಾಂಸಮಜ್ಜಾದಿಗಳ ಸಂಕುಲವು ॥ ೮೩ ॥

ಮೆಚ್ಚಿದವರಿಗೆ ಮರಣಸುಖವೆಂ । ದುಚ್ಚರಿಸಿ ಹೇಳುವರು; ಮೂತ್ರದ ।
ಬಚ್ಚಲಾಗಿಹ ಕೊಚ್ಚೆಗೇತಕೆ ಮೆಚ್ಚಿ ಮರುಳಾಗಿ ॥
ಬೆಚ್ಚಿಬೆರೆಯುತ ಭ್ರಾಂತರಾಗಿಹ । ರಚ್ಚ ಹೇಸಿಗೆಗೇತಕಕಟಾ ! ।
ಬಿಚ್ಚಿ ಹೇಳಲು ಪುರುಳ ಕಾಣೆನು ತುಚ್ಛತನುವಿದನು ॥ ೮೪ ॥

ಮಡದಿಯಳಪೇಕ್ಷೆಯಲಿಧನವನು । ಪಡೆದುಮದನಾತುರನುಮದುವೆಯ ।
ಸಡಗರದಲಾದವನು ಸಂಭ್ರಮದಿಂದಲಾಕೆಯನು ॥
ಬಿಡದೆ ರಮಿಸುತಲಿರ್ದು ಸ್ವರ್ಗವ । ಪಡೆವೆನೆಂಬಿಚ್ಛೆಯಲಿ ಕ್ರತುಗಳ ।
ನೊಡರಿಸುವನಿಹಪರದಿ ಗುಹ್ಯದ ಲಂಪಟವ ಬಯಸಿ ॥ ೮೫ ॥

---

೮೨. ಅಸೃಕ್ (ರಕ್ತ)+ಮಾಂಸ. ಹಡಿಕೆಗೆ–ಕೆಟ್ಟ ವಾಸನೆಗೆ. ಹಳಿಯ ನಾಯಂತೆ–ಹೇಸಿಕೆಯ ಶರೀರವನ್ನು ಎಷ್ಟುಸಲ ಮೋಹಿಸಿದರೂ ಇನ್ನೂ ಅದರ ಹೊಲಸಿನ ವಿಚಾರವೇ ಮನಸ್ಸಿಗೆ ಬರಲಿಲ್ಲವೆಂಬದನ್ನು ತೋರಿಸುವದಕ್ಕೆ ಇಲ್ಲಿ ಹಳಿಯ ನಾಯ ವಿಶೇಷಣವು ಬಂದಿದೆ.

೮೩. ಕಾಮುಕಗೆ ಕಾಮಿನಿಯ ದೇಹವಿದು ರಾಮಣೀಯಕವೆಂದನ್ವಯವು. ಮಜ್ಜಾದಿಗಳ–ಎಲುಬಿನ ಸಾರ ಮೊದಲಾದವುಗಳ.

೮೪. ಮರಣಸುಖ–ಮರಣಕಾಲದಲ್ಲಿ ಮೈಮೇಲಿನ ಎಚ್ಚರವಿಲ್ಲದ್ದರಿಂದ ಯಾವ ಸುಖದುಃಖಗಳ ಜ್ಞಾನವೂ ಇರುವದಿಲ್ಲವಷ್ಟೆ ; ಈ ಜ್ಞಾನಾಭಾವವನ್ನೆ ಪಾಮರರು ಸುಖವೆಂದು ತಿಳಿಯುತ್ತಾರೆ. ಬೆಚ್ಚಿ–ಅದರಲ್ಲಿಯೇ ಬೆಸೆದುಕೊಂಡು. ಬೆರೆಯುತ–ಗರ್ವಿಸುತ್ತ.

೮೫. ಒಡರಿಸುವನು–ಮಾಡುವನು.

ಸ್ತ್ರೀಪುರುಷಸಂಯೋಗವೆಂಬುದು । ಕಾಪಥವಲಾ! ಕಷ್ಟ!! ಹರಹರ!!! ।
ಸೋಪಹಾಸವು ತಿಳಿದು ಹೇಳಲು; ಶ್ರೀಪತಿಯೆ ಬಲ್ಲ;॥
ಹ್ರೀಪದವು, ಕ್ಷಣಸುಖವಿಕಾರವು, । ಗೋಪ್ಯವೇಕಾಂತೈಕನಿಷ್ಠವು, ।
ಛಾಪು ! ಮಾಯಾಭ್ರಾಂತಿಯೆಂತುಟೊ !! ಗ್ರಾಮ್ಯಧರ್ಮದಲಿ ॥ ೮೬ ॥

ಬಾಲ್ಯವಾರ್ಧಕ್ಯದೊಳಗೆಳ್ಳನಿ । ತಿಲ್ಲ ತನಗೆ ಸ್ವತಂತ್ರ; ಯೌವನ ।
ದಲ್ಲಿ ನಡೆವುದು ನಾಲ್ಕುದಿನವದು ತೋರುತಡಗುವದು ; ॥
ಸಲ್ಲಲಿತಸೌಂದರ್ಯಸೌಖ್ಯವ । ದೆಲ್ಲ ನಿಮಿಷಕೆ ವಿರಸವಪ್ಪುದು ; ।
ಬಲ್ಲ ವಿದ್ವಜ್ಜನರು ಮೊದಲಾಗೆಲ್ಲ ಭ್ರಮಿಸುವರು ॥ ೮೭ ॥

ಬ್ರಹ್ಮ ಮೊದಲಾದೆಲ್ಲರ ಮನೋ । ಧರ್ಮವಿದು:--ಹಗಲಿರುಳು ತಾವೇ ।
ಬ್ರಹ್ಮರೆಂದುಂ ತಮ್ಮ ಚರ್ಯವೆ ಸಚ್ಚರಿತವೆಂದು ॥
ಬ್ರಹ್ಮವನು ಬೋಧಿಪರು ಪರರಿಗೆ; । ತಮ್ಮ ನಡತೆಯ ನೋಡಿ ತಮಗದು ।
ಧರ್ಮವೆಂಬರು; ಮಗನೆ ಮಾಯೆಯ ಗೆಲುವಡಳವಲ್ಲ ॥ ೮೮ ॥

ಮಚ್ಛ ಜಿಹ್ವಾಲಂಪಟದಿ, ಗಜ । ಕಚ್ಛೆಯಲಿ, ನೇತ್ರದಲಿ ಶಲಭ, ಶ್ರ ।
ತೀಚ್ಛೆಯಲಿ ದರ್ವೀಕರನು, ಘ್ರಾಣೇಚ್ಛೆಯಲಿ ಭ್ರಮರ ॥
ಹುಚ್ಚುಗೊಂಡೊಂದೊಂದು ವಿಷಯಕೆ । ಮೆಚ್ಚಿ ಕೆಟ್ಟವು; ಪಂಚವಿಧವಿಷ ।
ಯೇಚ್ಛೆಯಲಿ ತಗಲಿರ್ಪ ಮನುಜನು ಕೆಡುವದೇನರಿದು ! ॥ ೮೯ ॥

---

೮೬. ಕಾಪಥವಲಾ—ಕೆಟ್ಟ ಹಾದಿಯಪ್ಪ! ಸೋಪಹಾಸವು—ನಗೆಗೀಡು. ಹ್ರೀಪದವು—ನಾಚಿಕೆಗೆ ಆಸ್ಪದವು. ಗೋಪ್ಯವು—ಯಾರಿಗೂ ಹೇಳಬಾರದಂಥಾದ್ದು. ಏಕಾಂತೈಕನಿಷ್ಠವು—ಎಂದೂ ಯಾರಿಗೂ ಕಾಣದಂತೆಯೇ ಮಾಡತಕ್ಕದ್ದು.

೮೮. ಬ್ರಹ್ಮ—ಚತುರ್ಮುಖಬ್ರಹ್ಮ. ಬ್ರಹ್ಮರು—ಪರಬ್ರಹ್ಮಸ್ವರೂಪರು. ಬ್ರಹ್ಮವನು—ಪರಬ್ರಹ್ಮವನ್ನು.

೮೯. ಮಚ್ಛ—(ಮತ್ಸ್ಯ) ಮೀನು. ದರ್ವೀಕರನು—ಹಾವು. ಪಂಚ........ಕೆಡುವದೇನರಿದು—ಮೀನಿನ ನಾಲಗೆಯು ಗಾಳದ ತುದಿಯ ಮಾಂಸದ ರುಚಿಗೂ ಗಂಡಾನೆಯ ಮೈ ಹೆಣ್ಣಾನೆಯ ಮೈಯ ಸ್ಪರ್ಶಕ್ಕೂ ಪತಂಗದ ಕಣ್ಣು ದೀಪದ ರೂಪಿಗೂ ಹಾವಿನ ಕಿವಿಯು ನಾಗಸ್ವರದ ದನಿಗೂ ದುಂಬಿಗಳ ಮೂಗು ಹೂವಿನ ವಾಸನೆಗೂ ಮೋಹಿಸುವದರಿಂದ ಮೋಸಹೋಗುವವು. ಮನುಷ್ಯನಿಗೆ ಈ ಐದು ಇಂದ್ರಿಯಗಳ ಇಚ್ಛೆಯೂ ಬಲವಾಗಿರುವದರಿಂದ ಇವನು ಕೆಡುವದೇನಾಶ್ಚರ್ಯ! ಈ ಅಭಿಪ್ರಾಯವನ್ನು ಶ್ರೀಶಂಕರಾಚಾರ್ಯರು ವಿವೇಕಚೂಡಾಮಣಿಯಲ್ಲಿ ಒಂದು ಶ್ಲೋಕದಲ್ಲಿ ಹೇಳಿರುವರು.

ಕುಂಭಕುಚಗಳಿಗೆಳಸುತೂರ್ವಶಿ । ರಂಭೆ ಮೊದಲಾದಪ್ಸರೆಯರನು ।
ಸಂಭ್ರಮದಲನುಭವಿಸಿ ದಣಿಯದೆ, ಗೌತಮನ ಸತಿಗೆ ॥
ಹಂಬಲಿಸಿ ಕಪಟದಲಿ ರಮಿಸಲು । ಜಂಭವೈರಿಗೆ ಯೋನಿಯೊಡಲನು ।
ತುಂಬಿತದರಿಂ ಕಾಮುಕವಧಿಯ ಕಾಣೆ ನಾನೆಂದ　　॥ ೯೦ ॥

ಕ್ಲುಪ್ತಿಯಲಿ ಹಯಮೇಧಶತವನು । ತಪ್ಪದೆಲ್ಲವ ಮಾಡಿ ನಹುಷನು ।
ಸಪ್ತಋಷಿಗಳು ದಂಡಿಯನು ಹೊರೆ ಶಚಿಯಪೇಕ್ಷೆಯಲಿ ॥
'ಸರ್ಪ, ಸರ್ಪ" ಎನಲ್ಕಗಸ್ತ್ಯನು । ಸರ್ಪವಾಗೆಂದಿತ್ತ ಶಾಪವ ; ।
ಮುಪ್ಪಲಾ ಮರ್ತ್ಯರಿಗೆ ಮದನಾತುರದ ಕಳವಳವು !　　॥ ೯೧ ॥

ಮೃಗಮಿಥುನದಂದದಲಿರಮಿಸಲು।ಮಗನೆ,ಮುನಿಗಳು ಪಾಂಡುರಾಯನು॥
ತೆಗೆಯಲಸುವನು ಶಪಿಸಿದರು " ನಿಜಸತಿಯ ಕೂಡಿದರೆ ॥
ಹೊಗು ಯಮನ ಪುರಿಗೆ "ನುತಲಾಸತಿ । ಯಗಲಿಕೆಯಲಿದ್ದವನು ಮನಸಿಜ।
ನುಗಿದ ಖಡ್ಗದಿ ಮಡಿದ ಮಡದಿಯ ತನುವೊಳಿಡೆಗೆಡೆದು　　॥ ೯೨ ।

ದುರುಳರಾವಣಕೀಚಕಾದಿಗ । ಳಿರದೆ ಪರಸತಿಗಳುಪಿ ಕೊರಳನು ।
ಕೊರೆಸಿಕೊಂಡರು ಪುತ್ರಮಿತ್ರಭ್ರಾತೃಜನಸಹಿತ ॥

---

೯೦. ಜಂಭವೈರಿಗೆ ಯೋನಿಯೊಡಲನು ತುಂಬಿತು–ಇಂದ್ರನಿಗೆ ಮೈಎಲ್ಲ ಯೋನಿಯ ಗುರ್ತಾಯಿತು. ಈ ಕಥೆಗಾಗಿ ಪರಿಶಿಷ್ಟವನ್ನು ನೋಡಿ.

೯೧. ಕ್ಲುಪ್ತಿಯಲಿ–ವಿಧಿಪ್ರಕಾರವಾಗಿ. ಸಪ್ತರ್ಷಿಗಳು–ಕಶ್ಯಪ, ಅತ್ರಿ, ಭರದ್ವಾಜ, ವಿಶ್ವಾಮಿತ್ರ, ಗೌತಮ, ಜಮದಗ್ನಿ, ವಸಿಷ್ಠ. ದಂಡಿಯನು–ಪಲ್ಲಕ್ಕಿಯನ್ನು. "ಸರ್ಪ ಸರ್ಪ" ಎನಲ್ಕೆ–(ನಹುಷನು) ಬೇಗ ಬೇಗ ನಡೆ ಎನ್ನಲು. ಸರ್ಪವಾಗೆಂದು–(ಅಗಸ್ತ್ಯನು ನಹುಷನಿಗೆ) ಹಾವಾಗೆಂದು (ಶಾಪವನ್ನು ಕೊಟ್ಟನು). ಈ ಕಥೆಗಾಗಿ ಪರಿಶಿಷ್ಟ ವನ್ನು ನೋಡಿ.

೯೨. ಮೃಗಮಿಥುನದಂದದಲಿ–ಮೃಗಗಳ ಹೆಣ್ಣುಗಂಡಿನ ಜೋಡಿಯಂತೆ. ಮುನಿ ಗಳು–ಕಿಂದಮನೆಂಬ ಮುನಿಯೂ ಅವನ ಹೆಂಡತಿಯೂ. ಆ ಸತಿಯ–ಮಾದ್ರಿಯ ಮಡಿದ–ಸತ್ತನು. ಈ ಕಥೆಗಾಗಿ ಪರಿಶಿಷ್ಟವನ್ನು ನೋಡಿ.

೯೩. ಪರಸತಿಗೆ–ರಾವಣನು ರಾಮನ ಹೆಂಡತಿಯಾದ ಸೀತೆಗೆ ಮತ್ತು ಕೀಚಕನು ಪಾಂಡವರ ಪತ್ನಿಯಾದ ದ್ರೌಪದಿಗೆ. ಕಥೆಗಾಗಿ ಪರಿಶಿಷ್ಟವನ್ನು ನೋಡಿ. ಹುರಿಕರಿಯಮಾಡದ–ಹುರಿದದ್ದು ಹೆಚ್ಚಾಗಿ ಕಪ್ಪಾಗುವಂತೆ ಸೀಯಿಸದೆ ಇದ್ದೀತು. ಮಹಾತ್ಮರು-ಮಹಾತ್ಮ

ಅರರೆ! ಮದನಜ್ವಾಲೆ ಯಾರನು । ಹುರಿಕರಿಯ ಮಾಡದು! ಮಹಾತ್ಮರು ।
ಬರಿದೆ ಬ್ರಹ್ಮವ ನುಡಿವರಲ್ಲದೆ ಬಿಡರು ಮಡದಿಯರ ॥ ೯೩ ॥

ಆವನಾಗಲಿ ಸೊಬಗು, ಚೆಲುವಿಕೆ, । ಹಾವಭಾವ, ವಿಲಾಸವೆಸೆದಿಹ ।
ಭಾವೆಯರನೇಕಾಂತದೆಡೆಯೊಳು ಕಂಡು ಮೋಹಿಸದೆ ॥
ಧೀವಶದಿ ದೃಢಚಿತ್ತನಾಗಿರೆ । ದೇವನಾತನು; ಸಿದ್ಧಿಸುವದೈ ।
ಕೇವಲಾನಂದಾನುಭವವಹ ಮೋಕ್ಷವವಗೆಂದ ॥ ೯೪ ॥

ಅದು ನಿಮಿತ್ತದಿ ಮಗನೆ, ಗೆಲಲರಿ । ದಧಿಕರಿಂಗೀ ಮಾಯೆ; ತಾನೇ ।
ಸುದತಿಯಾಕಾರದಲಿ ಮೋಹಿಸಿ, ಸಕಲಜೀವರನು ॥
ಸದೆಬಡಿಗರನು ಮಾಡಿ, ಪಾದದ । ಲೊದೆದು, ಹೇಳಿದ ತೆರದಲೆಲ್ಲರು ।
ಬದಿಗರಾಗಿರೆ ಮಾಡುತಿರ್ಪುದು ಬಂಟರಂದದಲಿ ॥ ೯೫ ॥

ಸಪ್ತತಂತುವ ಮಾಡಿ, ಭೂಮಿಯೊ । ಳುತ್ತಮಕ್ಷೇತ್ರಗಳ ಮೆಟ್ಟಿ, ಸ ।
ಮಸ್ತನದಿಯೊಳು ಮಿಂದು, ಪುಣ್ಯಾರಣ್ಯಗಳ ಹೊಕ್ಕು ॥
ಸತ್ತ ಮನುಜನು ಪುಣ್ಯಲೋಕವ । ಹತ್ತಿ ಹಲಕೆಲಕಾಲವಿದ್ದವ ।
ಮತ್ತೆ ತಲೆಕೆಳಗಾಗುತುರುಳುವ ಬುತ್ತಿ ತೀರಿದರೆ ॥ ೯೬ ॥

---

ಕ್ಕೆಂದು ಹೇಳಿಸಿಕೊಳ್ಳುವ ಕೆಲವರು ಎಂದು ಅರ್ಥವನ್ನು ಮಾಡಬೇಕು. ಏಕೆಂದರೆ ಎಲ್ಲಾ ಮಹಾತ್ಮರ ಯೋಗ್ಯತೆಯೂ ಕಲಂಕಯುಕ್ತವೇ ಆದರೆ ಮಡದಿಯರನು ಬಿಡುವ ವೈರಾಗ್ಯವಿನ್ನೆಲ್ಲಿರಬೇಕು! ಆದ್ದರಿಂದ ಇಲ್ಲಿ ವಿರಕ್ತರಾದ ಮಹಾತ್ಮರನ್ನು ತೆಗೆದುಕೊಳ್ಳಬಾರದು.

೯೪. ಹಾವಭಾವ–ಕಣ್ಣುಕೈಸನ್ನೆಗಳು. ಧೀವಶದಿ–ಮನಸನ್ನು ಬುದ್ಧಿಯ ಸ್ವಾಧೀನದಲ್ಲಿಟ್ಟುಕೊಂಡು (ವಿಚಾರದ ಬಲದಿಂದ ಮನಸ್ಸನ್ನು ಅಯೋಗ್ಯವಾದ ಪ್ರವೃತ್ತಿಯಿಂದ ಹಿಮ್ಮೆಟ್ಟಿಸುತ್ತ).

೯೫. ಮೋಹಿಸಿ–ಮೋಹಗೊಳಿಸಿ. ಸದೆಬಡಿಗರನು–ಚೆನ್ನಾಗಿ ಬಡಿಸಿಕೊಳ್ಳಲ್ಪಟ್ಟಂಥವರನ್ನಾಗಿ. ಬದಿಗರಾಗಿರೆ–ಹತ್ತಿರದಲ್ಲಿಯೇ ಇರುವವರಾಗಿರಲು. 'ಬಂಟರಂದದಲಿ' ಎಂಬುದು ಬದಿಗರಾಗಿರೆ ಎಂಬುದಕ್ಕೆ ಹೋಲಿಕೆ.

೯೬. ಸಪ್ತತಂತು–(ಏಳು ಛಂದಸ್ಸುಗಳಿಂದ ಅಥವಾ ಅಗ್ನಿಯ ಏಳು ನಾಲಿಗೆಗಳಿಂದ ಪೂರ್ಣ ಮಾಡಿದ್ದು) ಯಜ್ಞ. ಅವ–ಅವನು. ಬುತ್ತಿ(ಅನುಭವಿಸಬೇಕಾದ ಪುಣ್ಯದ) ಗಂಟು.

ಅನ್ನಪಾನವ ಬಿಟ್ಟು, ವನದಲಿ । ಪರ್ಣಶಾಲೆಯೊಳಿದ್ದು, ಜಲದಲಿ ।
ತನ್ನ ದೇಹವ ತೊಳೆದು, ಮಳೆಚಳಿಗಳಿಗೆ ಕಂಗೆಡದೆ ॥
ಪುಣ್ಯಗಳನಾರ್ಜಿಸಿದ ಮನುಜನು । ಪುಣ್ಯಲೋಕವನೈದಿ ಕಡೆಯಲಿ ।
ಕಣ್ಣ ನೀರಲಿ ಕೈಯ ತೊಳೆಯುತ ಕೆಡೆವ ಮೇದಿನಿಗೆ ॥ ೯೭ ॥

ಉಕ್ತದಕ್ಷಿಣೆಗಳನು ತಪ್ಪದೆ । ಋತ್ವಿಜರಿಗೊಲಿದಿತ್ತು, ಸಾಂಗದಿ, ।
ಸಪ್ತತಂತುವ ಮಾಡಿ, ಕಡೆಯಲಿ ಸ್ವರ್ಗವನು ಸೇರಿ, ॥
ವೃತ್ತಕುಚಕುಂಭಗಳಲೆಸೆವ ತಿ । ಲೋತ್ತಮೆಯನನುಭವಿಸಿ, ಭೋಗಾ ।
ಸಕ್ತಿ ತೀರದೆ ಕೆಡೆವ ಭೂಮಿಗೆ ಪುಣ್ಯ ತೀರುತಲಿ ॥ ೯೮ ॥

ಆಸನವ ಬಲಿದಸು ಸುಷುಮ್ನದಿ । ಸೂಸಿ ಸಿರದಲಿ ನಡೆಸಿ, ಮೆಲ್ಲನೆ ।
ಲೇಸೆನಿಪ ನಿಜಬ್ರಹ್ಮರಂಧ್ರದಿ ನಡೆದು, ಸುರಪಥದಿ ॥
ಭಾಸಮಾನದಿ ಸತ್ಯಲೋಕಾ । ವಾಸಿಯಾಗಿಹ ಯೋಗಿ ಪುಣ್ಯದ ।
ರಾಶಿ ತೀರಲು ಮರಳಿ ಧಾರಿಣಿಗುರುಳಿ ಬೀಳುವನು ॥ ೯೯ ॥

---

೯೭. ಕಣ್ಣ . ತೊಳೆಯುತ—ಬಹಳವಾಗಿ ಅಳುತ್ತ. ಕೆಡೆವ—ಬೀಳುವನು.

೯೮. ಉಕ್ತ—ಇಷ್ಟುಕೊಡಬೇಕೆಂದು ಶಾಸ್ತ್ರದಲ್ಲಿ ಹೇಳಿರುವಂತೆ.

೯೯. ಆಸನವ ಬಲಿದು—ಬಹಳ ಹೊತ್ತಾದರೂ ಆಯಾಸವಾಗದಂಥ ಒಂದು ಗೊತ್ತಾದ ರೀತಿಯಲ್ಲಿ ಕುಳಿತುಕೊಂಡು. ಅಸು—ಪ್ರಾಣವಾಯು. ಸುಷುಮ್ನ—ಇದು ಬೆನ್ನ ಹುರಿಯ ನಡುವೆ ಇರುವ ಒಂದು ಸೂಕ್ಷ್ಮವಾದ ನಾಡಿ. ಯೋಗಿಗಳು ತಮ್ಮ ಉಸಿರನ್ನು ಇದರಲ್ಲಿ ನುಗ್ಗಿಸಿ ಅದರ ಮೂಲಕ ಕುಂಡಲಿನಿ ಎಂಬ ಒಂದು ಶಕ್ತಿಯನ್ನು ಎಬ್ಬಿಸುವರು. ಬ್ರಹ್ಮರಂಧ್ರ—ನಡುನೆತ್ತಿಯಲ್ಲಿ ಮೆತ್ತಗಿರುವ ಸ್ಥಲ. ಗರ್ಭದಲ್ಲಿ ಶರೀರರಚನೆಯೆಲ್ಲ ಆದ ಮೇಲೆ ಚೈತನ್ಯವು "ಸ ಏತಮೇವ ಸೀಮಾನಂ ವಿದಾರ್ಯೈತಯಾ ದ್ವಾರಾ ಪ್ರಾಪದ್ಯತ" ಎಂಬ ಐತರೇಯಶ್ರುತಿಯಂತೆ ಈ ಮಾರ್ಗದಿಂದ ಪ್ರವೇಶಿಸಿರುವದೆಂತಲೂ "ತಯೋರ್ಧ್ವಮಾಯನ್ನಮೃತತ್ವಮೇತಿ" ಎಂಬ ಕಠಶ್ರುತಿಯಂತೆ ಸಾಯುವಾಗಲೂ ಈ ಮಾರ್ಗದಿಂದ ಹೊರಟವರಿಗೆ ಬ್ರಹ್ಮಲೋಕಪ್ರಾಪ್ತಿಯಾಗುವದೆಂತಲೂ ತಿಳಿಯಬೇಕು. ಸುರಪಥ—"ಅಗ್ನಿರ್ಜ್ಯೋತಿರಹಃ ಶುಕ್ಲಃ ಷಣ್ಮಾಸಾ ಉತ್ತರಾಯಣಂ" ಎಂಬ ಗೀತೋಕ್ತಿಯಂತೆ ಅಗ್ನಿದೇವತೆ, ಜ್ಯೋತಿರ್ದೇವತೆ ಅಹರ್ದೇವತೆ, ಶುಕ್ಲಪಕ್ಷದೇವತೆ, ಉತ್ತರಾಯಣದೇವತೆ, ಇವರು ಕರೆದುಕೊಂಡು ಹೋಗುವ ಮಾರ್ಗ.

ಮಾಡಿ ಷೋಡಶದಾನವನು, ಮನ । ಬೇಡಿದಂದಲನ್ನಪಾನವ ।
ನೀಡಿ ವಿಪ್ರರಿಗೊಲಿಯುತಿಷ್ಟಾಪೂರ್ತಗಳ ಮುಗಿಸಿ, ॥
ಖೋಡಿಯಲ್ಲದ ಪುಣ್ಯಫಲ ಕೈ । ಗೂಡೆ ಪರಲೋಕದಲಿ ಭೋಗಿಸಿ, ।
ಕೂಡೆ ಕೆಡೆವ ವಿಮಾನದಿಂದವ ಬಾಡಿ ಬಸವಳಿದು ॥ ೧೦೦ ॥

ಶೈವ ವೈಷ್ಣವವೆಂಬ ಬಹುವಿಧ । ಭಾವಭೇದಗಳಾದ ತತ್ತ ।
ದ್ದೇವತಾರಾಧನೆಯನುಪಚಾರವನು ಮುದದಿಂದ ॥
ಭಾವಶುದ್ಧಿಯೊಳೊಂದಿ ಮಾಡಿದ । ಜೀವಿ ಲೋಕಾಂತರದಿ ಭೋಗಿಸು ।
ತೀ ವಸುಧೆಗವ ಮರಳುವನು ಹಳೆಯಂತೆ ನರನಾಗಿ ॥ ೧೦೧ ॥

ಅದು ನಿಮಿತ್ತದಿ ಮಗನೆ ವಿಷಯಾ । ಸ್ಪದನೆನಿಸಿ, ಬಹುಕರ್ಮಜಾಲದಿ ।
ಕುದಿದು, ಕೋಟಲೆಗೊಂಡು, ಕಷ್ಟಿಸಿ, ಸತ್ತು, ಸ್ವರ್ಗವನು ॥
ಮುದದಲೈದಿದ ಮರ್ತ್ಯ ಭೋಗಿಸಿ, । ತುದಿಯ ಕಾಲಕೆ ಪುಣ್ಯ ತೀರಲು, ।
ಗದಗದಿಸಿ ಗಡಗಡನೆ ನಡುಗುತ ಕೆಡೆವ ಮೇದಿನಿಗೆ ॥ ೧೦೨ ॥

ಅಲ್ಪವಹ ಸುಖಕಾಶೆಪಟ್ಟು, ಮ । ಹಾಪ್ರಯತ್ನವ ಮಾಡಿ, ಕೆಡುವೀ ।
ಸ್ವಲ್ಪಗತಿಗಳ ಪಡೆದು, ಮೋಹದಿ ಮೂಢಮಾನವರು ॥

---

೧೦೦. "(ಆದ್ಯಸ್ತು ಸರ್ವದಾನಾನಾಂ) ತುಲಾಪುರುಷ (ಸಂಜ್ಞಿತಂ) । ಹಿರಣ್ಯಗರ್ಭದಾನಂ(ಚ) ಬ್ರಹ್ಮಾಂಡಂ (ತದನಂತರಂ) । ಕಲ್ಪಪಾದಪದಾನಂ (ಚ) ಗೋಸಹಸ್ರಂ (ತು ಪಂಚಮಂ) । ಹಿರಣ್ಯಕಾಮಧೇನು(ಶ್ಚ) ಹಿರಣ್ಯಾಶ್ವ (ಸ್ತಥೈವ ಚ) । ಪಂಚಲಾಂಗಲಕಂ (ತದ್ವತ್) ಧಾರಾದಾನಂ (ತಥೈವ ಚ) । ಹಿರಣ್ಯಾಶ್ವರಥ (ಸ್ತದ್ವತ್) ಹೇಮಹಸ್ತಿರಥ (ಸ್ತಥಾ) । (ದ್ವಾದಶಂ) ವಿಷ್ಣುಚಕ್ರಂ (ಚ ತತ) ಸ್ತಲ್ಪಲತಾ (ತ್ಮಕಂ) । ಸಪ್ತಸಾಗರದಾನಂ (ಚ) ರತ್ನಧೇನು (ಸ್ತಥೈವ ಚ) । ಮಹಾಭೂತಘಟ (ಸ್ತದ್ವತ್ ಷೋಡಶಃ ಪರಿಕೀರ್ತಿತಃ) ॥" ಹೀಗೆಂದು ಶಬ್ದಾರ್ಥಕಲ್ಪದ್ರುಮಕಾರರು ತಮ್ಮ ನಿಘಂಟಿನಲ್ಲಿ ಹೇಳಿರುವರು. ಸಾಮಾನ್ಯವಾಗಿ ಗೋದಾನ, ಭೂದಾನ, ತಿಲದಾನ, ಹಿರಣ್ಯದಾನ, ಆಜ್ಯದಾನ, ವಸ್ತ್ರದಾನ, ಧಾನ್ಯದಾನ, ಗುಡದಾನ, ರೌಪ್ಯದಾನ, ಲವಣದಾನ, ಗೃಹದಾನ, ಕನ್ಯಾದಾನ, ಅನ್ನದಾನ, ಶಯ್ಯಾದಾನ, ದೀಪದಾನ, ಜಲದಾನ, ಎಂದೂ ಎಣಿಕೆಯುಂಟು. ಇಷ್ಟ—ಯಜ್ಞಾದಿಕರ್ಮ. ಪೂರ್ತ—ಸತ್ರ, ಭಾವಿ ಮುಂತಾದ ಧರ್ಮಕಾರ್ಯ. ಖೋಡಿಯಲ್ಲದ—ಕೀಳಲ್ಲದ. ಕೆಡೆವ—ಬೀಳುವ. ಅವ—ಅವನು. ಬಾಡಿ—ಸೊರಗಿ. ಬಸವಳಿದು—ಮೂರ್ಛೆಯನ್ನು ಹೊಂದಿ.

೧೦೧. ಒಂದಿ—ಕೂಡಿ. ಅವ—ಅವನು. ಮರಳುವನು—ಹಿಂದಿರುಗುವನು.

ಮುಪ್ಪುರಿಯ ಮಾಯಾಪ್ರಬಂಧಕೆ । ತಪ್ಪದೊಳಗಾಗಿಪ್ಪರಾಗುತ ।
ಕ್ಲುಪ್ತದೊಳಗೆಡೆಯಾಡುತಿಹರಾ ಸ್ವರ್ಗನರಕದೊಳು || ೧೦೩ ||

ತಿಳಿಯಲರಿಯದೆ ಬ್ರಹ್ಮವಿದ್ಯೆಯ । ಹೆಳಿವರಜ್ಞಾನಿಗಳು ; ವೇದಗ ।
ಳೊಲಿದು "ನಾನ್ಯಃ ಪಂಥ"ವೆಂದಾವಾಗ ಸಾರುತಿರೆ ||
ಉಳಿದ ಮಾರ್ಗದಲೇನು ಫಲವೈ?।ಹಲವು ಯೋನಿಯ ತೊಳಲಿ ಬಳಲುವ ।
ಫಲವೆ ಅಲ್ಲದೆ ಕಾಣೆನವರಿಗೆ ಮೋಕ್ಷಸಂಪದವ || ೧೦೪ ||

ಬಹಳ ದುಃಖದಲಾರ್ಜಿಸಿರ್ಪಾ । ಬಹುಸುಕೃತಫಲರೂಪವೆನಿಸಿ ।
ರ್ದಿಹಪರದ ಭೋಗಕ್ಕೆ ಸುರನರದೇಹಗಳ ಧರಿಸಿ ||
ವಿಹರಿಸುತ್ತಿಹೆ ಜೀವ ಸಂಸೃತಿ । ಯಹಿತವೆಂದದ ತಿಳಿಯಲರಿಯನು ;
ಮಹಿಮೆಯೆಂತುಟೊ! ಮಗನೆ, ಮಾಯೆಯ ಬಗೆಯ ಬಲು ಬೇಟೆ || ೧೦೫ ||

ಹೆತ್ತ ಶಿಶುವಿಂಗಲ್ಲ, ವಿತ್ತವ । ನಿತ್ತ ವಿಟಸಿಂಗಲ್ಲದೆಡೆಯಾ ।
ಡುತ್ತಲಿಹ ಬಾಣಂತಿಸೂಳೆಯ ಚೇಷ್ಟೆಯಂದದಲಿ ||
ವ್ಯರ್ಥವಾಗಿಯೆ ಕೆಡುವನಕಟಾ! । ಮರ್ತ್ಯನೆತ್ತಲು ಮುಟ್ಟ ; ಜೀವ ।
ನ್ಮುಕ್ತನಾಗದೆ ಸರ್ವಥಾ ಸಂಸಾರ ಸುಖವಲ್ಲ || ೧೦೬ ||

---

೧೦೩. ಮುಪ್ಪುರಿಯ—ಸತ್ತ್ವ, ರಜ, ತಮ ಎಂಬ ಮೂರುಗುಣಗಳು ಹೊಸೆದುಕೊಂಡಿರುವ. ಮಾಯಾಪ್ರಬಂಧಕ್ಕೆ—ಮಾಯಾರೂಪವಾದ ಬಲವಾದ ಕಟ್ಟುವಿಕೆಗೆ.

೧೦೪. ಬ್ರಹ್ಮವಿದ್ಯೆಯ—ಪರಬ್ರಹ್ಮಸ್ವರೂಪವನ್ನು ತಿಳಿಸುವ ವೇದಾಂತವನ್ನು. "ನಾನ್ಯಃ ಪಂಥ"—ಬೇರೆ ದಾರಿ ಇಲ್ಲ. ಈ ಶ್ರುತಿಯ ವಾಕ್ಯಕ್ಕೆ ಪರಿಶಿಷ್ಟವನ್ನು ನೋಡಿ.

೧೦೫. ಸುರನರದೇಹಗಳು—ಪುಣ್ಯದಿಂದ ಸುರ [ದೇವತೆಗಳ] ದೇಹವೂ, ಪುಣ್ಯ ಪಾಪಮಿಶ್ರಣದಿಂದ ನರ (ಮನುಷ್ಯನ) ದೇಹವೂ ಬರುವವು.

೧೦೬. ಬಾಣಂತಿಸೂಳೆ—ಈಕೆಯು ತನ್ನ ಓಡಾಟದಿಂದ ಮಗುವಿಗಾಗಲಿ ವಿಟನಿಗಾಗಲಿ ಉಪಯೋಗವಿಲ್ಲದವಳಾಗಿರುವಳು. ಇವಳ ಓಡಾಟದಿಂದ ಮಗುವಿನ ಹಸಿವೆಯು ಡಗುವದಿಲ್ಲ. ಇವಳ ಓಡಾಟದಿಂದ ವಿಟನಿಗೆ ಭೋಗೇಚ್ಛೆಯುಂಟಾದರೆ ಇವಳು ಅದನ್ನು ಆಗ ಪೂರ್ಣಮಾಡುವ ಸ್ಥಿತಿಯಲ್ಲಿರುವದಿಲ್ಲ. ಇದರಂತೆ ಇಹಕ್ಕೂ ಪರಕ್ಕೂ ಓಡಾಡುತ್ತಿರುವ ಮನುಷ್ಯನ ಬಾಳು ವ್ಯರ್ಥವು. ಎತ್ತಲು ಮುಟ್ಟ—ಸ್ವರ್ಗದಲ್ಲಾಗಲಿ ಭೂಮಿಯಲ್ಲಾಗಲಿ ಎಲ್ಲಿಯೂ ಅವನಿಗೆ ನಿಲುಗಡೆಯೇ ಇಲ್ಲ. ಜೀವನ್ಮುಕ್ತ—ಬದುಕಿರುವಾಗಲೇ ಸ್ವರ್ಗನರಕಗಳ ಸುತ್ತಾಟದ ನಿರ್ಬಂಧವನ್ನು ತಪ್ಪಿಸಿಕೊಂಡವನು.

ಈ ತೆರದೊಳಿಹಪರದಿ ದುಃಖ। ವ್ರಾತವಲ್ಲದೆ ಕಾಣೆ ಗತಿಯನು।
ಕಾತರಿಸಿ ಕಂಗೆಟ್ಟ ಮನುಜಗೆ; ಪೂರ್ವಪುಣ್ಯದಲಿ ||
ಸಾತಿಶಯವೈರಾಗ್ಯವೊದಗಿರ। ಲಾತ ಸಹಜಾನಂದಗುರುಪದ।
ಸೇತುವಿಂ ಸಂಸಾರಶರಧಿಯ ದಾಂಟಿ ಸುಖಿಯಹನು || ೧೦೭ ||

ಪರಮಪುರುಷ, ಪರೇಶ, ಪಾವನ, । ಪರಮಗುಣಗಣನಿಲಯ, ಪಂಚಾ।
ಕ್ಷರ, ಪರಂಜ್ಯೋತಿಪ್ರಕಾಶ, ಗಿರೀಶ, ಗೌರೀಶ, ||
ಶರಣಜನರಕ್ಷಕ, ಸಮಾಶ್ರಿತ। ವರದ, ವಂದ್ಯ, ವರೇಣ್ಯ, ವಿಶ್ವೋ।
ದ್ಧರಣಕಾರಣ, ಮಲ್ಲಿಕಾರ್ಜುನ, ಸಲಹು ಮೂಜಗವ || ೧೦೮ ||

ಶ್ರೀಮತ್ಪರಮಹಂಸ ಪರಿವ್ರಾಜಕಾಚಾರ್ಯ ಸಹಜಾನಂದಗುರುವರ್ಯ
ಪಾದಕಮಲಭೃಂಗಾಯಮಾಣ ಸಹವಾಸಿ ಮಹಲಿಂಗರಂಗ
ವಿರಚಿತವಾದ ಅನುಭವಾಮೃತವೆಂಬ ಗ್ರಂಥದಲ್ಲಿ
ವೈರಾಗ್ಯಪ್ರಕರಣವೆಂಬ ಎರಡನೆಯಧ್ಯಾಯವು
ಮುಗಿದುದು.

---

೧೦೭. ಸಾತಿಶಯವೈರಾಗ್ಯ—ಈ ಲೋಕದ ಸುಖವು ಬೇಡವೆಂಬುದಿಷ್ಟೇ ಅಲ್ಲದೆ ಹೆಚ್ಚಿನ ಪರಲೋಕಸುಖವು ಕೂಡ ಬೇಡವೆನಿಸುವದು.

೧೦೮. ಪಂಚಾಕ್ಷರ—"ನಮಃ ಶಿವಾಯ" ಎಂಬ ಐದಕ್ಷರಗಳ ಮಂತ್ರಕ್ಕೆ ಅಧಿದೇವನಾಗಿರುವವನು. ಸಮಾಶ್ರಿತವರದ—ಶರಣುಬಂದವರಿಗೆ ವರವನ್ನು ಕೊಡುವವನು. ವಿಶ್ವೋದ್ಧರಣಕಾರಣ—ಜಗತ್ತಿನ ಉದ್ಧಾರಕ್ಕೆ ಸಾಧನವಾಗಿರುವವನು.

# ಮೂರನೆಯ ಅಧ್ಯಾಯ

## ತ್ವಂಪದಾರ್ಥಶೋಧನೆ

ಸೂ॥ ಸತ್ಯವತಿಯಾತ್ಮಜನು ಪುತ್ರಗೆ । ಪ್ರತ್ಯಗಾತ್ಮನೆನಿಪ್ಪ ತ್ವಂಪದ ।
ವಸ್ತುನಿರ್ದೇಶವನು ಬೋಧಿಸಿ ತಿಳುಹಿದನು ನಿಜವ ॥

ಭೂಮಿಜಲತೇಜೋಽನಿಲಾಂಬರ । ಸೋಮಸೂರ್ಯಾತ್ಮರ್ಕಳೆಂಬಿವು ।
ಕಾಮಹರತ್ರೀಮಲ್ಲಿಕಾರ್ಜುನಗಷ್ಟಮೂರ್ತಿಗಳು; ॥
ತಾಪಸರು ತಾವೇನಬಲ್ಲರು । ವ್ಯೋಮಕೇಶನಪಾರಮಹಿಮೆಯ ! ॥
ರೋಮರೋಮದೊಳಡಗಿಹವು ಬ್ರಹ್ಮಾಂಡತಂಡಗಳು ॥ ೧ ॥

ದುರ್ಮತಿಗಳಿಗೆ, ದುಷ್ಟರಿಗೆ, ದು । ಷ್ಕರ್ಮಿಗಳಿಗೆ, ದುರಾತ್ಮರಿಗೆ, ಕುಲ ।
ಧರ್ಮವನು ಬಿಟ್ಟನ್ಯಧರ್ಮವನಾಚರಿಸುವರಿಗೆ, ॥
ಹೆಮ್ಮೆಯಲಿ ಹಿರಿದಾಗಿ ತಮ್ಮನು । ಪೇರ್ಮೆಯಿಂ ಕೊಂಡಾಡಿಕೊಳುತಿಹ ।
ದುರ್ಮದಾಂಧರಿಗುಸುರಬೇಡೀ ಅನುಭವಾಮೃತವ ॥ ೨ ॥

ನಿತ್ಯನಾತ್ಮನು; ಮಿಕ್ಕುದೆಲ್ಲವ । ನಿತ್ಯವೆಂದಿಹಪರದಿ ತಾ ಸ.ವಿ ।
ರಕ್ತನಾಗಿ, ಶಮಾದಿಷಟ್ಕವ ಪಡೆದು, ಮೋಕ್ಷವನು ॥
ಅರ್ಥಿಸುತ, ಸಾಧನಚತುಷ್ಟಯ । ಸತ್ಯಸಂಪತ್ತಿರ್ದು, ನಿರ್ಮಲ ।
ಚಿತ್ತನಾದುತ್ತಮಗೆ ಪೇಳೀ ಅನುಭವಾಮೃತವ ॥ ೩ ॥

---

ಸೂ॥ ಪ್ರತ್ಯಗಾತ್ಮ–ಒಳಗಿರುವ ಆತ್ಮ. ತ್ವಂಪದವಸ್ತುನಿರ್ದೇಶವನು— ನೀನು ಎಂಬ ಮಾತಿಗೆ ವಿಷಯವಾದ ವಸ್ತುವಿನ ಗುರ್ತನ್ನು.

೧. (ಸೂರ್ಯ+)ಆತ್ಮ (ರ್ಕಳ್)–ಯಜ್ಞಾಭಿಮಾನಿದೇವತಾಸ್ವರೂಪನಾದ ಯಜಮಾನ. ಅಷ್ಟಮೂರ್ತಿಗಳು–ಕ್ಷಿತಿಮೂರ್ತಿ ಶರ್ವ, ಜಲಮೂರ್ತಿ ಭವ, ಅಗ್ನಿಮೂರ್ತಿ ರುದ್ರ, ವಾಯುಮೂರ್ತಿ ಉಗ್ರ, ಆಕಾಶಮೂರ್ತಿ ಭೀಮ, ಯಜಮಾನಮೂರ್ತಿ ಪಶುಪತಿ, ಚಂದ್ರಮೂರ್ತಿ ಮಹಾದೇವ, ಸೂರ್ಯಮೂರ್ತಿ ಈಶಾನ. ವ್ಯೋಮಕೇಶನ+ ಅಪಾರಮಹಿಮೆಯ.

೩. ಇಹಪರದಿ–ಈ ಲೋಕದ ಮತ್ತು ಪರಲೋಕದ ಸಂಬಂಧವಾದ ಸುಖಾಪೇಕ್ಷೆ ಗಳಲ್ಲಿ. ಶಮಾದಿಷಟ್ಕ— ಶಮ (ಮನೋನಿಗ್ರಹ), ದಮ (ಇಂದ್ರಿಯನಿಗ್ರಹ,) ತಿತಿಕ್ಷೆ

ಹುಟ್ಟಿದರೆ ಸಾವಿಲ್ಲದಿಹ ಬಲು । ಬಟ್ಟೆಯನು ಸಾಧಿಸಲು ಬೇಕದು ।
ನೆಟ್ಟನಳವಡದಿರ್ದೊಡೀ ತನು ಬಿದ್ದ ಬಳಿಕಿನಲಿ ॥
ಹುಟ್ಟದಿಹ ವಿದ್ಯೆಯನು ಕಲಿವುದು । ಸೃಷ್ಟಿಯೊಳಗುತ್ತಮವು; ಹೊಟ್ಟೆಗೆ ।
ಕಷ್ಟಬಡುವೀ ವಿದ್ಯೆಗಳ ಕಲಿತೇನು ಫಲವೆಂದ ॥ ೪ ॥

ವೇದಶಾಸ್ತ್ರವನೋದಿದುವರಿಂ । ದಾದ ಫಲವೇನದರ ಸಾರವ ।
ಭೇದಿಸಿದರದು ಸಫಲವದನರಿಯದಿರೆ ನಿಷ್ಫಲವು ; ॥
ಕಾದ ಹೊಟ್ಟೆಗೆ ಸ್ಪರ್ಶವೇದಿಯ । ಮೋದದಿಂದಡವಿಡುವ ತೆರದಿಂ ।
ದೋದಿದುದ ಮಾರುವರು ಮೂಢರು ವಿತ್ತಲೋಭದಲಿ ॥ ೫ ॥

---

(ಸುಖದುಃಖಗಳನ್ನು ಸಮಬುದ್ಧಿಯಿಂದ ಸಹಿಸುವದು, ಉಪರತಿ (ಕರ್ಮದ ಗಡಿಬಿಡಿಯನ್ನು ಬಿಟ್ಟು ಶಾಂತನಾಗುವದು), ಸಮಾಧಾನ (ಮನಸ್ಸಿನ ತಳಮಳಗಳಿಲ್ಲದಿರುವದು), ಶ್ರದ್ಧೆ (ಗುರುವಿನಲ್ಲಿಯೂ ವೇದಾಂತವ ವಾಕ್ಯದಲ್ಲಿಯೂ ವಿಶ್ವಾಸವಿರುವದು). ಸಾಧನಚತುಷ್ಟಯ. . .ಮುತ್ತಮಗೆ— ನಿತ್ಯಾನಿತ್ಯವಿವೇಕ (ನಿತ್ಯವಾದ ಆತ್ಮಸ್ವರೂಪವನ್ನೂ ಅನಿತ್ಯವಾದ ಅನಾತ್ಮ ಎಂದರೆ ಹೊರಗಣ ವಿಷಯಗಳ ಸ್ವರೂಪವನ್ನೂ ಬಿಡಿಸಿ ತಿಳಿಯುವದು). ಇಹಾಮುತ್ರಾರ್ಥಫಲಭೋಗವಿರಾಗ—ಈ ಲೋಕದ ಮತ್ತು ಪರಲೋಕದ ಸುಖಗಳಲ್ಲಿ ಆಸಕ್ತಿ ಇಲ್ಲದಿರುವದು), ಶಮಾದಿಷಟ್ಕ, ಮತ್ತು ಮುಮುಕ್ಷುತ್ವ (ಮೋಕ್ಷವಾಗಬೇಕೆಂಬ ಇಚ್ಛೆ). ಈ ನಾಲ್ಕು ಗುಣಗಳೆಂಬ ಸತ್ಯವಾದ ಸಂಪತ್ತುಗಳಿದ್ದು ಅದರಿಂದ ಚಿತ್ತಶುದ್ಧಿಯನುನ್ನು ಪಡೆವಂಥ ಉತ್ತಮನಿಗೆ.

೪. ಹುಟ್ಟಿದರೆ ಸಾವಿಲ್ಲದಿಹ— ನಾವು ಹುಟ್ಟಿದ್ದಂತು ಆಗಿದೆಯಷ್ಟೆ; ಇನ್ನು ಸಾವೆಂಬ ದುಃಖವಾದರೂ ಬರದ ಹಾಗೆ ಆಗುವ (ಸಾಯುವದು ದೇಹವೇ ಆದ್ದರಿಂದ ಆತ್ಮನು ದೇಹಕ್ಕಿಂತ ಭಿನ್ನವಾದ ಬ್ರಹ್ಮನೆಂಬ ಜ್ಞಾನ ಉಂಟಾದರೆ ಆ ಆತ್ಮನಿಗೆ ಮರಣದ ಭಯವಿಲ್ಲವಾಗುವದೆಂದು ತಿಳಿಯಬೇಕು. ಬ್ರಹ್ಮಕ್ಕೆಂದಿಗೂ ಸಾವಿಲ್ಲ. ಜ್ಞಾನಿಯ ಪ್ರಾಣವು ಇದ್ದಲ್ಲಿಯೇ ಕರಗಿ ಹೋಗುವದು. ಅದು ಶರೀರದಿಂದ ಹೊರಬೀಳುವದಿಲ್ಲ.) ಬಟ್ಟೆ—ದಾರಿ. ಅಳವಡದಿರ್ದೊಡೆ— ಅನುಭವಕ್ಕೆ ಬರದೆ ಇದ್ದರೆ. ಈತನು ..... ಕಲಿವುದು— ಈ ಶರೀರವು ಸತ್ತಮೇಲೆ ಮತ್ತೆ ಹುಟ್ಟದಂತೆ ಮುಕ್ತಿಯಾಗುವಂಥ ಉಪಾಸನೆಯ ಸಿದ್ಧಿಯನ್ನು ಪಡೆಯಬೇಕೆಂದು ತಾತ್ಪರ್ಯ. ಉಪಾಸಕನು ಸಾಯುವಾಗ ಅವನ ಪ್ರಾಣವು ನಡುನೆತ್ತಿಯಿಂದ ಹೊರಬಿದ್ದು ಬ್ರಹ್ಮಲೋಕಕ್ಕೆ ಹೋಗುವದು. ಅಲ್ಲಿ ಅವನಿಗೆ ಜ್ಞಾನವಾಗಿ ಬ್ರಹ್ಮನೊಡನೆ ಮುಕ್ತಿಯಾಗುವದು. ಅದ್ದರಿಂದ ಅವನು ಸತ್ತಮೇಲೆ ಹುಟ್ಟುವದಿಲ್ಲ. ಏನು ಫಲವೆಂದ— ಹೊಟ್ಟೆಯ ಪಾಡಿನ ವಿದ್ಯೆಗಳಿಂದ ಹೊಟ್ಟೆಯ ಪಾಡು ನಡೆಯಬಹುದೇಹೊರತು ಸದ್ಗತಿಯೇನೂ ದೊರೆಯಲಾರದೆಂದು ತಾತ್ಪರ್ಯ.

"ಬ್ರಹ್ಮ ವೇದ ಬ್ರಹ್ಮ"ವಹನೆಂ । ದೊಮ್ಮೆಯಾ ಶ್ರುತಿ ಸಾರುತಿರಲಾ ।
ಬ್ರಹ್ಮವನು ನೆರೆ ತಿಳಿಯಲರಿಯದಹಂಮಮತೆಯಿಂದ ॥
ಕರ್ಮಕಿಂಕರರಾಗಿ ಬರಿವೇ । ಜನ್ಮ ಜರೆ ಮರಣಾದಿ ದುಃಖವ ।
ನೆಮ್ಮಿ ಬಳಲುವರೇಕೆ? ಕೃತದುಷ್ಕರ್ಮಫಲದಿಂದ ॥ ೬ ॥

"ಅತ್ಮವಿಚ್ಛೋಕಂ ತರತಿ"ಯೆಂ । ದೀ ತೆರದಿ ಶ್ರುತಿಸಾರುತಿರಲದ ।
ನೇತಕರಿಯದೆ ವಿಷಯಲಂಪಟರಾಗಿ ಕೆಡುತಿಹರು ! ॥
ಹೋತು ಸೋಗೆಯ ಮೆಲುವದಲ್ಲದೆ । ಪ್ರೀತಿಯಿಂದಲಿ ಕಬ್ಬ ಸವಿವುದೆ? ।
ಪಾತಕರಿಗೇಕನಘ ಪರಮಾನಂದ ಸೊಗಸುವದು ! ॥ ೭ ॥

ದಾನವನು ಪಾತ್ರದಲಿ, ನಿಜಸಂ । ತಾನವನು ಪತ್ನಿಯಲಿ, ಯಜ್ಞವಿ ।
ಧಾನವನು ಸಾಂಗದಲಿ, ಮಾಡಲು ಸ್ವರ್ಗಸುಖವಹುದು; ॥
ಸ್ವಾನುಭವಸಂಸಿದ್ಧವಹ ಸು । ಜ್ಞಾನದಿಂದಲೆ ಮೋಕ್ಷವಲ್ಲದೆ ।
ಮಾನಸಿಧಿ ಮತ್ತೇತರಿಂದಲು ಮೋಕ್ಷವಿಲ್ಲೆಂದ ॥ ೮ ॥

ಕರ್ಮಗಳು ನೆರೆ ಕಳ್ಳಹಣಗಳು ; । ಧರ್ಮಗಳವೆಡವಟ್ಟು ತಿಳಿಯಲು; ।
ನಿರ್ಮಲಜ್ಞಾನೈಕಸಾರವೆ ಕೇಳದಪರಂಜಿ ; ॥

---

೫. ಭೇದಿಸಿದರೆ—ಹುಡುಕಿ ತೆಗೆದರೆ. ಸ್ಪರ್ಶವೇದಿಯು—ಸ್ಪರ್ಶಮಣಿಯನ್ನು. (ಸ್ಪರ್ಶಮಣಿಯು ಸ್ಪರ್ಶಮಾತ್ರದಿಂದ ಯಾವ ಲೋಹವನ್ನಾದರೂ ಬಂಗಾರವವನ್ನು ಮಾಡವದು).

೬. "ಬ್ರಹ್ಮ ವೇದ ಬ್ರಹ್ಮ"ವಹ—ಬ್ರಹ್ಮವನ್ನು ತಿಳಿದವನು ಬ್ರಹ್ಮವೇ ಆಗುವನು. ಈ ಶ್ರುತಿವಾಕ್ಯಕ್ಕೆ ಪರಿಶಿಷ್ಟವನ್ನು ನೋಡಿ. ಒಮ್ಮೆ—ಇದಕ್ಕೆ "ಒಂದು ಸಾರಿ" ಎಂದು ಅರ್ಥವನ್ನು ಮಾಡಬಾರದು. ಏಕೆಂದರೆ ಈ ಅಭಿಪ್ರಾಯವನ್ನು ವೇದವು ಅನೇಕ ಸಾರಿ ಹೇಳಿದೆ. 'ಜನತೆಯ ಹಿತಚಿಂತನೆಗಾಗಿ ಇರುವ ವೇದವು ಹೇಳಿದ ಮೇಲೆಯೂ ಕೂಡ' ಎಂಬರ್ಥವನ್ನಿಟ್ಟುಕೊಳ್ಳಬೇಕು. (ತಿಳಿಯಲರಿಯದೆ+) ಅಹಂಮಮತೆಯಿಂದ—ನಾನು ನನ್ನದೆಂಬ ಅಭಿಮಾನದಿಂದ. ನೆಮ್ಮಿ—ನಂಬಿ.

೭. "ಆತ್ಮವಿಚ್ಛೋಕಂ ತರತಿ"—ಆತ್ಮವನ್ನರಿತವನು ಶೋಕವನ್ನು ದಾಟುವನು. ಈ ಶ್ರುತಿವಾಕ್ಯಕ್ಕೆ ಪರಿಶಿಷ್ಟವನ್ನು ನೋಡಿ.

೮. ಜ್ಞಾನದಿಂದಲೆ ಮೋಕ್ಷ—"ಜ್ಞಾನಾದೇವ ತು ಕೈವಲ್ಯಂ"ಎಂಬ ಶ್ರುತಿಯಂತೆ.

ಬ್ರಹ್ಮ ತಾನೆಂಬೆಂಬುವೇ ಸೋ । ಹಮ್ಮೆನಿಪ ನಿಜಮುದ್ರೆಯಮ ಶ್ರುತಿ ।
ಸಮ್ಮತವು ಲೋಕಾನುಮತವೆಲೆ ಮಗನೆ ಕೇಳೆಂದ ॥ ೯ ॥

ತನ್ನ ತನ್ನೊಳು ತಿಳುವುದಿದು ಸಾ । ಮಾನ್ಯವೇ? ಪೂರ್ವದಲಿ ಮಾಡಿದ ।
ಪುಣ್ಯಫಲವೊದಗದೊಡದಾರಿಗು ಸುಲಭವಲ್ಲಾಗಿ ॥
ಮುನ್ನಲೆಂಬರು ಬ್ರಹ್ಮವಿದ್ಯೆಯ । ನಿರ್ಣಯಿಸಲರಿದೆಂದು; ಲೌಕಿಕ ।
ವನ್ನು ಕಳೆವದನರಿವುದೇ ತನಗುನ್ನತದ ಪದವಿ ॥ ೧೦ ॥

ಬಾಯಬ್ರಹ್ಮವನುಡಿವವಸಾತ್ರದಿ । ಮಾಯೆಯಳಿದುದೆ? ನಿಜಸುಖವುತನ ।
ಗಾಯಿತೇ? ಕತ್ತಲೆಯ ಮನೆಯೊಳು ದೀಪವಾರ್ತೆಯನು ॥
ಬಾಯಲಾಡಲು ಬಹಳ ಕತ್ತಲೆ । ಹೋಯಿತೇ? ಅದರಂತೆಯನುಭವ ।
ದಾಯತಿಕೆ ತನ್ನೊಳಗೆ ಜನಿಸದೆ ಬಾಯರಿವು ವ್ಯರ್ಥ ॥ ೧೧ ॥

ಕ್ಲೇಶಪಂಚಕಗಳನು ಕೆಡಿಸದೆ, । ಪಾಶವೆಂಟನು ಪರಿಹರಿಸದಲೆ, ।
"ನೀ ಶಿವನು ನೀ ಬ್ರಹ್ಮ"ನೆಂದುಪದೇಶವನು ಮಾಡೆ ॥
ಆ ಶಿವನು ಸೆರೆಯರಸನಂದದಿ । ಗಾಸಿಯಾಗುತ ಬದ್ಧನಾಗಿಹ; ।
ಲೇಸೆನಿಪ ನಿಜಸುಖವ ಪಡೆಯದೆ ಮುಕ್ತನೆಂತಹನು? ॥ ೧೨ ॥

---

೯. ಕಳ್ಳಹಣಗಳು—ಸಲ್ಲದ ನಾಣ್ಯಗಳು. ಧರ್ಮಗಳು (+ಅವು)—ನೀತಿಪ್ರಧಾನವಾದ ಆಚಾರಗಳು. ಎಡವಟ್ಟು—ಚೆನ್ನಾಗಿ ಫಲವನ್ನು ಕೊಡುವಷ್ಟು ಸಾಮರ್ಥ್ಯವಿಲ್ಲವೆಂದರ್ಥ. ಸೋಹಮ್ಮೆನಿಪ ನಿಜಮುದ್ರೆ—ಸೋಽಹಂ (ಆ ಪರಬ್ರಹ್ಮವೇ ನಾನು) ಎಂಬ ಹಂಸಮಂತ್ರದ ಅಭಿಪ್ರಾಯವೇ ತನ್ನ ಮುಖ್ಯಚಿಹ್ನ.

೧೦. ಬ್ರಹ್ಮವಿದ್ಯೆಯ ನಿರ್ಣಯಿಸಲರಿದು—ಇದು 'ಇದೇನು ಬ್ರಹ್ಮವಿದ್ಯೆಯೇ?' ಎಂಬ ಗಾದೆಯ ಅನುವಾದ. ಬ್ರಹ್ಮವಿದ್ಯೆಯ ಆಳವನ್ನು ಕಂಡುಹಿಡಿಯಲಾಗುವದಿಲ್ಲವೆಂದು ತಾತ್ಪರ್ಯ. ಲೌಕಿಕವನ್ನು—ಲೋಕಸಂಬಂಧವಾದ ಮೋಹವನ್ನು.

೧೧. ಆಯತಿಕೆ—ವಿಸ್ತಾರ. ಬಾಯರಿವು—ಬರೀ ಬಾಯಲ್ಲಾಡುವದಕ್ಕೆ ಬರುವಜ್ಞಾನ.

೧೨. ಕ್ಲೇಶಪಂಚಕಗಳು ಮತ್ತು ಅಷ್ಟಪಾಶ—೧ ಅ. ೨೨ ಪ. ನ್ನು ನೋಡಿ. ಸೆರೆಯರಸನಂದದಿ—ಬಂದಿಯಾಗಿರುವ ದೊರೆಯಂತೆ (ಬೇಡಿಯನ್ನು ಕಳೆದುಕೊಂಡು ರಾಜ್ಯವನ್ನು ತಿರುಗಿ ಪಡೆದಪರಲ್ಲವೆ ಅವನು ನಿಜವಾದ ದೊರೆಯಾಗುವದು! ಅದರಂತೆ ಕ್ಲೇಶಗಳನ್ನೂ ಪಾಶಗಳನ್ನೂ ಕಳೆದುಕೊಂಡರೆ ಮಾತ್ರ ಜೀವನು ಶಿವನಾಗುವನು).

ಎಲೆ ಧನಂಜಯ, ಸರ್ವಧರ್ಮವ। ನುಳಿದು ನನ್ನನೆ ಭಜಿಸು ; ಪಾಪವ।
ತೊಲಗಿಸುವೆ ; ನಿನಗೀಗ ಮೋಕ್ಷವನಿತ್ತು ಸಲಹುವೆನು ; ॥
ಹಲವು ಕೊಂಬೆಗೆ ಹಾರಮೊಂದನೆ। ಬಲುವಿಡಿದು ಗತಿವಡೆವುದೆಂದದ।
ತಿಳುಹಿದನು ಶ್ರೀಕೃಷ್ಣ ಗೀತಾಪರಿಸಮಾಪ್ತಿಯಲಿ ॥ ೧೩ ॥

ಮತಗಳಲಿ ಬಹುವಿಧದ ಮುಕ್ತಿಯ। ಗತಿಗಳನು ಪೇಳಿದೊಡದೆಲ್ಲವು।
ಕ್ಷಿತಿಯೊಳೆಕ್ಕೆಯ ಹಾಲು ಕಳ್ಳಿಯ ಹಾಲದೆಂಬಂತೆ ॥
ಅತಿಶಯದ ಗೋಕ್ಷೀರವಪ್ಪುದೆ ?। ಶ್ರುತಿವಿದಿತಸಾಯುಜ್ಯಮೋಕ್ಷ।
ಕ್ಕಿತರಗತಿಗಳು ಸರಿಬಹವೆ ? ಶುಕಯೋಗಿ, ಕೇಳೆಂದ ॥ ೧೪ ॥

ಸ್ವಾನುಭವ ಗುರುವಾಕ್ಯ ಶಾಸ್ತ್ರ। ಜ್ಞಾನವೊಂದೇ ಪರಿಯದೆನಿಸೆ, ನಿ।
ದಾನಿಸಿಯೆ ನಿಶ್ಚಯಿಸಿ, ನಿರ್ಗುಣವಾದ ನಿಜಪದವ ॥
ಧ್ಯಾನಿಸುತ್ತಿರೆ ವರಸಮಾಧಿಯ। ಮೌನಮುದ್ರೆಯ ಧರಿಸಿ ಮೆರೆದಿಹ।
ಮಾನನಿಧಿ ಮದನಾರಿಯೆನಿಸುವ ; ಮರ್ತ್ಯನವನಲ್ಲ ॥ ೧೫ ॥

ಬಾಲ್ಯವಾರ್ಧಕ್ಯಗಳೊಳಿಲ್ಲನಿ। ತಿಲ್ಲ ತನಗೆ ಸ್ವತಂತ್ರ; ಯೌವನ।
ದಲ್ಲಿ ತನ್ನಾಧೀನವಹ ಸ್ವಾತಂತ್ರ್ಯಮುಳ್ಳಲ್ಲಿ ॥
ಮೆಲ್ಲಮೆಲ್ಲನೆ ಸಂಸೃತಿಯ ತೊಡ। ಕೆಲ್ಲವನು ಸಡಲಿಸಿ, ಕೃಪಾಳಹ।
ಬಲ್ಲ ಗುರುವನು ಸೇರಿ, ತನ್ನನು ತಿಳಿಯಲವ ಮುಕ್ತ ॥ ೧೬ ॥

---

೧೩. ಸರ್ವಧರ್ಮವ. . . .ಸಲಹುವೆನು—ಈ ಅಭಿಪ್ರಾಯಕ್ಕೆ ಆಧಾರವಾದ ಗೀತೆಯ ಶ್ಲೋಕವೇನೆಂದರೆ:—"ಸರ್ವಧರ್ಮಾನ್ ಪರಿತ್ಯಜ್ಯ ಮಾಮೇಕಂ ಶರಣಂ ವ್ರಜ। ಅಹಂ ತ್ವಾ ಸರ್ವಪಾಪೇಭ್ಯೋ ಮೋಕ್ಷಯಿಷ್ಯಾಮಿ ಮಾ ಶುಚಃ ॥" ಹಲವು. . . . .ಗತಿವಡೆವುದು—ಈ ಅಭಿಪ್ರಾಯಕ್ಕೆ ಆಧಾರವಾದ ಗೀತೆಯ ಶ್ಲೋಕವೇನೆಂದರೆ:—"ವ್ಯವಸಾಯಾತ್ಮಿಕಾ ಬುದ್ಧಿರೇಕೇಹ ಕುರುನಂದನ। ಬಹುಶಾಖಾಹ್ಯನಂತಾಶ್ಚ ಬುದ್ಧಯೋಽವ್ಯವಸಾಯಿನಾಮ್ ॥"

೧೪. ಅತಿಶಯದ—ಉತ್ಕೃಷ್ಟವಾದ. ಇತರಗತಿಗಳು—ಸಾಲೋಕ್ಯ (ಇಷ್ಟದೇವತೆಯ ಲೋಕವನ್ನು ಪಡೆಯುವದು), ಸಾಮೀಪ್ಯ (ಇಷ್ಟದೇವತೆಯ ಸಮೀಪವನ್ನು ಪಡೆಯುವದು), ಸಾರೂಪ್ಯ (ಇಷ್ಟದೇವತೆಯ ಆಕಾರವನ್ನು ಪಡೆಯುವದು). ಇವುಗಳೆಲ್ಲ ಹೇಗೆ ಎಕ್ಕೆಯ ಹಾಲು ನೊರೆಹಾಲಾದ ಹಸುವಿನ ಹಾಲಿನಂತಲ್ಲವೊ ಹಾಗೆ ನಿಜವಾದ ಮುಕ್ತಿಗಳಲ್ಲ.

೧೫. ವರಸಮಾಧಿಯ ಮೌನಮುದ್ರೆಯ—ಹೆಚ್ಚಿನ ಸಮಾಧಿಯ ರೂಪವಾದ ಮೌನ ಲಕ್ಷಣವನ್ನು.

ಅದು ನಿವಿತ್ತದಿ ಮಗನೆ ಸದ್ಗುರು। ಪದಪಯೋಜವ ನೆಮ್ಮಿ, ಶಾಸ್ತ್ರವ।
ವಿದಿತವಾಗಿಹುದೆನಿಸಿ, ಮನವರಿವಂತೆ ಪ್ರಶ್ನೆಗಳ ॥
ಮುದವೊದವೆ ವಿನಯೋಕ್ತಿಯಲಿ ಮಾ। ಡಿಮೊಡವೇ ಅನುಕೂಲತರ್ಕವು; ।
ಸದಮಲಾತ್ಮಜ್ಞಾನ ಕೇಳದರಿಂದ ಸಿದ್ಧಿಪುದು ॥ ೧೭ ॥

ಕೇಳು ಶುಕ ದೃಗ್ದೃಶ್ಯಭೇದವ, । ಪೇಳುವೆನು ಕ್ಷೇತ್ರಜ್ಞಕ್ಷೇತ್ರಗ ।
ಳೋಳಿಹ ವಿಭಾಗದ ವಿವೇಕವ, ಪಂಚಕೋಶಗಳ, ॥
ಕಾಳುಮತಗಳ ಖಂಡನೆಗಳನು, । ಸ್ಥೂಲ ಮೊದಲಹ ತನುವಿನಳತೆಯು, ।
ಮೇಲೆ ತ್ವಂಪದಲಕ್ಷ್ಯವಹ ಚಿತ್ಸುಖದ ವಿವರಣೆಯ ॥ ೧೮ ॥

ಗುರುವೆ, ಬಿನ್ನಹ; ಜೀವಪರಮರ । ಪರಿಯುದೆಂತೈ? ವಾಚ್ಯಲಕ್ಷ್ಯದ ।
ತೆರನದಾವುದು? ಲಕ್ಷಣೆಯಲದಕೈಕ್ಯವೆಂತಹುದು ? ॥
ಎರಡು ತನುವೆಂತಾಯಿತೊಬ್ಬಗೆ । ದೊರೆವುದೆಂತದ್ವೈತನಿಜಸುಖ ।
ವರಿದಲಾ! ಈ ಸಂಶಯವ ಪರಿಹರಿಸಬೇಕೆಂದ ॥ ೧೯ ॥

---

೧೭. ನೆಮ್ಮಿ—ಆಶ್ರಯಿಸಿ. ಮನವರಿವಂತೆ ಪ್ರಶ್ನೆಗಳ—ಹೀಗೆ ಪ್ರಶ್ನೆಗಳನ್ನು ಮಾಡಿ ತಿಳಿದುಕೊಳ್ಳಬೇಕೆಂದು ಗೀತೆಯಲ್ಲಿ ಶ್ರೀಕೃಷ್ಣನು "ತದ್ವಿದ್ಧಿ ಪ್ರಣಿಪಾತೇನ ಪರಿಪ್ರಶ್ನೇನ ಸೇವಯಾ" ಎಂಬ ಮಾತಿನಿಂದ ಹೇಳಿದ್ದಾನೆ. ಮುದವೊದವೆ—ಸಂತೋಷವುಂಟಾಗುವಂತೆ. ಅನುಕೂಲತರ್ಕ—ವೇದದ ಅರ್ಥಕ್ಕೆ ಬೆಂಬಲವಾದ ಯುಕ್ತಿ.

೧೮. ದೃಗ್ದೃಶ್ಯ—ದೃಕ್ (ನೋಡುವವನು, ಆತ್ಮ) +ದೃಶ್ಯ (ಹೊರಗೆ ಕಾಣುವದು, ಅನಾತ್ಮ). ಕ್ಷೇತ್ರಜ್ಞಕ್ಷೇತ್ರಗಳು—ಕ್ಷೇತ್ರಗಳನ್ನೆಲ್ಲ ತಿಳಿಯುವವನು ಮತ್ತು ಶರೀರ ಮೊದಲಾದ ಹೊರಗಣ ವಿಷಯಗಳು. ಪಂಚಕೋಶ—ಅನ್ನಮಯ (ಸ್ಥೂಲದೇಹ), ಪ್ರಾಣಮಯ (ಉಸಿರು), ಮನೋಮಯ (ಮನಸ್ಸು), ವಿಜ್ಞಾನಮಯ (ಬುದ್ಧಿ), ಆನಂದಮಯ (ವಿಷಯಸುಖದ ಅನುಭವ). ಕಾಳು—(ಕಾಡು) ಕುತ್ಸಿತ. ಸ್ಥೂಲ. .....ನಳತೆಯು—ಸ್ಥೂಲಸೂಕ್ಷ್ಮಶರೀರಗಳ ಸ್ವರೂಪವೇನೆಂಬುದನ್ನು. ಲಕ್ಷ್ಯ—ಮಾತಿನಿಂದ ನೇರವಾಗಿ ಹೇಳಲ್ಪಡದೆ ಆ ಮಾತಿನ ಸಂಬಂಧದಿಂದ ಗೊತ್ತಾಗುವ ವಸ್ತು.

೧೯. ಜೀವಪರಮರ—ಜೀವಪರಮಾತ್ಮರ. ವಾಚ್ಯ—ಮಾತಿನಿಂದ ನೇರವಾಗಿ ಹೇಳಲ್ಪಡುವ ವಸ್ತು. ಲಕ್ಷಣೆಯಲಿ—ಲಕ್ಷ್ಯವಾದ ಅರ್ಥವನ್ನು ತೆಗೆದುಕೊಂಡಾಗ. ಎರಡು... ತೊಬ್ಬಗೆ—ಒಬ್ಬನಾಗಿರುವ ಪರಮಾತ್ಮನಿಗೆ ತನ್ನ ಪರಮಾತ್ಮಸ್ವರೂಪವೂ ಜೀವಸ್ವರೂಪವೂ ಎರಡೂ ಹೇಗಾಯಿತು ? ಅರಿದಲಾ—ಬಹು ಅಸಾಧ್ಯ ! ಅಥವಾ ಆಶ್ಚರ್ಯ !

ಸಚ್ಚಿದಾನಂದೈಕರಸವೇ । ಹುಚ್ಚುಗೊಂಡೆರಡಾಗಿ, ತನ್ನೊಳು ।
ಹೆಚ್ಚುಕುಂದಿನ ಹೆಸರ ಭೇದಭ್ರಾಂತಿಯಾಗಿರಲು ॥
ಅಚ್ಚರಿಯದೆನಗಾಯ್ತು ; ಕರುಣಿಸು । ಸಚ್ಚರಿತ ನೀನೆನಲು, ಮುನಿಪತಿ ।
ಹೆಚ್ಚಿ ಮನದಲಿ ಮಗನ ಮಾತಿಗೆ ಮೆಚ್ಚಿ ಹೇಳಿದನು ॥ ೨೦ ॥

ಜೀವನಾರೆಂದೆನಲು ಹಮ್ಮಿನ । ಭಾವವುಳ್ಳವನೀಶ್ವರನು ಮಾ ।
ಯಾವಿಲಾಸವಿಚಿತ್ರರೂಪನು ; ವಾಕ್ಯವಿವು ತಿಳಿಯೆ ; ॥

---

೨೦. ಹುಚ್ಚುಗೊಂಡೆರಡಾಗಿ—ಹುಚ್ಚು ಹಿಡಿದಂತೆ ಜೀವ, ಈಶ್ವರ ಎಂದು ಎರಡು ಬಗೆಯಾಗಿ. ಹೆಚ್ಚುಕುಂದಿನ—ಈಶ್ವರನು ಹೆಚ್ಚಿನವನೆಂದು ಜೀವನು ಕಡಿಮೆಯವನೆಂದೂ. ಭೇದಭ್ರಾಂತಿ--ಅವೆರಡೂ ಬೇರೆಬೇರೆಯೆಂಬ ತಪ್ಪುತಿಳುವಳಿಕೆ.

೨೧. ಹಮ್ಮಿನ ಭಾವವುಳ್ಳವನು—ನಾನೆಂಬ ಅಭಿಮಾನವುಳ್ಳವನು. ನಾನು ನೀನು ಎಂಬ ಮಾತಿಗೆ ಲಕ್ಷ್ಯಾರ್ಥವು ಬ್ರಹ್ಮವಾದರೂ ವಾಚ್ಯಾರ್ಥವು ಜೀವನಾಗುವದು. ಜೀವನ ಲಕ್ಷಣದ ವಿಷಯದಲ್ಲಿ ವೇದಾಂತಿಗಳಲ್ಲಿ ಎರಡು ಮುಖ್ಯವಾದ ಮತಭೇದಗಳಿವೆ. ಶುದ್ಧಚೈತನ್ಯವೂ ಅಂತಃಕರಣವೂ ಅಂತಃಕರಣದಲ್ಲಿ ಬಿದ್ದಿರುವ ಪ್ರತಿಬಿಂಬವೂ ಕೂಡಿ ಜೀವನೆನ್ನುವದು ಒಂದು ಮತ ; ಇದನ್ನು ಪ್ರತಿಬಿಂಬವಾದವೆನ್ನುವರು. ಅಂತಃಕರಣದ ಉಪಾಧಿಯಿಂದ ಕೂಡಿದ ಕೇವಲ ಚೈತನ್ಯವೇ ಜೀವವೆನ್ನುವದು ಇನ್ನೊಂದು ಮತ, ಇದನ್ನು ಅವಚ್ಛಿನ್ನವಾದವೆನ್ನುವರು ಈ ಬೇರೆ ಬೇರೆ ವಾದಿಗಳು ತಮ್ಮ ತಮ್ಮ ವಾದದ ಶ್ರೇಷ್ಠತೆಯನ್ನು ಸಾಧಿಸುವದಕ್ಕೆ ಹೋಗುವದುಂಟು. ಆದರೆ ಹೀಗೆ ಮಾಡುವದರಲ್ಲಿ ಹುರುಳಿಲ್ಲ. ಜೀವನು ಪ್ರತಿಬಿಂಬನೆಂದು ಅಥವಾ ಉಪಾಧಿಯಿಂದ ಕೂಡಿದ ಬ್ರಹ್ಮವೆಂದು ಹೇಳುವದು ಚೈತನ್ಯದಲ್ಲಿ ಜೀವತ್ವವು ಆರೋಪಿತವೆಂಬಿಷ್ಟು ಮಾತ್ರವನ್ನು ಹೇಳುವದಕ್ಕೇ ಹೊರತು ಪ್ರತಿಬಿಂಬವು ನಿಜವಾಗಿ ಬಿದ್ದಿರುವದೆಂದೂ ಅಂತಃಕರಣವು ನಿಜವಾಗಿ ಉಪಾಧಿಯಾಗಿರುವದೆಂದೂ ತಿಳಿಯುವಷ್ಟು ದೂರಕ್ಕೆ ಇದರ ಅರ್ಥವನ್ನು ಜಗ್ಗಬಾರದು. ಹಮ್ಮಿನ ಭಾವವುಳ್ಳವನೆಂಬುದು ಮೇಲಿನ ಎರಡು ಮತಗಳಿಗೂ ಅಗತ್ಯವಾದ ಮಾತೇ ಆಗಿರುವದು. ಪ್ರತಿಬಿಂಬದಲ್ಲಾಗಲಿ ಉಪಾಧಿಯಿಂದ ಕೂಡಿದ ಚೈತನ್ಯದಲ್ಲಾಗಲಿ ಹಮ್ಮಿನ ಭಾವವಿರುವಿಕೆಯೇ ಜೀವನ ಲಕ್ಷಣವು ಶ್ರೀಮಚ್ಛಂಕರಭಗವತ್ಪಾದರು ಮೇಲಿನ ಎರಡು ದೃಷ್ಟಾಂತಗಳನ್ನೇ ಅಲ್ಲದೆ ಆರೋಪಿತತ್ವವನ್ನು ಸೂಚಿಸುವಂಥ ಆಕಾಶದ ಕಪ್ಪು ಮೊದಲಾದ ಎಷ್ಟೋ ದೃಷ್ಟಾಂತಗಳನ್ನು ಸಮಯಾನುಸಾರವಾಗಿ ಉದಾಹರಿಸುವದುಂಟು. ಇದರಿಂದ ಈ ಎರಡೂ ಬೇರೆ ಬೇರೆ ಪಕ್ಷಗಳೇ ಅಲ್ಲ. ಆದ ಕಾರಣ ಇಲ್ಲಿ ಈ ಗ್ರಂಥಕಾರನು ಯಾವ ಪಕ್ಷವನ್ನೂ ಎತ್ತಿ ಹಿಡಿಯದೆ ಈ ಲಕ್ಷಣವನ್ನು ಹೇಳಿರುವದು ಅವನ ಅನುಭವದ ತಿರುಳನ್ನು ಸೂಚಿಸುವದು. ಮಾಯಾವಿಲಾಸವಿಚಿತ್ರ

ಈ ವಿರೋಧಾಂಶಗಳ ಕಳೆಯು । ಳ್ಳುವುದುಳಿವುದೊ ಲಕ್ಷಣೆಯುವೆನಿ ।
ಜಾವಬೋಧವು; ಲಕ್ಷ್ಯವೆರಡೊಂದೆಂಬುದೈಕ್ಯಾರ್ಥ ॥ ೨೧ ॥

"ತತ್ತ್ವಮಸಿ" ಎಂಬುದರೊಳಗೆ ವಾ । ಚ್ಯಾರ್ಥದಲ್ಲಿ ವಿರೋಧವಾಗಲು ।
ಮಿಥ್ಯವನು ಕಳೆಕಳೆದು, ಪದಗಳ ಶೋಧನೆಯ ಮಾಡಿ, ॥
ಸತ್ಯವಹ ಲಕ್ಷ್ಯಾರ್ಥವನು ಮಿಗೆ ! ತಥ್ಯಲಕ್ಷಣೆಯಿಂದ ಲಕ್ಷಿಸೆ, ।
ಪ್ರತ್ಯಗಾತ್ಮಪರಾತ್ಮರೈಕ್ಯವು ಸಿದ್ಧಿಸುವದೆಂದ ॥ ೨೨ ॥

ಅಂದು ತುಂಗಾತೀರದಲಿ ವಟು । ವಿಂದು ಗಂಗಾತೀರದಲಿ ಯತಿ ।
ಯೆಂದದೊಬ್ಬನ ದೇಹಮಾತ್ರವ ಲಕ್ಷಿಸುವ ತೆರದಿ ॥
ಅಂದು ಇಂದೆಂಬೆರಡು ತೆರನನು । ನಂದ ಲಕ್ಷಣೆಯಿಂದ ಕಳೆದುಳಿ ।
ದೊಂದಖಂಡಾದ್ವೈತನಿಜಸುಖ ಲಕ್ಷ್ಯವೆನಿಸುವನು ॥ ೨೩ ॥

---

ರೂಪನು–ತನ್ನ ಅಧೀನದಲ್ಲಿರುವ ಮಾಯಾಶಕ್ತಿಯ ಆಟವಾಗಿ ಬಗೆಬಗೆಯ ರೂಪಗಳಿಂದ ಕಾಣುವವನು. ವಿರೋಧಾಂಶಗಳ–ಜೀವನು ಅಹಂಕಾರಿಯಾಗಿರುವನೂ ಈಶ್ವರನು ಮಾಯಾಶಕ್ತಿಯಿಂದ ಕೂಡಿರುವನೂ ಒಂದಕ್ಕೊಂದು ವಿರೋಧ. ಲಕ್ಷ್ಯವೆರಡು—ಜೀವನ ಅಹಂಕಾರವನ್ನು ಕಳೆದ ಮೇಲೆ ಉಳಿದ ಚೈತನ್ಯವೂ ಈಶ್ವರನ ಮಾಯಾಶಕ್ತಿಯನ್ನು ಕಳೆದ ಮೇಲೆ ಉಳಿದ ಚೈತನ್ಯವೂ ಎರಡೂ.

೨೨. "ತತ್ತ್ವಮಸಿ"–ನೀನು ಅದೇ ಆಗಿದ್ದಿ (ಶ್ರುತಿವಾಕ್ಯಕ್ಕೆ ಪರಿಶಿಷ್ಟವನ್ನು ನೋಡಿ). ಮಿಥ್ಯವನು—ಸುಳ್ಳಾದವನ್ನು (ಜೀವನ ಅಹಂಕಾರವೂ ಈಶ್ವರನ ಮಾಯಾಶಕ್ತಿಯೂ ಸುಳ್ಳಾದವುಗಳು). ಸತ್ಯವಹ ಲಕ್ಷ್ಯಾರ್ಥವನು—ನಿಜವಾದ ಲಕ್ಷ್ಯಾರ್ಥವನ್ನು. (ಹೆಸರಿನಿಂದ ನೇರವಾಗಿ ಕಾಣುವ ವಾಚ್ಯಾರ್ಥದಲ್ಲಿ ವಿರೋಧವು ತೋರಿದರೆ ಅದು ನಿಜವಾದ ಅರ್ಥವಲ್ಲ; ಅದಕ್ಕೆ ಸಂಬಂಧಪಟ್ಟ ಮತ್ತೊಂದರ್ಥವನ್ನು ತೆಗೆದುಕೊಳ್ಳಬೇಕು; ಉದಾಹರಣೆಗೆ ಕಲ್ಲೆದೆಯೆಂದರೆ ಕಲ್ಲಿನಲ್ಲಿ ಮಾಡಿದ ಎದೆ ಎಂಬುದು ವಾಚ್ಯಾರ್ಥವಷ್ಟೆ; ಈ ಅರ್ಥವು ಹೊಂದುವದಿಲ್ಲವಾದ್ದರಿಂದ ನಿಜವಾದದ್ದಲ್ಲ; ಆದ್ದರಿಂದ ಕಲ್ಲಿನಂತೆ ಕಠಿನವಾದ ಎಂಬ ಲಕ್ಷ್ಯಾರ್ಥವನ್ನು ತೆಗೆದುಕೊಳ್ಳಬೇಕು; ಈ ವಾಚ್ಯಾರ್ಥವು ನಿಜವಾದ ಅರ್ಥವಾಗುವದು). ಪ್ರತ್ಯಗಾತ್ಮ—ನಮ್ಮೊಳಗಿರುವ ಶುದ್ಧಾತ್ಮ. ಪರಾತ್ಮ—ಶ್ರುತಿಯಲ್ಲಿ ಹೇಳಿರುವ ಪರಬ್ರಹ್ಮ. ಐಕ್ಯವು–ಎರಡೂ ಒಂದೆಂಬುದು.

೨೩. ಲಕ್ಷ್ಯ—ಇಲ್ಲಿ ಅಂದು, ಇಂದು ಎಂಬಿವು ಕಾಲಭೇದವನ್ನು ಹೇಳುವ ಮಾತುಗಳು. ವಟು, ಯತಿ ಎಂಬಿವು ಆಶ್ರಮಭೇದವನ್ನು ಹೇಳುವ ಮಾತುಗಳು. ಕಾಲಗಳಿಗೂ ಆಶ್ರಮಗಳಿಗೂ ಐಕ್ಯವು ಕೂಡುವದಿಲ್ಲ. ಇವೆರಡನ್ನೂ ಬಿಟ್ಟು ಉಳಿದ ದೇಹ

ಪದಗಳೆರಡರ ಶೋಧನೆಯ ಮಾ | ಡಿದರೆ ನಿಜಮಾದುಳಿವ ನಿಲುವದು ; |
ವಿದಿತವಾಗಿಯೆ ಹಂಸ ನೀರಕ್ಷೀರಭೇದವನು ||
ಮುದವ್ರೊದವೆ ಬೇರ್ಪಡಿಸುವಂದದಿ | ಪದವಲು ಲಕ್ಷ್ಯವ ಸಾಧಿಸುತ್ತಲಿ |
ತುದಿಯಲೈಕ್ಯವ ಪಡೆಯೆ ನಿತ್ಯಾನಂದವಹುದೆಂದ || ೨೪ ||

ತ್ವಂಪದದ ಲಕ್ಷ್ಯವನು ಸಾಧಿಸು; | ಪೆಂಪಿನಿಂ ದೃಗ್ದೃಶ್ಯಭೇದದ |
ರಂಪರೆಯನೀಕ್ಷಿಸುವ ತೆರನನು ತಿಳುಪುವೆನು ನಿನಗೆ ; ||
ಸೊಂಪಿನೀ ತನು ಕರಣ ದೃಶ್ಯವು ; | ತಾಂ ಪೊಳೆವ ತತ್ಸಾಕ್ಷಿ ದೃಕ್ಕದು ; |
ಪೆಂಪು ಮಿಗೆ ದೃಗ್ದೃಶ್ಯಗಳ ನೀಂ ಲಕ್ಷಿಸುವವೆಂದ || ೨೫ ||

ಆವುದೊಂದಿದಿರಾಗಿ ತೋರ್ಪುದ | ದೇ ವಿಚಾರಿಸೆ ದೃಶ್ಯವೆನಿಪುದು ; |
ಭಾವಿಸುತಲದ ಕಾಂಬುದೇ ದೃಕ್ಕೆಂದು ಪೇಳುವರು; ||
ಈ ವಿಧವಲೀ ದೇಹದೊಳಗೊಳ | ಗೋವಿ ದೃಗ್ದೃಶ್ಯಗಳ ಸಾಧಿಸಿ |
ತೀವಿ ಪ್ರತ್ಯಗ್ಬೋಧವನು ಸಂಪಾದಿಸುವವೆಂದ || ೨೬ ||

ಕೇಳು ಶುಕ, ರೂಪುಗಳು ದೃಶ್ಯಗ | ಳಾಲಿಸಲು ಕಾಂಬಕ್ಷಿ ದೃಕ್ಕು; ವಿ |
ಶಾಲಲೋಚನ ದೃಶ್ಯವದನರಿದಿಪ್ಪ ಮನ ದೃಕ್ಕು ; ||

---

ಮಾತ್ರ ಒಂದೇ ಆಗುವದು. ವಾಕ್ಯದಲ್ಲಿ ಬೋಧಿತವಾದ ಐಕ್ಯವು ಇದೇ. ಇದರಂತೆ ವಿರೋಧವಾದ ಮಿಥ್ಯಾಧರ್ಮಗಳನ್ನುಳಿದ ವಸ್ತುವೇ "ತತ್ತ್ವಮಸಿ" ವಾಕ್ಯದ ಲಕ್ಷ್ಯಾರ್ಥವು.

೨೫. ಕರಣ–ಇಂದ್ರಿಯಗಳು. ತತ್ಸಾಕ್ಷಿ–ದೇಹವನ್ನೂ ಇಂದ್ರಿಯಗಳನ್ನೂ ನೋಡುತ್ತಿರುವ ಚೇತನ. ಪೆಂಪು ಮಿಗೆ— ಆನಂದವು ಉಕ್ಕುವಂತೆ.

೨೬. ತೀವಿ—ಪ್ರೀತಿಯಿಂದ. ಪ್ರತ್ಯಗ್ಬೋಧ-ತನ್ನೊಳಗಿರುವ ಶುದ್ಧಾತ್ಮನ ಅರಿವು.

೨೭. ಮೂಲದೃಕ್ಕು—ಮೂಲದೃಕ್ಕನ್ನು ಕಂಡುಹಿಡಿವ ಬಗೆಯೆಂತೆಂದರೆ:—ರೂಪುಗಳೆಲ್ಲ (ಹೊರಗಣ ವಿಷಯಗಳೆಲ್ಲ) ದೃಶ್ಯಗಳು; ಅವುಗಳನ್ನು ನೋಡುವ ಕಣ್ಣು ದೃಕ್ಕು. (ಇಲ್ಲಿ ಕಣ್ಣು ದೃಕ್ಕೆಂದಿದ್ದರೂ ಕಣ್ಣೊಂದನ್ನೇ ದೃಕ್ಕೆಂದು ತಿಳಿಯಬಾರದು. ಕಣ್ಣೆಂಬ ಮಾತಿನಿಂದ ಜ್ಞಾನೇಂದ್ರಿಯಗಳನ್ನೆಲ್ಲ ಗ್ರಹಿಸಬೇಕು. ವಿಷಯಗಳನ್ನೆಲ್ಲ ಒಂದಲ್ಲೊಂದು ರೀತಿಯಿಂದ ಅರಿಯುವಂಥ ಚರ್ಮ, ಕಣ್ಣು, ಕಿವಿ, ನಾಲಿಗೆ, ಮೂಗು, ಈ ಐದು ಜ್ಞಾನೇಂದ್ರಿಯಗಳನ್ನೂ ದೃಕ್ಕುಗಳೆಂದು ತಿಳಿಯಬೇಕು). ಇನ್ನೂ ಒಳಗೊಳಗೆ ಶೋಧಿಸುತ್ತ ಹೋದರೆ ಕಣ್ಣು ದೃಶ್ಯವಾಗುವದು (ಜ್ಞಾನೇಂದ್ರಿಯಗಳೆಲ್ಲ

ಮೇಲೆ ಕೇಳ್ವನ ದೃಶ್ಯವಾ ಮನ । ದೇಳಿಗೆಯ ಭಾವಿಸುವ ಸಾಕ್ಷಿಯೆ ।
ಮೂಲದೃಕ್ಕದರಿಂದ ದೃಕ್ಕೊಳಗಿಲ್ಲ ಕೇಳೆಂದ || ೨೭ ||

ನೀಲ, ಪೀತ, ಶ್ವೇತ, ರಕ್ತ, । ಸ್ಥೂಲ, ಸೂಕ್ಷ್ಮ, ಕೃಶೋಚ್ಚ, ನೀಚ, ವಿ।
ಶಾಲವಹ ರೂಪುಗಳು ಬಹುವಿಧವಾದ ದೃಶ್ಯಗಳು ; ||
ಆಲಿಸಿದೊಡದರಂದವನು ಸ । ಮ್ಮೇಳದಿಂದಲಿ ಕಾಂಬ ನೇತ್ರವ ।
ಹೇಳುವರು ದೃಕ್ಕೆಂದು ಶುಕಯೋಗೀಂದ್ರ ಕೇಳೆಂದ || ೨೮ ||

ಆಂಧ್ಯಮಾಂದ್ಯಪಟುತ್ವಭೇದದ । ಲೊಂದಿ ತೋರುವ ಲೋಚನವು ಹಲ।
ವಂದವಾಗಿಯೆ ದೃಶ್ಯವದನರಿದಿಪ್ಪ ಮನ ದೃಕ್ಕು ; ।
ಕುಂದುಹೆಚ್ಚಿನ ಹರ್ಷರೋಷಗ । ಳಿಂದ ಕಾಮಾದಿಗಳ ಕುರುಹಿನ ।
ಚಂದವಹ ಮನ ದೃಶ್ಯ; ದೃಕ್ಕದನರಿವ ಬರಿಯರಿವು || ೨೯ ||

ಬುದ್ಧಿಮನವೆಂಬೆರಡು ರೂಪನು।ಹೊದ್ದಿ ತೋರ್ಪುದು ಕರಣವೊಂದೇ ||
ಬುದ್ಧಿ ನಿರ್ಮಲವಹುದು, ಮಲಿನಾಕಾರವಾ ಮನವು ; ||
ಬುದ್ಧಿಯರಿವುದು, ಮರೆವುದಾಮನ ; । ನಿರ್ಧರಿಸಲಾ ಮರವೆಯರಿವೆಯ ।
ಬದ್ಧರೂಪವನರಿವರಿವೆ ದೃಕ್ಕೆನಿಸಿ ತೋರುವದು || ೩೦ ||

---

ದೃಶ್ಯವಾಗುವದೆಂದರ್ಥ); ಮತ್ತು ಆ ಜ್ಞಾನೇಂದ್ರಿಯಗಳನ್ನೆಲ್ಲ ಅರಿಯುವಂಥ ಮನಸ್ಸು ದೃಕ್ಕಾಗುವದು. ಇನ್ನೂ ಒಳಹೊಕ್ಕು ನೋಡಿದರೆ ಆ ಮನವು ದೃಶ್ಯವಾಗುವದು ; ಆ ಮನಸ್ಸಿನ ಆಟಗಳನ್ನೆಲ್ಲ ಅರಿಯುವಂಥ ಸಾಕ್ಷಿಚೈತನ್ಯವು ದೃಕ್ಕಾಗುವದು- ಅದೇ ಮೂಲದೃಕ್ಕು. ಅದಕ್ಕಿನ್ನೊಂದು ದೃಕ್ಕಿಲ್ಲ. ಇದರಿಂದ ಒಂದು ಸಂಗತಿಯನ್ನು ಗ್ರಹಿಸ ಬಹುದು. ಅದೇನೆಂದರೆ: ವಿಷಯಗಳು ಯಾವಾಗಲೂ ದೃಶ್ಯವೆ; ಇಂದ್ರಿಯಗಳೂ ಮನಸ್ಸೂ ಒಮ್ಮೆ ದೃಶ್ಯಗಳೂ ಆಗುವವು ; ಒಮ್ಮೆ ದೃಕ್ಕೂ ಆಗುವವು; ಸಾಕ್ಷಿ ಚೈತನ್ಯವು ಮಾತ್ರ ಯಾವಾಗಲೂ ದೃಕ್ಕೇ.

೨೮. ಸಮ್ಮೇಳದಿಂದಲಿ---ಬೇರೆಬೇರೆಯಾಗಿ ಇವೆಲ್ಲವನ್ನೂ.

೨೯. ಆಂಧ್ಯ–ಕುರುಡು. ಮಾಂದ್ಯ–ಚುರುಕಾಗಿಲ್ಲದಿರುವದು. ಪಟುತ್ವ–ಸಾಮರ್ಥ್ಯ. ಒಂದಿ–ಕೂಡಿ. ಬರಿಯರಿವು---ಚೈತನ್ಯಮಾತ್ರವಾದ ಸಾಕ್ಷಿ.

೩೦. ಬುದ್ಧಿ—ನಿಶ್ಚಯಿಸುವ ಸ್ವಭಾವದ್ದು. ಮನ–ಸಂಶಯಸ್ವಭಾವದ್ದು. (ಈ ಅರ್ಥವನ್ನು ಕವಿಯು ಮುಂದೆ ೪೮ ನೇ ಪದ್ಯದಲ್ಲಿ ತಾನೇ ಹೇಳುವನು). ಕರಣ–ಅಂತಃ ಕರಣ. ಬದ್ಧರೂಪವ---ವಿಷಯವನ್ನು ಅರಿದೆನೆಂದು ಅಥವಾ ವಿಷಯವನ್ನು ಮರೆ ದೆನೆಂದು ವಿಷಯಕ್ಕೆ ಕಟ್ಟುಬಿದ್ದಿರುವಂಥ.

ದೇಹದಿಂದಿಂದ್ರಿಯಗಳಧಿಕವ । ದೂಹಿಸಲ್ಕಿಂದ್ರಿಯಗಳೆನಿಪ ಸ ।
ಮೂಹದಿಂ ಮನ ಮೇಲು; ಮನದಿಂದುತ್ತಮವು ಬುದ್ಧಿ ; ॥
ಓಹೊ! ಬುದ್ಧಿಯನರಿವ ಸಾಕ್ಷಿಯೆ । ಸೋಹಮೆನಿಸುವ ಪ್ರತ್ಯಗಾತ್ಮನು, ।
ಮೋಹರಹಿತನು; ತಿಳಿಯಲುತ್ತಮನಾತನಿಂದಿಲ್ಲ ॥ ೩೧ ॥

ಭೂತಪಂಚಕ, ಬುದ್ಧ್ಯಹಂಕೃತಿ, । ಸಾತಿಶಯದವ್ಯಕ್ತ, ದಶವಿಧ ।
ಜಾತವಾದಿಂದ್ರಿಯನಿಕರ, ಪ್ರಾಣಾದಿವಾಯುಗಳು, ॥
ಚೇತನಾಧೃತಿದುಃಖಸುಖಸಂ । ಘಾತವಿಚ್ಛಾದ್ವೇಷವೆಂಬಿವ ।
ನಾತುಮಜ್ಞರು ಕ್ಷೇತ್ರವೆಂದಿದ ಹೇಳುತಿಹರೆಂದ ॥ ೩೨ ॥

ಈ ವಿಧದ ಕ್ಷೇತ್ರವನು ಬಲ್ಲವ । ನಾವನವ ಕ್ಷೇತ್ರಜ್ಞನೆನಿಸುವ; ।
ದೇವತಿರ್ಯಜ್ಮರ್ತ್ಯಸಚರಾಚರಜಗತ್ತಿನಲಿ ॥
ಜೀವಭೂತನು; ಪ್ರತ್ಯಗೆನಿಸುವ ;। ಕೇವಲ ಚಿದಾನಂದಮಯಸ ।
ದ್ಭಾವ; ಸಹಜಾದ್ವೈತ; ನಿಜವದು ಮಗನೆ ಕೇಳೆಂದ ॥ ೩೩ ॥

---

೩೧. ದೇಹದಿಂ......ಪ್ರತ್ಯಗಾತ್ಮನು—ಈ ಪದ್ಯಭಾಗವು "ಇಂದ್ರಿಯಾಣಿ ಪರಾಣ್ಯಾಹುರಿಂದ್ರಿಯೇಭ್ಯಃ ಪರಂ ಮನಃ । ಮನಸಸ್ತು ಪರಾ ಬುದ್ಧಿರ್ಯೋ ಬುದ್ಧೇಃ ಪರತಸ್ತು ಸಃ" ಎಂಬ ಗೀತಾವಚನದ ಅಭಿಪ್ರಾಯ. ಉತ್ತಮನಾತನಿಂದಿಲ್ಲ—ಇದು "ಪುರುಷಾನ್ನ ಪರಂ ಕಿಂಚಿತ್ಸಾ ಕಾಷ್ಠಾ ಸಾ ಪರಾ ಗತಿಃ" ಎಂಬ ಶ್ರುತಿಯ ಅಭಿಪ್ರಾಯ.

೩೨. ಭೂತಪಂಚಕ—ಭೂಮಿ, ಜಲ, ಅಗ್ನಿ, ವಾಯು, ಆಕಾಶ. ಅವ್ಯಕ್ತ—ಜಗತ್ತಿನ ಮೂಲಬೀಜವಾದ ಪ್ರಕೃತಿ. ದಶವಿಧ......ನಿಕರ—ಕರ್ಮೇಂದ್ರಿಯಗಳೈದು (ವಾಕ್, ಪಾಣಿ, ಪಾದ, ಪಾಯು, ಉಪಸ್ಥ) ಮತ್ತು ಬುದ್ಧೀಂದ್ರಿಯಗಳೈದು (ಹಿಂದೆ ೨೭ ನೇ ಪದ್ಯದಲ್ಲಿದೆ). ಪ್ರಾಣಾದಿವಾಯುಗಳು—ಪ್ರಾಣ, ಅಪಾನ, ಸಮಾನ, ಉದಾನ, ವ್ಯಾನ. ಧೃತಿ—ದೇಹೇಂದ್ರಿಯಗಳನ್ನು ಎತ್ತಿ ಹಿಡಿದಿರುವದು. ಸಂಘಾತ—ದೇಹೇಂದ್ರಿಯಗಳ ಗುಂಪು. ಕ್ಷೇತ್ರ—ಈ ಪದ್ಯವು "ಮಹಾಭೂತಾನ್ಯಹಂಕಾರೋ ಬುದ್ಧಿರವ್ಯಕ್ತಮೇವ ಚ । ಇಂದ್ರಿಯಾಣಿ ದಶೈಕಂ ಚ ಪಂಚ ಚೇಂದ್ರಿಯಗೋಚರಾಃ ॥ ಇಚ್ಛಾ ದ್ವೇಷಃ ಸುಖಂ ದುಃಖಂ ಸಂಘಾತಶ್ಚೇತನಾ ಧೃತಿಃ । ಏತತ್ಕ್ಷೇತ್ರಂ ಸಮಾಸೇನ ಸವಿಕಾರಮುದಾಹೃತಮ್॥" ಎಂಬ ಗೀತಾಶ್ಲೋಕಗಳ ತಾತ್ಪರ್ಯ.

೩೩. ಕ್ಷೇತ್ರಜ್ಞ—ಈ ಅಭಿಪ್ರಾಯವು "ಏತದ್ಯೋ ವೇತ್ತಿ ತಂ ಪ್ರಾಹುಃ ಕ್ಷೇತ್ರಜ್ಞ ಇತಿ ತದ್ವಿದಃ" ಎಂಬ ಗೀತಾವಾಕ್ಯದ ತಾತ್ಪರ್ಯ. ಪ್ರತ್ಯಕ್—ಒಳಗಿರುವವನು.

ತನುವಿನೊಳಗಸುವಸುವಿನೊಳಗಿಹ। ಮನ,ಮನದೊಳಿಹ ಕರ್ತ,ಕರ್ತನ ।
ನೆನಹಿನೊಳಗಿಹ ಭೋಕ್ತೃ, ಭೋಕ್ತೃವಿನೊಳಗೆ ನಿಜಸಾಕ್ಷಿ ॥
ಎನಿಸಿಕೊಂಡಿಹ ಪ್ರತ್ಯಗಾತ್ಮನ । ಘನವಿವೇಕದಿ ತಿಳಿದನಾತ್ಮಗ ।
ಳನಿತುವನು ಬೇರ್ಪಡಿಸೆ ಚಿದ್ರೂಪಾಗಿ ತೋರುವನು ॥ ೩೪ ॥

ಸಾವಯುವವೀ ತನುವು; ಜಡದೃ । ಶ್ಯಾವಲಂಬನವನ್ನಮಯ ; ಷ ।
ಡ್ಭಾವವಿಕೃತಿಯನುಳ್ಳುದಿದು: ಬಾಲ್ಯಾದ್ಯವಸ್ಥೆಗಳ ॥
ಓವಿಕೊಂಡಿಹುದಹಹ ! ಶಕಟದ । ಭಾವದಲಿ ಪ್ರೇರಕನಧೀನವು; ।
ಭಾವಿಸಲು ಭೌತಿಕವಪಾತ್ರವು ಮಗನೆ ಕೇಳೆಂದ ॥ ೩೫ ॥

ನಿದ್ರೆಯಲಿ ಕೆಡೆದಿಪ್ಪುದಾ ಕ್ಷಣ । ವೆದ್ದರದು ಸಂಚರಿಸುತಿಪ್ಪುದು ; ।
ಹೊದ್ದಿದಸು ತೊಲಗಿದರೆ ಕಾಷ್ಠಪ್ರಾಯವಾಗಿಹುದು ; ॥
ಉದ್ದದೆಲುನರಮಾಂಸಚರ್ಮದಿ । ಬದ್ಧವಹ ದುರ್ಗಂಧವಶುಚಿಯ ।
ಮೇಧ್ಯಪೂರಿತಭಾಂಡವೀ ತನುವಧ್ರುವವಿದೆಂದ ॥ ೩೬ ॥

ಎಲು, ನರಂಗಳು, ಮಜ್ಜೆ ತಂದೆಯ। ಮಲದಲಾದವು; ತಾಯ ರಕ್ತವೆ ।
ಬಲಿದು ನೆತ್ತರ, ಮಾಂಸ, ಚರ್ಮಗಳಾಗಲದರಿಂದ ॥

---

೩೪. ಅಸು+ಅಸುವಿನೊಳಗೆ+ಇಹ. ಮನದೊಳಿಹ ಕರ್ತ— ಮನಸ್ಸಿನೊಡನೆ ಕೂಡಿರುವ ಚೈತನ್ಯಕ್ಕೆ ಕರ್ತನೆಂದು ಹೆಸರು. ಚಿದ್ರೂಪಾಗಿ—ಜ್ಞಾನರೂಪಾಗಿ.

೩೫. ಸ+ಅವಯವ—ಕೈಕಾಲು ಮೊದಲಾದ ಅವಯವಗಳಿಂದ ಕೂಡಿದ್ದು. ಜಡದೃಶ್ಯಾವಲಂಬನ—ಜಡತ್ವಕ್ಕೂ ದೃಶ್ಯತ್ವಕ್ಕೂ ಆಶ್ರಯವಾಗಿರುವದು. ಅನ್ನಮಯ—ವಿಶೇಷವಾಗಿ ಅನ್ನದಿಂದ ಬೆಳೆದ ಸ್ಥೂಲದೇಹ. (ಅನ್ನಮಯವಾದ ದೇಹವೇ ಆತ್ಮನೆನ್ನುವದು ಅಸುರರ ಸ್ವಾಮಿಯಾದ ವಿರೋಚನನ ಸಿದ್ಧಾಂತ. ಇದನ್ನು ಕೆಲವರು ಪಾಮರರು ಅನುಸರಿಸುತ್ತಾರೆ). ಷಡ್ಭಾವವಿಕೃತಿ—ಅಸ್ತಿ (ಇರುತ್ತದೆ), ಜಾಯತೇ(ಹುಟ್ಟುತ್ತದೆ), ವರ್ಧತೇ (ಬೆಳೆಯುತ್ತದೆ), ವಿಪರಿಣಮತೇ (ಬೇರೆ ರೂಪವನ್ನು ಪಡೆಯುತ್ತದೆ), ಅಪಕ್ಷೀಯತೇ (ಸೊರಗುತ್ತದೆ), ವಿನಶ್ಯತಿ (ಮರಣವನ್ನು ಪಡೆಯುತ್ತದೆ). ಬಾಲಾದ್ಯವಸ್ಥೆ—ಬಾಲ್ಯ, ಕೌಮಾರ, ಯೌವನ, ವಾರ್ಧಕ್ಯ. ಶಕಟ—ಗಾಡಿ. ಅಪಾತ್ರವು—ಆತ್ಮನೆಂಬ ಹೆಸರಿಗೆ ಯೋಗ್ಯವಲ್ಲ.

೩೬. ಕಾಷ್ಠಪ್ರಾಯ—ಕಟ್ಟಿಗೆಯಂತೆ. ಅಧ್ರುವ—ಅಶಾಶ್ವತ.

ಲಲನೆ ಪುರುಷವ್ಯಕ್ತಿಯೆಂಬುದು । ತಿಳಿಯಲವಯವಭೇದವಲ್ಲದೆ ।
ಮಲದ ಜಂಗಮುಭಾಂಡವೀ ತನುವಾತ್ಮನಲ್ಲೆಂದ || ೩೭ ||

ಎಲೆಲೆ, ಭ್ರಮಿಸಲದೇಕೆ? ತಂದೆಯ । ಮಲವಲಾ! ಮಮಕರಿಸಿ ಬರಿದೇ ।
ಬಳಲಿ ಸಲಹುವೆನೆಂದು ಬಗೆವುದು ಮರುಳುತನ ಮಗನೆ ||
ತಿಳಿದು ನೋಡಲು ಮಾಸಮಾಸದ । ಹೊಲೆಯ ನೆತ್ತರು ತಾಯುದರದೊಳು ।
ಬಲಿಬಲಿದು ಬೆಳೆದಾಯಿತೀ ಹೊಲೆದೇಹ ತಾನಲ್ಲ || ೩೮ ||

ಈಸುಪರಿಯಲಿ ತೋರ್ಪ ತನುವನು । ಮೋಸವಲಿ ತಾನೆಂದು ಬಹಳಾ ।
ಯಾಸದಿಂದಲಿ ಗಾಸಿಯಾದೆನಲಾ ! ವೃಥಾ ಎನುತ ||
ಈ ಶರೀರದ ಮೇಲಣಾಶಾ । ಪಾಶವನು ನೆರೆಹರಿದು, ನೀನ ।
ಭ್ಯಾಸವನು ಮಾಡುವದು ಮನದಲಿ ಮಗನೆ ಕೇಳೆಂದ || ೩೯ ||

ಪ್ರಾಣಗಳು ಬಹುವಿಧಗಳಾಗಿಯೆ । ಕಾಣಿಸುವವೀ ದೇಹಚೇಷ್ಟೆಗೆ ।
ಪ್ರಾಣವೆನಿಸುತ, ನಾಡಿಗಳೊಳಲ್ಲಲ್ಲಿ ಪಸರಿಸುತ, ||
ಮಾಣದಾ ತಿದಿಯಿಂದ ಹೊರಡುವ । ಕೇಣವಸಿಲಸ ತೆರದೊಳೆಸೆವೀ ।
ಘ್ರಾಣದೊಳಗುಚ್ಛ್ವಾಸನಿಶ್ವಾಸಗಳು ನೀನಲ್ಲ || ೪೦ ||

ಪ್ರಾಣ ಹೃದಯದೊಳಿಹುದು; ಗುದದಲ । ಪಾನ; ನಾಭಿಸ್ಥಾನದಲ್ಲಿ ಸ ।
ಮಾನ ; ತಿಳಿಯಲುದಾನ ಮಿಗೆ ಕಂಠಪ್ರದೇಶದಲಿ, ||

---

೩೭. ಮಲದಲಿ—ಹೊಲಸಿನಿಂದ. ಜಂಗಮುಭಾಂಡ-ಓಡಾಡುವ ಮಡಿಕೆ.

೩೮. ಮಮಕರಿಸಿ—ನನ್ನದೆಂದು. ಮಾಸಮಾಸದ-ಪ್ರತಿತಿಂಗಳ. ಹೊಲೆಯ-ಮುಟ್ಟಿನ. ಹೊಲೆದೇಹ—ಅಶುಚಿಮಯವಾದ ಶರೀರ.

೩೯. ಮೋಸದಲಿ—ತಪ್ಪುತಿಳಿವಳಿಕೆಯಿಂದ. ಅಭ್ಯಾಸವನು—ಈ ಶರೀರವು ನಾನಲ್ಲ ವೆಂಬ ಕಲ್ಪನೆಯನ್ನೆ ಮತ್ತೆಮತ್ತೆ ಮನಸ್ಸಿಗೆ ತಂದುಕೊಳ್ಳುವ ಪದ್ಧತಿಯನ್ನು.

೪೦. ಪ್ರಾಣಗಳು—ಪ್ರಾಣಮೊದಲಾದ ವಾಯುಗಳು. ಪ್ರಾಣವು—ಸಾಮರ್ಥ್ಯವನ್ನು ಕೊಡತಕ್ಕದ್ದು. ಘ್ರಾಣ—ಮೂಗು. ಉಚ್ಛ್ವಾಸನಿಶ್ವಾಸಗಳು ನೀನಲ್ಲ—(ಹಿರಣ್ಯ ಗರ್ಭೋಪಾಸಕರು ಪ್ರಾಣವನ್ನೆ ಆತ್ಮವೆಂದು ತಿಳಿಯುತ್ತಾರೆ) ನೀನು ಉಚ್ಛ್ವಾಸನಿಶ್ವಾಸ ಗಳನ್ನು ಆತ್ಮವೆಂದು ತಿಳಿಯಬೇಡ.

೪೧. ಪ್ರಾಣ....ಸರ್ವಶರೀರದಲ್ಲಿಹುದು—ಈ ಪದ್ಯಭಾಗವು "ಹೃದಿ ಪ್ರಾಣೋ ಗುದೇ‌ಽ·

ವ್ಯಾನ ಸರ್ವಶರೀರದಲ್ಲಿಹು । ದೀ ನಿಯಮದಲಿ ಪಂಚವಿಧಸಂ ।
ಸ್ಥಾನದಲಿ ತಮ್ಮತಮ್ಮ ಕೃತ್ಯಗಳಲ್ಲಿ ವರ್ತಿಪುವು ॥ ೪೧ ॥

ಚೇತನವ ಪಡೆದಾತ್ಮನಿಂದಲಿ, । ಭೂತತನುಕರಣೇಂದ್ರಿಯಂಗಳ ।
ಹೇತುವೆನಿಸುತ, ಹಸಿವುತೃಷೆಗಳ ಬಾಧೆಗೊಳಗಾಗಿ, ॥
ಓತು ತಾನಾ ಲಿಂಗದೇಹಸ । ಮೇತದಿಂ ಗಮನಾಗಮನಗಳ ।
ಲೀ ತೆರದಿ ವಿಹರಿಸುವ ಪ್ರಾಣಗಳಾತ್ಮನಲ್ಲೆಂದ ॥ ೪೨ ॥

ಪ್ರಾಣಗಳು ಜಡವಾತ್ಮನಜಡನು; । ಪ್ರಾಣಗಳನಿತ್ಯಗಳು, ನಿತ್ಯ ।
ಜ್ಞಾನಮಯನೀ ಆತ್ಮ ; ಚಲನಾತ್ಮಂಗಳೀ ಪ್ರಾಣ, ॥
ಸ್ಥಾಣುವಚಲನು ಪೂರ್ಣನಾತ್ಮನು; । ಪ್ರಾಣಗಳು ತಿಳಿ ದೃಶ್ಯ, ಸಾಧನ; ।
ವೀ ನಿಜಾತ್ಮನು ಸಾಕ್ಷಿ ಚೈತನ್ಯಾತ್ಮ ನೋಡೆಂದ ॥ ೪೩ ॥

ಲಿಂಗದೇಹವ ಕೂಡಿ, ಬಹುಜ । ನ್ಮಂಗಳಲಿ ತೊಳತೊಳಲುವೀ ಪ್ರಾ ।
ಣಂಗಳಾತುಮನೆಂದು ಬರಿದೇ ಭಂಗಪಟ್ಟದಕೇ ॥
ಕಂಗೆಡುತ ಕಳವಳಿಸಿ, ತನುವನು । ಹಿಂಗಲಾತುಮನಳಿದನೆಂದದ ।
ಸಂಗರಹಿತಾತ್ಮನೊಳಗಾರೋಪಿಸುವರಕಟೆಂದ ॥ ೪೪ ॥

ಇನಿತು ವಿಧವಾಗಿರ್ದ ಪ್ರಾಣಗ । ಳನಿತನಾತ್ಮಗಳೆಂದು ತಿಳಿದವ ।
ಘನವಿವೇಕದಿ ನೇತಿಗಳೆದದರಲ್ಲಿ ಮಮತೆಯನು ॥
ನೆನೆಯದದರ ನಿಮಿತ್ತಕಾರಣ । ವೆನಿಪ ನಿಜಚೈತನ್ಯವಸ್ತುವ ।
ನನಘ, ನಿನ್ನೊಳು ಕಂಡು ನೀನೆಂದದನು ಚಿಂತಿಪುದು ॥ ೪೫ ॥

---

ಪಾನಸ್ಸಮಾನೋ ನಾಭಿಸಂಸ್ಥಿತಃ । ಉದಾನಃ ಕಂಠದೇಶಸ್ತು ವ್ಯಾನಸ್ಸರ್ವಶರೀರಗಃ" ಎಂಬ ಅಮರಶ್ಲೋಕದ ತಾತ್ಪರ್ಯ. ಸಂಸ್ಥಾನ–ರೂಪ.

೪೩. ದೃಶ್ಯ ಸಾಧನ–ದೃಶ್ಯವಾಗಿಯೂ ಸಾಧನವಾಗಿಯೂ ಇರುವವು.

೪೪. ಹಿಂಗಲು–ಬಿಡಲು. ಅದ—ಆ ಮರಣವನ್ನು. ಆರೋಪಿಸುವರು—ಪ್ರಾಣದ ಸಂಬಂಧವು ಆತ್ಮನಿಗಿಲ್ಲದಿದ್ದರೂ ಆತ್ಮನೇ ಪ್ರಾಣನೆಂದೂ ಪ್ರಾಣನೇ ಆತ್ಮನೆಂದೂ ಆರೋಪಿಸುತ್ತಾರೆ.

೪೫. ಅನಿತು+ಅನಾತ್ಮಗಳೆಂದು–ಅವೆಲ್ಲವೂ ಅನಾತ್ಮಗಳೆಂದು. ನೇತಿಗಳೆದು–ಆತ್ಮಸ್ವರೂಪವು ಇದಲ್ಲವೆಂದು ತಿಳಿದು. ನೆನೆಯದೆ+ಅದರ. ನಿಮಿತ್ತಕಾರಣ–ಪ್ರಾಣಗಳಿಗಿಂತ ಬೇರೆಯಾಗಿದ್ದು ಪ್ರಾಣಗಳು ಎದ್ದು ಕಾಣುವಂತೆ ಮಾಡಿರುವ. ಅನಘ–ಪಾಪರಹಿತನೆ.

ಶ್ರೋತ್ರ ಶಬ್ದವ, ನೇತ್ರ ರೂಪವ, । ಗಾತ್ರವಾ ಸ್ಪರ್ಶನವ, ಜಿಹ್ವೆ ರ ।
ಸೋತ್ಕರವ, ಗಂಧವನು ನಾಸಿಕವರಿವವಿಂತೈಸೆ ॥
ಪುತ್ರ ಕೇಳೊಂದೊಂದು ವಿಷಯಕೆ । ಪಾತ್ರವೀ ಶ್ರೋತ್ರಾದಿಗಳು; ಸ ।
ರ್ವತ್ರ ಸಾಕ್ಷಿಕನಾತ್ಮನಿಂದ್ರಿಯವಾತ್ಮನಲ್ಲೆಂದ ॥ ೪೬ ॥

ತನ್ನತನ್ನಯ ವಿಷಯಗಳನವು । ನನ್ನಿಯಲಿ ಬೇರರಿವ ಕತದಿಂ ॥
ಭಿನ್ನವಿಷಯಗಳಾದ ಶ್ರೋತ್ರಾದಿಗಳನಾತ್ಮಗಳು ; ॥
ತನ್ನ ನಿಜರೂಪಲ್ಲವಾ ಜೈ । ತನ್ಯ ವಸ್ತುವಿನಿಂದ ಜಡದೃ ।
ಶ್ಯಾನ್ಯಸಾಧನವಾದಿವುಗಳುರೆ ಚೇಷ್ಟಿಸುತ್ತಿಹವು ॥ ೪೭ ॥

ಮನವೆ ಸಂಶಯರೂಪು; ಬುದ್ಧಿಯ । ನೆನಹು ನಿಶ್ಚಯರೂಪು; ಚಿತ್ತದ ।
ಘನತೆ ಬಹುಕಾಲಾನುಭವಸಂಸ್ಮರಣರೂಪಾಗಿ ॥
ತನುವಿನೊಳು ಪ್ರಾಣೇಂದ್ರಿಯಗಳೊಳ । ಗನಿತರಲಿ ತಾನೆಂಬ ಬಲು ಹ ।
ಮ್ಮನುಕರಿಸಿಕೊಂಡಿಪ್ಪುದದರಿಂದಾತ್ಮನಲ್ಲೆಂದ ॥ ೪೮ ॥

ಬುದ್ಧಿಸುಖದುಃಖೇಚ್ಛೆಮೊದಲಾ । ಗಿರ್ದ ನವವಿಧಗುಣಗಳಲಿ ಮೆರೆ ।
ದಿರ್ದು, ಗುಣಿಯೆಂದೆನಿಸಿ, ಕರ್ತೃತ್ವಾಭಿಮಾನದಲಿ ॥

---

೪೬. ಗಾತ್ರ–ಶರೀರ (ಇಲ್ಲಿ ತ್ವಗಿಂದ್ರಿಯವೆಂಬರ್ಥವನ್ನು ತೆಗೆದುಕೊಳ್ಳಬೇಕು). ಇಂದ್ರಿಯವಾತ್ಮನಲ್ಲೆಂದ–(ಸ್ಥಿರೀಶ್ವರವಾದಿಗಳಾದ ಲೋಕಾಯತರು ಇಂದ್ರಿಯಗಳನ್ನೇ ಆತ್ಮವೆನ್ನುತ್ತಾರೆ) ಇಂದ್ರಿಯವು ಆತ್ಮನಲ್ಲವೆಂದು ನೀನು ತಿಳಿ.

೪೭. ಕತದಿಂ–ಕಾರಣದಿಂದ. ಭಿನ್ನವಿಷಯಗಳಾದ–ಬೇರೆ ಬೇರೆ ವಿಷಯಗಳನ್ನು ಅರಿಯುವ (ಇಂದ್ರಿಯಗಳು ಆತ್ಮನಾದರೆ ಎಲ್ಲ ವಿಷಯಗಳೂ ಎಲ್ಲ ಇಂದ್ರಿಯಗಳಿಗೂ ತಿಳಿಯಬೇಕು ; ಹಾಗೆ ಅನುಭವದಲ್ಲಿಲ್ಲ; ಎಲ್ಲ ತಿಳಿವುಗಳೂ ಒಬ್ಬನಿಗೇ ಆಗುವದೆಂದು ಅನುಭವವಿದೆ; ಆದ್ದರಿಂದ ಆತ್ಮನು ಇಂದ್ರಿಯಗಳಿಗಿಂತ ಬೇರೆ). ಶ್ರೋತ್ರಾದಿಗಳು+ ಅನಾತ್ಮಗಳು. ಜಡದೃಶ್ಯಾನ್ಯಸಾಧನ–(ಇಂದ್ರಿಯಗಳು) ಜಡ, ದೃಶ್ಯ, ಮತ್ತು ತಮ ಗಿಂತ ಬೇರೆಯಾದ ಆತ್ಮನಿಗೆ ಸಾಧನವಾದ ಕೆಲಸಗಳನ್ನು ಮಾಡತಕ್ಕವುಗಳು.

೪೮. ಘನತೆ–ಹೆಚ್ಚುಗಾರಿಕೆ (ಬಹುಕಾಲದ ಅನುಭವವನ್ನು ಸ್ಮರಿಸುವದೇ ಚಿತ್ತದ ಹೆಚ್ಚುಗಾರಿಕೆ). ಆತ್ಮನಲ್ಲೆಂದ–ಅಂತಃಕರಣದ ವೃತ್ತಿಗಳಾದ ಮನಸ್ಸು, ಬುದ್ಧಿ, ಚಿತ್ತ, ಅಹಂಕಾರ ಇವೂ ಆತ್ಮನಲ್ಲ.

೪೯. ನವವಿಧಗುಣಗಳು—ಬುದ್ಧಿ, ಸುಖ, ದುಃಖ, ಇಚ್ಛೆ, ದ್ವೇಷ, ಪ್ರಯತ್ನ, ಧರ್ಮ,

ಬದ್ಧನಾಗಿಹಪರಕೆ ತೊಳಲುತ, । ಮುದ್ದಲೆಯೊಳೆಡೆಯಾಡುವಿಲಿಯಂ ।
ತಿದ್ದವನು ತಿಳಿ ವ್ಯಾವಹಾರಿಕನಾತ್ಮನಲ್ಲೆಂದ ॥ ೪೯ ॥

ನಿರುತವೀ ಕರಣೇಂದ್ರಿಯಂಗಳು । ಭರದಿ ನಿದ್ರೆಯೊಳಡಗುತಿರೆ ನಿ ।
ರ್ಭರದ ನಿಜಸುಖವುಚ್ಚಳಿಸಿ ಪೊಳೆವಿಹುದವಿದ್ಯೆಯಲಿ ; ॥
ಮರಳಿ ಜಾಗ್ರದವಸ್ಥೆಯೊಳಗಿದು । ತೆರಳಿ ಪೋಪಂತಿರ್ಪುದದರಿಂ ।
ನಿರತಿಶಯನಿಜನಿತ್ಯಸಹಜಾನಂದವಲ್ಲೆಂದ ॥ ೫೦ ॥

ಈ ಶರೀರಪ್ರಮುಖವಾಗಿಹ । ಕೋಶಪಂಚಕವಾತ್ಮನಲ್ಲೆಲೆ; ।
ಈ ಶರೀರವೊಳಾತ್ಮನೆಂತಿಹನೆನಲು ಕೇಳವನು ॥

---

ಅಧರ್ಮ, ಸಂಸ್ಕಾರ ಈ ೯ ವೈಶೇಷಿಕರು ಹೇಳುವ ಆತ್ಮನ ಗುಣಗಳು. ಬದ್ಧನಾಗಿ+ಇಹ ಪರಕೆ. ಎಡೆಯಾಡುವ-ಸುತ್ತಾಡುವ. ವ್ಯಾವಹಾರಿಕನು—ಮೇಲೆ ಹೇಳಿದ ಒಂಬತ್ತು ಗುಣಗಳಿಂದ ಕೂಡಿ ವ್ಯವಹಾರವನ್ನು ಮಾಡುವವನು.

೫೦. ನಿರ್ಭರದ—ಹೆಚ್ಚಾದ. ನಿಜಸುಖವುಚ್ಚಳಿಸಿ ಪೊಳೆವಿಹುದು—ತನ್ನ ಸುಖಸ್ವರೂಪವು ಎದ್ದು ಬೆಳಗುವದು. ಅವಿದ್ಯೆಯಲಿ—ಇಂದ್ರಿಯಗಳ ಮತ್ತು ಮನಸ್ಸಿನ ಬೀಜರೂಪವಾದ ಅವಿದ್ಯೆಯಲ್ಲಿ (ಅಜ್ಞಾನದಲ್ಲಿ). ಅವಿದ್ಯೆಯೆಂದರೆ ಪರಮಾತ್ಮನ ನಿಜಸ್ವರೂಪವನ್ನು ತಿಳಿಯದಿರುವಿಕೆಯೆಂದು ಈ ಗ್ರಂಥಕಾರನೇ ಮುಂದೆ ೩—೧೦೭, ೧೦೮, ೧೪೪; ೪-೪೧; ೧೦-೭,೪೪ ಪದ್ಯಗಳಲ್ಲಿ ಹೇಳಿರುವನು. ಪರಮಾತ್ಮನ ನಿಜಸ್ವರೂಪವು ತಿಳಿಯದಿರುವದರಿಂದಲೆ ಆ ಪರಮಾತ್ಮನೆ ಜಗತ್ತಿನ ಸ್ವರೂಪದಿಂದ ಕಾಣುತ್ತಿರುವನೆಂದು ವೇದಾಂತದ ಸಿದ್ಧಾಂತ. ಆದ್ದರಿಂದ ಅವಿದ್ಯೆಯು ಜಗತ್ತಿನ ಬೀಜರೂಪ. ಈ ಅವಿದ್ಯೆಯು ಮೂರವಸ್ಥೆಗಳಲ್ಲಿಯೂ ಇರುವದರಿಂದ ನಿಜಸುಖವು ಅದರಲ್ಲಿ ಮೂರವಸ್ಥೆಗಳಲ್ಲಿಯೂ ಎದ್ದು ಬೆಳಗುತ್ತಿರುವದೆನ್ನಬೇಕಾದರೂ ಅದರ ಕಾರ್ಯಾವಸ್ಥೆಗಳಾದ ಎಚ್ಚರ ಕನಸುಗಳಲ್ಲಿ ವಿಷಯಸುಖಗಳು ಅವನ್ನು ಇನ್ನಷ್ಟು ಮರೆಮಾಡಿರುವವು. ಅದರ ಕಾರಣಾವಸ್ಥೆಯಾದ ನಿದ್ರೆಯಲ್ಲಿ ವಿಷಯಗಳ ಸೋಂಕಿಲ್ಲದ ಅದು ಎದ್ದು ಬೆಳಗುವದೆಂದು ಹೇಳಿಸಿಕೊಳ್ಳುವದು. ನಿರತಿಶಯ...ವಲ್ಲೆಂದ—ನಿದ್ರೆಯಲ್ಲಿ ವಿಷಯಸುಖದ ಸೋಂಕಿಲ್ಲದಿದ್ದರೂ ಅದರ ಕಾರಣದ ಸ್ವರೂಪದಿರುವದರಿಂದ ಅದರಲ್ಲಿ ಸಿಕ್ಕಿಬಿದ್ದಾಗ ಎದ್ದು ಬೆಳಗುವ ಸುಖವು ಅದರ ಮುಸುಕಿನಿಂದ ಮರೆಯಾದದ್ದಾಗುವದಾದ್ದರಿಂದ ಆ ಮರೆಯೂ ಇಲ್ಲದ ಸುಖದಷ್ಟು ಹೆಚ್ಚಿನದಲ್ಲದೆಯೂ ಎಚ್ಚರವಾದೊಡನೆ ಮತ್ತೆ ವಿಷಯಸುಖದ ಮರೆಯನ್ನು ಪಡೆಯುವದಾಗಿಯೂ ಇರುವದರಿಂದ ಅದು ತಾನೇ ತಾನಾಗಿರುವ ಶುದ್ಧವಾದ ಆನಂದವಲ್ಲ.

**೫೧. ಕೋಶಪಂಚಕ—ಹಿಂದೆ ೧೮ ನೇ ಪೃಷ್ಠದಲ್ಲಿರುವ ಪಂಚಕೋಶಗಳು. ಒಂದ**

ಈ ಸಕಲಕರಣಗಳ ವಿರಾಜಿತ । ಶೇಷಿತವೆ ತಿಳಿಯಾತ್ಮನವನನೆ ।
ಆ ಶ್ರುತಿ ಗುಹಾಹಿತಪರಬ್ರಹ್ಮೆಂದು ಸಾರುವನು　|| ೫೧ ||

ಕೇಳು ಶುಕ, ನೀನ್ನೈದು ಪವರವ । ಚೀಲಸೊಳಗಿಹ ರತ್ನದಂತೀ ।
ಸ್ಥೂಲಸೂಕ್ಷ್ಮಗಳಾದ ಕೋಶಗಳೊಳಗೆ ಥಳಥಳಿಸಿ ॥
ಥಾಳಿಸುತ್ತಿಹ ಪ್ರತ್ಯಗಾತ್ಮನ । ಹೇಳುವರು ಸಚ್ಚಿತ್ಸುಖೈಕನಿ ।
ರಾಳನಿರ್ಗುಣಬ್ರಹ್ಮವೆಂದವ ಬಲ್ಲ ಯೋಗಿಗಳ　|| ೫೨ ||

ತನುಮನಪ್ರಾಣೇಂದ್ರಿಯಂಗಳ । ನಸಿತನಾತ್ಮಗಳೆಂದು ಶ್ರುತಿಯು ।
ಕ್ತ್ಯನುಭವಗಳಿಂ ಸಿದ್ಧವಾಗಿಯೆ ತೋರುವಾತ್ಮನಲಿ ॥
ತನಯು, ಕೇಳಾರೋಪಿಸುವರೀ । ತನುವು ಮೊದಲಾಗಿರ್ಪ ಕೋಶವ ।
ಬಿನುಗರಹ ವಾದಿಗಳು ದುರ್ಬಲಶ್ರುತಿಪರಾಯಣರು　|| ೫೩||

ಸರ್ಪವಲ್ಲದ ರಜ್ಜು ವಿನಲಾ । ಸರ್ಪವೆಂಬಾರೋಪಣವದೆನಿ ।
ಸಿಪ್ಪದಧ್ಯಾರೋಪವಾ ಪರಿ ಕಲ್ಪಿತಗಳಾಗಿ ॥
ತೋರ್ಪನಾತ್ಮಸಮೂಹವೆಲ್ಲವ । ನಲ್ಪಬ್ರಹ್ಮದಿ ಕಲ್ಪಿತಗಳಾ ।
ಗಿರ್ಪವವನೇ ಆತ್ಮನೆಂಬರು ಮಗನೆ ವಾದಿಗಳು　|| ೫೪ ||

ಕೆಲರು ಪ್ರಾಕೃತರೆಂಬರಾತ್ಮನು । ತಿಳಿಯೆ ಮಗನೆಂಬುವದು ಶ್ರುತಿ; ವೆ ।
ಗ್ಗಳದಿ ಮಗನನು ತಂದೆ ಮುದ್ದಿಪ ಯುಕ್ತಿ ; ಮಗನಳಿಯೆ ॥

---

ಕ್ಕಿಂತ ಒಂದು ಸೂಕ್ಷ್ಮವಾಗಿ ಒಂದರೊಳಗೊಂದು ಇರುವ ಕೋಶಗಳು. ಕರಣಗಳ—ಮನಸ್ಸನ್ನೂ ಇಂದ್ರಿಯಗಳನ್ನೂ. ಶೇಷಿತನೆ—ಇದೂ ಬ್ರಹ್ಮವಲ್ಲ, ಇದೂ ಬ್ರಹ್ಮವಲ್ಲ ಎಂದು ಕಳೆದಮೇಲೆ ಉಳಿದದ್ದೆ. ಗುಹಾಹಿತಪರಬ್ರಹ್ಮ—"ಗುಹಾಹಿತಂ ಗಹ್ವರೇಷ್ಠಂ ಪುರಾಣಂ" ಎಂಬ ಶ್ರುತಿಯಲ್ಲಿ ಬ್ರಹ್ಮನ ವರ್ಣನೆ ಇರುವದು. ಗುಹೆಯೆಂದರೆ ಹೃದಯವು. ಅದರಲ್ಲಿ ತೋರುವದರಿಂದ ಆತ್ಮನಿಗೆ ಗುಹಾಹಿತನೆಂದು ಸಂಜ್ಞೆ.

೫೨. ಥಾಳಿಸುತ್ತಿಹ—ಕೋಶಗಳಲ್ಲಿ ಎದ್ದು ಕಾಣುತ್ತಿರುವ.

೫೩. ಅಸಿತು (ಅವೆಲ್ಲವೂ)+ಅನಾತ್ಮಗಳೆಂದು. ಬಿನುಗರಹ—ಕ್ಷುದ್ರರಾದ. ದುರ್ಬಲಶ್ರುತಿಪಾರಾಯಣರು—ಯುಕ್ತಿಯ ಬೆಂಬಲವು ಸಾಲದಿದ್ದರೂ ಶರೀರಾದಿಗಳೂ ಆತ್ಮನೆಂದು ಹೇಳುವ ಕೆಲವು ದುರ್ಬಲವಾದ ಶ್ರುತಿವಾಕ್ಯಗಳ ಬಲದಿಂದ ವಾದಿಸುವವರು.

೫೪. ತೋರ್ಪ+ಅನಾತ್ಮಸಮೂಹವೆಲ್ಲವು+ಅನಲ್ಪ (ದೊಡ್ಡದಾದ)+ಬ್ರಹ್ಮದಿ.

ಅಳಿದೆ ತಾನೆಂಬನುಭವವಿರ । ಲ್ಕೆಲೆ ಮಗನೆ ಮಗನಾತ್ಮನೆಂದೇ ।
ಹಲುಬುವರು ದುರ್ಬಲದ ಶ್ರುತಿಯುಕ್ತ್ಯನುಭವಗಳಿಂದ ॥ ೫೫ ॥

"ಅನ್ನಮಯಮಾತ್ಮಾನ"ವೆಂದೇ । ನಿರ್ಣಯಿಪ ಶ್ರುತಿ; ಮಗನ ಬಿಟ್ಟ ।
ತ್ಯನ್ನತದ ಕಿಚ್ಚಿದ್ದೊಡೋಡುವನೆಂಬ ಬಲು ಯುಕ್ತಿ ; ॥
ಇನ್ನು ಕೃಶ ನಾ, ಸ್ಥೂಲ ನಾ, ಕೇ । ಳೆನ್ನುವನುಭವವಿರಲೆಲೇ ಸಂ ।
ಪನ್ನ ತನುವೇ ಆತ್ಮನೆಂಬರು ಕೆಲರು ವಾದಿಗಳು ॥ ೫೬ ॥

ಕೆಲಕೆಲರು ಚಾರ್ವಾಕರಿಂದ್ರಿಯ । ಗಳು ಕಲಹಿಸಿದವೆಂಬ ಶ್ರುತಿ; ಮೇ ।
ಣಳಿಯಲಿಂದ್ರಿಯ ತನುವೆ ವಿಷಯವನರಿಯದಿಹ ಯುಕ್ತಿ ; ॥
ತಿಳಿಯೆ, ಕಾಣೆನು, ಕೇಳೆನೇನನು । ಸುಳಿದೆನೆಂಬನುಭವದಲಿಂದ್ರಿಯ ।
ಗಳನೆ ಆತುಮನೆಂದು ಪೇಳ್ವರು ಮಗನೆ ಕೇಳೆಂದ ॥ ೫೭ ॥

ಮತ್ತೆ ಕೆಲಬರು ವಾದಿಗಳು ಹೇ । ಳುತ್ತಲಿಹರೀ ಪ್ರಾಣವಾತ್ಮನೆ ।
ನುತ್ತ, ಶ್ರುತಿಯೇ "ಪ್ರಾಣಮಯಮಾತ್ಮಾನ"ಮೆಂದಿಹುದ; ॥
ಮತ್ತುಮಿಂದ್ರಿಯವದರ ಕತದಿಂ । ವರ್ತಿಸುತ್ತಿಹ ಯುಕ್ತಿಯಶನಾ ।
ಸಕ್ತಿಯಿಂ ಭೋಕ್ತೃತ್ವವೆಂಬನುಭವವದಾಗಿರಲು ॥ ೫೮ ॥

---

೫೫. ತಿಳಿಯೆ—ವಿಚಾರಮಾಡಿದರೆ. ಶ್ರುತಿ—"ಆತ್ಮಾ ವೈ ಪುತ್ರನಾಮಾಸಿ"—ಶ್ರುತಿ.

೫೬. "ಅನ್ನಮಯಮಾತ್ಮಾನ"—ಅನ್ನಮಯವೇ ಆತ್ಮನೆಂಬ ಈ ಶ್ರುತಿಗೆ ಪರಿಶಿಷ್ಟವನ್ನು ನೋಡಿ. ಮಗನ. .ವನೆಂಬ—ಅತ್ಯುನ್ನತದ ಕಿಚ್ಚಿದ್ದೊಡೆ ಮಗನ ಬಿಟ್ಟೋಡುವನೆಂಬ. ಸಂಪನ್ನ—ಸಂಪನ್ನನಾದ ಮಗನೆ.

೫೭. ಇಂದ್ರಿಯಗಳು ಕಲಹಿಸಿದವು—ತಮ್ಮಲ್ಲಿ ಯಾರು ಶ್ರೇಷ್ಠರೆಂದು ಇಂದ್ರಿಯ ಮೊದಲಾದವುಗಳಲ್ಲಿ ವಾದವುಂಟಾಯಿತು. ಅವು ಅದನ್ನು ನಿಶ್ಚಯಿಸಿಕೊಳ್ಳಲು ಬ್ರಹ್ಮನ ಬಳಿಗೆ ಹೋದವು. ಯಾರು ಹೊರಕ್ಕೆ ಹೊರಟರೆ ಶರೀರವು ಅಮಂಗಲವಾಗುವದೊ ಅವರು ಶ್ರೇಷ್ಠರೆಂದು ಬ್ರಹ್ಮನು ಹೇಳಿದನು. ವಾಕ್ಕು ಮೊದಲಾದವುಗಳು ಹೊರಹೊರಟು ನೋಡಿದವು. ಶರೀರವು ಅಮಂಗಲವಾಗಲಿಲ್ಲ. ಪ್ರಾಣವು ಹೊರಹೊರಡುತ್ತಲೆ ಶರೀರವು ಅಮಂಗಲವೆನಿಸಿತು. ಆದ್ದರಿಂದ ಪ್ರಾಣವೇ ಶ್ರೇಷ್ಠವೆಂದು ಆಗ ನಿಶ್ಚಯವಾಯಿತೆಂದು ಪ್ರಶ್ನೋಪನಿಷತ್ತಿನಲ್ಲಿಯೂ ಬೃಹದಾರಣ್ಯಕದಲ್ಲಿಯೂ ಛಾಂದೋಗ್ಯದಲ್ಲಿಯೂ ಕಥೆಗಳು ಬಂದಿವೆ.

೫೮. "ಪ್ರಾಣ....ಮಾತ್ಮಾನ"—ಪ್ರಾಣವೇ ಆತ್ಮನೆಂಬ ಈ ಶ್ರುತಿವಾಕ್ಯಕ್ಕೆ ಪರಿಶಿಷ್ಟವನ್ನು ನೋಡಿ. ಅದರ ಕತದಿಂ—ಪ್ರಾಣದ ಬಲದಿಂದ.

ತನಯ ಕೆಲಬರು ವಾದಿಗಳು ಕೇ । ಳ್ಮನವೆ ಆತುಮನೆಂಬರೆಂತೆಂ ।
ದೆನೆ " ಮನೋಮಯಮಾತ್ಮ "ನೆಂಬಾ ಶ್ರುತಿಯಿಹುದರಿಂದ; ॥
ಮನವಡಗೆ ನಿದ್ದೆಯಲಿ ಪ್ರಾಣವು । ತನುವನರಿಯದ ಯುಕ್ತಿ; ನಾನಿದ ।
ನೆನೆದೆ, ನಾನಿದ ನೆನೆಯೆನೆಂಬನುಭವವದಾಗಿರಲು　　　　॥ ೫೯ ॥

ವಾದಿಗಳು ಜಡಮೆಂಬರಿದ ಮೇ । ಣಾದರದಿ " ವಿಜ್ಞಾನಮಯ "ನೆಂ ।
ದೋದುವದು ಶ್ರುತಿ; ಕರ್ತೃವಿಲ್ಲದೆ ಮನವೆನಿಪ ಕರಣ ॥
ಸಾಧಕವೆ ಅಲ್ಲೆಂಬ ಯುಕ್ತಿಯೆ । ವ್ಯೆದೆ ತಾನೇ ಕರ್ತೃ, ಭೋಕ್ತೃವು ।
ಮಾದೆ ನಾನೆಂಬನುಭವದಿ ವಿಜ್ಞಾನವೇ ಆತ್ಮ　　　　॥ ೬೦ ॥

ಕಂವ ಕೇಳಾನಂದವಾತುಮ । ನೆಂದು ಹೇಳುವ ಶ್ರುತಿ; ಸುಷುಪ್ತಿಯೊ ।
ಳೊಂದಿ ಬುದ್ಧ್ಯಾದಿಗಳು ಲಯವಹವೆಂದೆನಿಪ ಯುಕ್ತಿ ; ॥
ಇಂದು ಸುಖದಲಿ ನಿದ್ರೆಗೈದೆನಿ । ದೊಂದನೂ ನಾನರಿಯದಿಲ್ಲೆನು ।
ತೆಂದ ನುಡಿಯನುಭವದಲಾತುಮನೆಂಬರಿದನೆಂದ　　　　॥ ೬೧ ॥

---

೫೯. "ಮನೋಮಯಮಾತ್ಮನ"—ಮನಸ್ಸೇ ಆತ್ಮನೆಂಬ ಈ ಶ್ರುತಿವಾಕ್ಯಕ್ಕೆ ಪರಿಶಿಷ್ಟವನ್ನು ನೋಡಿ.

೬೦. ಇದ—ಈ ಮನಸ್ಸನ್ನು. "ವಿಜ್ಞಾನಮಯ"—ಬುದ್ಧಿಯೇ ಆತ್ಮನೆಂಬ ಈ ಶ್ರುತಿವಾಕ್ಯಕ್ಕೆ ಪರಿಶಿಷ್ಟವನ್ನು ನೋಡಿ. (ಯುಕ್ತಿಯುಂ)+ಐದೆ–ಚೆನ್ನಾಗಿ.

೬೧. ಆನಂದ ...ಶ್ರುತಿ—ಈ ಶ್ರುತಿಗೆ ಪರಿಶಿಷ್ಟವನ್ನು ನೋಡಿ. ಈ ಪದ್ಯವು ಗಾಢನಿದ್ರೆಯಲ್ಲಿ ಕಾಣುವ ಆನಂದಮಯಕೋಶವನ್ನು ಹೇಳುವದು. ಆನಂದಮಯವೆಂದರೆ ಭೋಕ್ತೃತ್ವಪ್ರಧಾನವಾದ ಅಹಂಕಾರ. ಆನಂದಮಯವು ಪ್ರಿಯ, ಮೋದ, ಪ್ರಮೋದ ಎಂಬಿವುಗಳನ್ನು ಅವಯವಗಳಾಗಿ ಉಳ್ಳದ್ದೆಂದು ತೈತ್ತಿರೀಯಶ್ರುತಿಯಲ್ಲಿದೆ. ಆದ್ದರಿಂದ ನಮಗೆ ಪ್ರಿಯಮೋದಪ್ರಮೋದಗಳಾಗುವಾಗಲೆಲ್ಲ ಅದನ್ನು ಆನಂದಮಯವೆಂದು ತಿಳಿಯಬೇಕು. ತನಗಿಷ್ಟವೆಂದು ಕಾಣಬರುವದು ಪ್ರಿಯ. ಅದು ದೊರೆತರೆ ಆಗುವ ಹರ್ಷವು ಮೋದ. ಅದನ್ನು ಅನುಭವಿಸುವದರಿಂದಾಗುವ ಹರ್ಷವು ಪ್ರಮೋದ. ಈ ಪ್ರಿಯಮೋದಪ್ರಮೋದಗಳೆಂಬ ವಿಶೇಷಗಳು ಎಚ್ಚರಕನಸುಗಳಲ್ಲಿರುವವೇ ಹೊರತು ನಿದ್ರೆಯಲ್ಲಿಲ್ಲ. ನಿದ್ರೆಯಲ್ಲಿರುವದು ಆನಂದಸಾಮಾನ್ಯ. ಎಚ್ಚರದಲ್ಲಿ ಐದು ಕೋಶಗಳೂ ಇರುವವು. ಕನಸಿನಲ್ಲಿ ಅನ್ನಮಯದ ಹೊರತು ಉಳಿದ ನಾಲ್ಕಿರುವವು. ನಿದ್ರೆಯಲ್ಲಿ ಆನಂದಮಯ ಒಂದೇ ಇರುವದು.

ಉತ್ತಮನೆ, ಈ ಸೃಷ್ಟಿಗಿಂತಲ । ಸತ್ತೆ ಮೊದಲಿಂದೆಂಬ ಶ್ರುತಿ ; ನೆರೆ ।
ಸುಪ್ತಿಯೊಳಗೀ ಸಕಲವೇನೂ ಇಲ್ಲದಿಹ ಯುಕ್ತಿ; ॥
ಸುಪ್ತಿಕಾಲದಲಿಲ್ಲದವ ತಾ । ಮತ್ತೆ ತೋರಿಹನೆಂಬುವನುಭವ ।
ವ್ಯಕ್ತವಾಗಲಸತ್ತೆ ಆತುಮನೆಂದು ಪೇಳುವರು ॥ ೭೨ ॥

ತನಯ, ಕೇಳ್ಪ್ರಾಕೃತರೆ ಮೊದಲಾ । ದಿನಿತು ವಾದಿಗಳೆಂದ ಶ್ರುತಿಯು ।
ಕ್ತ್ಯನುಭವಾಭಾಸಂಗಳಹ ಪುತ್ರಾದ್ಯನಾತ್ಮಗಳು ॥
ತನತನಗೆ ಪರಿಭವವನೈದುವ । ನನಘ, ತಮ್ಮೊಳಗುತ್ತರೋತ್ತರ ।
ವೆನಿಪ ಶ್ರುತಿಯುಕ್ತ್ಯನುಭವಾಭಾಸಗಳ ವಶದಿಂದ ॥ ೭೩ ॥

ಸ್ಥೂಲಸೂಕ್ಷ್ಮನುಮಲ್ಲವಾತ್ಮನು, । ಹೇಳಲೇನಪ್ರಾಣನಮನಸ ; ।
ಶೀಲವಂತನೆ ಕೇಳಕರ್ತೃವಭೋಕ್ತೃ ಚಿನ್ಮಯನು ; ॥
ಬಾಲಕನೆ ಚಿದ್ರೂಪು ಚಿತ್ಸುಖ । ಮೂಲವೆಂಬೀ ಪ್ರಬಲಶ್ರುತಿಶಿರ ।
ಜಾಲ ದುರ್ಬಲಶ್ರುತಿತತಿಗಳನು ಖಂಡಿಸುವದೆಂದ ॥ ೭೪ ॥

---

೭೨. ಅಸತ್ತೆ ಆತ್ಮನೆಂಬ ಶ್ರುತಿಗೆ ಪರಿಶಿಷ್ಟವನ್ನು ನೋಡಿ. ಸುಪ್ತಿಕಾಲದಲಿಲ್ಲದವ—ಗಾಢನಿದ್ರೆಯಲ್ಲಿ ಯಾವ ಅರಿವೂ ಇಲ್ಲದ್ದರಿಂದ ಆತ್ಮನೇ ಇರಲಿಲ್ಲವೆಂದೂ ಇಲ್ಲದ ಆತ್ಮನೆ ಎಚ್ಚರದಲ್ಲಿ ತೋರುವನೆಂದೂ ಆದಕಾರಣ ಆತ್ಮವು ಶೂನ್ಯವೆಂದೂ ಮಾಧ್ಯಮಿಕಬೌದ್ಧರ ಅಭಿಪ್ರಾಯ.

೭೩. ಶ್ರುತಿಯುಕ್ತ್ಯನುಭವಾಭಾಸಂಗಳ—ನೆರೆನೋಡದವರಿಗೆ ನಿಂತಂಥ ಶ್ರುತಿಯಂತೆಯೂ ಯುಕ್ತಿಯಂತೆಯೂ ಅನುಭವದಂತೆಯೂ ತೋರತಕ್ಕವುಗಳು. ಪುತ್ರಾದ್ಯನಾತ್ಮಗಳು—ಪುತ್ರರು ಮತ್ತು ಅನ್ನಮಯ ಮೊದಲಾದ ಪಂಚಕೋಶಗಳು. ಪರಿಭವವನೈದುವ—ಹುರುಳಿಲ್ಲವೆಂದಾಗುವವು. ಉತ್ತರೋತ್ತರವೆನಿಪ—ಮುಂದಮುಂದಣ (ಮಗನು ಆತ್ಮನೆಂಬ ಶ್ರುತಿಯು ಮುಂದಿನ ಅನ್ನಮಯವಾತ್ಮನೆಂಬ ಶ್ರುತಿಯಿಂದಲೂ ಆ ಅನ್ನಮಯವಾತ್ಮನೆಂಬ ಶ್ರುತಿಯು ಅದರ ಮುಂದಣ ಇಂದ್ರಿಯಗಳೇ ಆತ್ಮನೆಂಬ ಶ್ರುತಿಯಿಂದಲೂ ತಳ್ಳಿಹಾಕಲ್ಪಡುವವು). ಶ್ರುತಿ .ವಾಭಾಸ—ಸರಿಯಾದ ಶ್ರುತಿ ಮೊದಲಾದವುಗಳಂತೆ ಕಾಣುವಂಥದ್ದು.

೭೪. ಸ್ಥೂಲಸೂಕ್ಷ್ಮನುಮಲ್ಲ—ಸ್ಥೂಲನೂ ಅಲ್ಲ; ಸೂಕ್ಷ್ಮನೂ ಅಲ್ಲ. ಪ್ರಬಲಶ್ರುತಿಶಿರಜಾಲ—"ಅಸ್ಥೂಲಂ, ಅಚಕ್ಷುಃ, ಅಪ್ರಾಣಃ, ಅಕರ್ತಾ, ಅಭೋಕ್ತಾ ಮತ್ತು ಚಿನ್ಮಾತ್ರಂ" ಇವೇ ಮೊದಲಾದ ಪ್ರಬಲಶ್ರುತಿವಾಕ್ಯಗಳ ಸಮೂಹವು.

ಘಟವ ಬೆಳಗುವ ದೀಪವೆಂತಾ । ಘಟಕೆ ಭಿನ್ನವೆ ಆಗಿ ತೋರ್ಪುದೊ ।
ಸಟೆಯೆನಿಪ ಪುತ್ರಾದ್ಯನಾತ್ಮಗಳನು ಪ್ರಕಾಶಿಸುವ ॥
ದಿಟವೆನಿಪ ಪ್ರತ್ಯಕ್ಪ್ರಕಾಶವು । ಸಟೆಯ ಪುತ್ರಾದಿಗಳ ದೆಸೆಯಿಂ ।
ಘಟಿಸುವದು ಬೇರೆಂದು ಪೇಳ್ವುದು ಪ್ರಬಲತರಯುಕ್ತಿ　　॥ ೬೫ ॥

ಬ್ರಹ್ಮವೇತ್ತರು ತಮ್ಮ ತಾವೇ । ಬ್ರಹ್ಮವೆಂದೆನುಪಾಗ ತಮ್ಮನು ।
ಬ್ರಹ್ಮರೂಪಿನೊಳರಿಯುತಿರ್ಪನುಭವವು ಕಾಣುವದು; ॥
ಬ್ರಹ್ಮವೀ ಸರಿ ಪ್ರಬಲವಹ ಶ್ರುತಿ । ಸಮ್ಮತವು; ಯುಕ್ತ್ಯನುಭವಗಳಿಂ ।
ಪೇರ್ಮೆವಡೆದಿರೆ ಮಿಥ್ಯದಾರೋಪಗಳು ತೊಲಗುವವು　　॥ ೬೬ ॥

ಮಗನೆ, ಶ್ರುತಿಯುಕ್ತ್ಯನುಭವಂಗಳ । ಬಗೆಯಲಾತ್ಮನು ಸಿದ್ಧನಾಗಿರೆ ।
ನಗೆಯಲಾ ! ದುರ್ಬಲದ ಶ್ರುತಿಯುಕ್ತ್ಯನುಭವಗಳಿಂದ ॥
ಮಗನು ಮೊದಲಹವಾತ್ಮನೆಂಬೀ । ಬಗೆಯಲಾರೋಪಿತವು; ವಾದಿಗ ।
ಳಿಗೆ ಪರಸ್ಪರ ತಮ್ಮೊಳಗೆ ಖಂಡಿತಗಳಾಗಿಹವು　　॥ ೬೭ ॥

ಸ್ಥೂಲಸೂಕ್ಷ್ಮಪರಂಗಳೆಂದೇ । ಹೇಳುವರು ಮೂರೆಂದು ತನುಗಳ; ।
ಸ್ಥೂಲವವಯವಗೂಡಿ ತೋರ್ಪುದು ಮಾಂಸಮಯಪಿಂಡ; ॥

---

೬೫. ಪ್ರತ್ಯಕ್ಪ್ರಕಾಶವು—ಒಳಗಣ ಆತ್ಮಸ್ವರೂಪವಾದ ಜ್ಞಾನವು.

೬೬. ಬ್ರಹ್ಮವೇತ್ತರು–ಬ್ರಹ್ಮವನ್ನು ತಿಳಿದವರು. ಪೇರ್ಮೆವಡೆದಿರೆ–ಹೆಚ್ಚುಗಾರಿಕೆಯನ್ನು ಹೊಂದಿರಲು.

೬೭. ಬಗೆಯಲು—ವಿಚಾರಮಾಡಿದರೆ.　ಖಂಡಿತಗಳಾಗಿಹವು—ಕತ್ತರಿಸಲ್ಪಟ್ಟವು ಗಳಾಗಿರುವವು (ತಪ್ಪೆಂದು ತೋರಿಸಲ್ಪಟ್ಟಂಥವುಗಳಾಗಿರುವವು).

೬೮. ಈ ಪದ್ಯದಲ್ಲಿ ಮಾಂಸಮಯವಾದ ದೇಹವನ್ನು ಸ್ಥೂಲವೆಂದೂ ಆ ಮಾಂಸಮಯವಾದ ದೇಹವನ್ನು ತಾನೆನ್ನುವ ಅಹಂಕಾರವನ್ನು ಸೂಕ್ಷ್ಮವೆಂದೂ ಯಾವದರ ಬೆಂಬಲದಿಂದ ಈ ಎರಡು ದೇಹಗಳಿಗೂ ಶಕ್ತಿಯುಂಟಾಗುವದೊ ಆ ನಿರ್ಗುಣವಸ್ತುವಾದ ಆತ್ಮವನ್ನು ಪರವೆಂದೂ ಕವಿಯು ದೇಹಗಳನ್ನು ಮೂರಾಗಿ ವಿಂಗಡಿಸಿದ್ದಾನೆ. ದೇಹವೆಂದರೆ ಸುಟ್ಟುಹೋಗುವ ವಸ್ತುವೆಂದರ್ಥ. ಆದ್ದರಿಂದ ದೇಹವೆಂಬ ಮಾತು ಸ್ಥೂಲಕ್ಕೂ ಸೂಕ್ಷ್ಮಕ್ಕೂ ಹೊಂದುವದೆ ಹೊರತು ಪರನಾದ ಆತ್ಮನಿಗಲ್ಲ. ಆತ್ಮನು ನಾಶವಿಲ್ಲದವನು. ಆದರೂ ಎರಡು ಶರೀರಗಳನ್ನೂ ತಾನಲ್ಲವೆಂದು ವಿವೇಕದಿಂದ ಕಳೆಯುತ್ತಲೆ ಅವುಗಳಿಗೆ ಬೆಂಬಲನಾಗಿದ್ದ ಆತ್ಮನು ತಾನಾಗಿ ಸಿಕ್ಕುವದರಿಂದ ಅವನನ್ನು ಮೂರನೇ

ಕೇಳು ಶುಕಯೋಗೀಂದ್ರ, ಸೂಕ್ಷ್ಮವೆ । ಸ್ಥೂಲ ತಾನೆಂದೆಂಬ ಹಮ್ಮು; ನಿ ।
ರಾಳ ನಿರ್ಗುಣವಸ್ತು ಪರವೆಂದೆಂಬ ನಿಜದೇಹ ॥ ೬೮ ॥

---

ದೇಹವೆನ್ನುವದು ಹಿಂದಿನವುಗಳ ಸಂಬಂಧದ ಬರೀವಾಸನೆಯ ಮಾತು. ಹೀಗೆ ದೇಹಗಳೆರಡೇ ಎಂಬ ಅಭಿಪ್ರಾಯವನ್ನು ಇಲ್ಲಿಯೇ ಮುಂದೆ ೭-೧೫; ೮-೨೮; ೧೦-೨೨, ೨೯ ಈ ಪದ್ಯಗಳಲ್ಲಿಯೂ ಉಲ್ಲೇಖಿಸಿರುವನು. ಆದರೆ ಕಳೆಯತಕ್ಕ ಶರೀರಗಳು ಸ್ಥೂಲವೆಂದೂ ಸೂಕ್ಷ್ಮವೆಂದೂ ಎರಡೇ ಅಲ್ಲದೆ ಕಾರಣವೆಂದಿನ್ನೊಂದೂ ಉಂಟೆಂದು ದೇಹಗಳನ್ನು ಮೂರಾಗಿ ವಿಂಗಡಿಸುವದೇ ಹೆಚ್ಚುರೂಢಿ. ಈ ಅಭಿಪ್ರಾಯವನ್ನು ಕವಿಯು ೭-೨೨ರಲ್ಲಿ ತೋರಿಸಿದ್ದಾನೆ. ಸ್ಥೂಲಸೂಕ್ಷ್ಮಶರೀರಗಳ ಮತ್ತು ಎಲ್ಲ ಜಗತ್ತಿನ ಬೀಜರೂಪಾವಸ್ಥೆಯಾದ ಅವಿದ್ಯೆಯೇ ಮೂರನೆ ದೇಹ. ಇದು ಗಾಢನಿದ್ರೆಯಲ್ಲಿ ತಾನೇ ತಾನಾಗಿ ಕಾಣುವದು. ಇದರ ವಿಷಯಕ್ಕೆ ಹಿಂದಿನ ೫೦ ನೆ ಪದ್ಯವನ್ನು ನೋಡಿ. ಸ್ಥೂಲಸೂಕ್ಷ್ಮ ಶರೀರಗಳಿಂದುಂಟಾಗುವಷ್ಟು ಪ್ರತ್ಯಕ್ಷವಾದ ಹಾನಿಯು ಈ ಮೂರನೇ ದೇಹದಿಂದ ಎದ್ದುಕಾಣುವದಿಲ್ಲವಾದ್ದರಿಂದ ಇದನ್ನೊಂದು ದೇಹವೆಂದೆಣಿಸದೆ ಇರುವದೂ ಉಂಟು. ಈ ಅಭಿಪ್ರಾಯಕ್ಕೆ ಈ ಕೆಳಗೆ ಬರೆಯುವ ಶ್ರೀಮಚ್ಛಂಕರಭಗವತ್ಪಾದರ ಭಾಷ್ಯಭಾಗವೂ ಬೆಂಬಲವಾಗಿದೆ. "ಮನಃಪ್ರಚಾರೋಪಾಧಿವಿಶೇಷಸಮ್ಬನ್ಧಾದಿನ್ದ್ರಿಯಾರ್ಥಾನ್ಗೃಹ್ಣನ್ತದ್ವಿಶೇಷಾಪನ್ನೋ ಜೀವೋ ಜಾಗರ್ತಿ; ತದ್ವಾಸನಾವಿಶಿಷ್ಟಃ ಸ್ವಪ್ನಾನ್ಪಶ್ಯನ್ಮನಶ್ಶಬ್ದವಾಚ್ಯೋ ಭವತಿ; ಸ ಉಪಾಧಿದ್ವಯೋಪರಮೇ ಸುಷುಪ್ತಾವಸ್ಥಾಯಾಮುಪಾಧಿಕೃತವಿಶೇಷಾಭಾವಾತ್ಸ್ವಾತ್ಮನಿ ಪ್ರಲೀನ ಇವ" "ಮನಃಪ್ರಚಾರದ ಉಪಾಧಿವಿಶೇಷದ ಸಂಬಂಧದಿಂದ ವಿಷಯಗಳನ್ನು ಗ್ರಹಣಮಾಡುವ ಜೀವನು ಎಚ್ಚರದವನೆನಿಸುವನು; ಆ ವಾಸನೆಯಿಂದ ಕನಸುಗಾಣುವವನು ಮನಶ್ಶಬ್ದವಾಚ್ಯನಾಗುವನು; ಆ ಎರಡು ಉಪಾಧಿಗಳೂ ಕಳೆದು ಹೋಗಲಾಗಿ ಗಾಢನಿದ್ರೆಯಲ್ಲಿ ಉಪಾಧಿಕೃತವಾದ ಯಾವ ವಿಶೇಷವೂ ಇಲ್ಲದ್ದರಿಂದ ಅವನು ಆಗ ತನ್ನ ಆತ್ಮಸ್ವರೂಪದಲ್ಲಿ ಲಯವಾದ ಹಾಗೆ"). ರೂಢಿಯಂತೆ ಎಚ್ಚರದಲ್ಲಿ ಮೂರು ಬಗೆಗಳೂ ಇರುವವು; ಕನಸಿನಲ್ಲಿ ಸ್ಥೂಲಶರೀರದ ಹೊರತು ಉಳಿದೆರಡಿರುವವು; ನಿದ್ರೆಯಲ್ಲಿ ಕಾರಣಶರೀರ ಒಂದೇ ಇರುವದು. ನಿದ್ರೆಯಲ್ಲಿ ಹೀಗೆ ಕಾರಣಶರೀರವೆಂಬ ಉಪಾಧಿ ಇದ್ದರೂ ಶ್ರೀಮದಾಚಾರ್ಯರು ಆಗ ಉಪಾಧಿಕೃತವಾದ ಯಾವ ವಿಶೇಷವೂ ಇಲ್ಲವೆಂದು ಬರೆದಿರುವದಕ್ಕೆ ಮೂಲದಲ್ಲಿ (ಬೃ. ೪-೩-೨೧) ಆ ಸ್ಥಿತಿಯನ್ನು ಅಭಯವೆಂದು ಕರೆದಿರುವದೇ ಆಧಾರ. ಆ ಅಭಯವೆಂಬ ಮಾತಿಗೆ ಭಯಪ್ರದವಾದ ಅವಿದ್ಯಾಕಾರ್ಯವಿಲ್ಲದ್ದು ಮಾತ್ರವೆಂದು ಸುಪ್ರಸಿದ್ಧರಾದ ಅನೇಕವ್ಯಾಖ್ಯಾನಕಾರರು ತಾತ್ಪರ್ಯವನ್ನು ತೀಲಿಸಿದ್ದಾರೆ. ಅದನ್ನು ನೋಡಿದರೆ ಮುಕ್ತಿಯ ಸ್ವರೂಪವನ್ನು ಮನಸ್ಸಿನಲ್ಲಿ ಒಡೆದು ಮೂಡುವಂತೆ ಮಾಡಬೇಕೆಂದು ಅದಕ್ಕೆ ನಿದ್ರೆಯ ಹೋಲಿಕೆಯನ್ನು ಕೊಟ್ಟು ಹೇಳುವ ಆ ಸಡಗರದಲ್ಲಿ ಶ್ರುತಿಯು ತನ್ನ

ಸ್ಥೂಲತನು ಸುಖದುಃಖದನುಭವ । ಕಾಲಯವು; ಘಟದಂತೆ ಜಡವಿದು;
ಕಾಲಕರ್ಮಾಧೀನವಾಗಿಹುದನ್ನಮಯಕೋಶ; ॥
ಬಾಲ್ಯಯೌವನವಾರ್ಧಕಂಗಳ । ತಾಳಿ ಬಹುವಿಧವಾಗಿ ತೋರ್ಪುದು; ।।
ಕೇಳು ಕಡೆಯಲಿ ನಾಯಿನರಿಕಿಚ್ಚಿಂಗೆ ಗುರಿಯಹುದು ॥ ೬೯ ॥

ಮಗನೆ ಸೂಕ್ಷ್ಮಶರೀರವನೆ ತಾ । ಬಗೆಯುತಲಿ ತಾನೆಂದು, ಕರ್ಮದಿ ।
ನಗಣಿತಗಳಹ ಜನ್ಮಗಳ ಪಡೆದಧಿಕಪುಣ್ಯದಲಿ ॥
ನೆಗೆದು ಸ್ವರ್ಗವನೈದಿ ಪಾಪದಿ । ಹುಗಿದು ನರಕದೊಳಾಳಿ ತಿರುಗುವ ; ।
ಬಿಗಿದು ರಾಟಾಳದಲಿ ಕಟ್ಟಿದ ಭಾಂಡದಂದದಲಿ ॥ ೭೦ ॥

ಏಸು ಕಲ್ಪಗಳಾಮೊಡೆಯು, ಮಗು । ಳೇಸು ಬ್ರಹ್ಮಾಂಡಗಳು ಪುಟ್ಟಿದೊ ।
ಡೇಸು ಬ್ರಹ್ಮರು ಮಡಿಮೊಡೆಯು ತಿಳಿ ಲಿಂಗದೇಹಕ್ಕೆ ॥
ನಾಶವಿಲ್ಲೆಲೆ ಮಗನೆ, ಪಂಚ । ಕ್ಲೇಶಪಾಶದಿ ಬಿಗಿವಡೆಮ, ಯಮ ।
ಪಾಶಕೊಳಗಾಗಿರ್ಪುದೆಂದಿಗು ಮೋಕ್ಷವಿಲ್ಲೆಂದ ॥ ೭೧ ॥

ಈ ಪರಿಯಲೀ ಸೂಕ್ಷ್ಮತನು ಬಹು । ಪಾಪಪುಣ್ಯದ ಫಲದಿ ಸಂಸೃತಿ ।
ತಾಪದಲಿ ಬೆದಬೆವನೆ ಬೇಯುತಲಿರಲು, ವೈರಾಗ್ಯ ॥

---

ಉದ್ದೇಶವನ್ನು ಸಾಧಿಸುವದಕ್ಕಾಗಿ ಆ ನಿದ್ರೆಯಲ್ಲಿರುವ ಅವಿದ್ಯೆಯು ಕಾರಣರೂಪವನ್ನು ಕಡೆಗಂಡು, ದೊಡ್ಡವರಿಗೆ ಹೋಲಿಸುವಾಗ ಸಾಮಾನ್ಯನ ದೋಷವನ್ನು ಮರೆಗಿರಿಸುವಂತೆ, ಆ ದೋಷವನ್ನು ಮರೆಗಿಟ್ಟಂತೆ ಕಾಣುತ್ತದೆ. ಇಷ್ಟೇ ಹೊರತು ನಿದ್ರೆಯಲ್ಲಿ ಅವಿದ್ಯೆಯ ಕಾರಣರೂಪವಿರುವದೆಂದು ಶ್ರುತಿಯೇ ಅನೇಕ ಕಡೆಗಳಲ್ಲಿ ಘಂಟಾಘೋಷವಾಗಿ ಹೇಳಿರುವದರಿಂದ ರೂಢಿಯಂತೆ ನಿದ್ರೆಯಲ್ಲಿ ಅವಿದ್ಯೆಯೆಂಬ ಕಾರಣಶರೀರವಿರುವದೆಂದೇ ಅರಿಯಬೇಕು.

೬೯. ಕಾಲಕರ್ಮಾಧೀನವು—ಸಾವಿಗೂ ಹಿಂದಿನ ಜನ್ಮದಲ್ಲಿ ಮಾಡಿದ ಕರ್ಮಕ್ಕೂ ಒಳಗಾಗಿರುವದು.

೭೦. ಹುಗಿದು—ಹೂತುಕೊಂಡು. ತಿರುಗುವ–ತಿರುಗುವನು. ರಾಟಾಳ–ನೀರೆತ್ತುವ ಯಂತ್ರ (ಯಂತ್ರದ ಮೇಲೇರಿದ ಗಡಿಗೆಯು ಕೆಳಕ್ಕೆ ಹೋಗುತ್ತಲೂ ಮೇಲಕ್ಕೆ ಬರುತ್ತಲೂ ಇರುವದು).

೭೧. ಪಂಚಕ್ಲೇಶಗಳ ವಿಷಯಕ್ಕೆ ೧ ಅ. ೨೨ ಪ.ದ ಟಿಪ್ಪಣಿಯನ್ನು ನೋಡಿ.

೭೨. ಕಾಪಥವ–(ದೇಹಾದಿಗಳೇ ನಾನೆಂದು ತಿಳಿದು ವ್ಯವಹಾರದಲ್ಲಿ ಆಸಕ್ತನಾಗು

ಶ್ರೀಪತಿಯನುಗ್ರಹದಲುದಿಸಲು, । ಶಾಪಘವ ಪರಿಹರಿಸಿ, ಗುರುಕರು ।
ಣಾಪಯೋಧಿಯ ಪಡೆದು, ಜೀವನ್ಮುಕ್ತನಾಗಿಹೆನು ॥ ೭೨ ॥

ಸ್ಥೂಲಸೂಕ್ಷ್ಮಗಳೆರಡುನಾಯೆಯು;।ಮೂಲಭೂತವುದೊಂದುಪರವೇ;।
ಕೇಳದೇ ತಾ ಸಾಕ್ಷಿಚೈತನ್ಯಾತ್ಮನೆನಿಸುವದು ; ॥
ಬಾಲಕನೆ ನೀನೆರಡುತನುವಿನ । ಮೇಲಣಭಿಮಾನವನು ಬಿಟ್ಟು, ನಿ ।
ರಾಳ ನಿಜ ನೀನೆಂದು ಚಿಂತಿಸುತಿರ್ಪುದನವರತ ॥ ೭೩ ॥

ಪ್ರಾಣಮನವಿಜ್ಞಾನಕೋಶ । ಶ್ರೇಣಿಯೆನಿಸಿದನಾದ್ಯವಿದ್ಯಾ ।
ಮಾನದಿಂ ಕಲ್ಪಿತದಿ ಮೆರೆವೀ ಲಿಂಗದೇಹವನು ॥
ಮಾಣದಿದಿರಿಟ್ಟದರ ವಿಕೃತಿಯ । ಕಾಣುತಿಹ ತತ್ಸಾಕ್ಷಿಯೇ ನಿ ।
ರ್ವಾಣ ಸರ್ವನಿಯಂತೃವದು ನೀನೆಂದು ನಿಶ್ಚಯಿಸು ॥ ೭೪ ॥

ಮಗನೆ ತಿಲದೊಳು ತೈಲವನು, ಕಾ।ಷ್ಠಗಳೊಳಗ್ನಿಯ, ಕ್ಷೀರದೊಳು ಮಿಗೆ।
ಸೊಗಸುವಾಜ್ಯವ, ಸಾಧಿಸುವ ತೆರದಂತೆ ತತ್ತ್ವಗಳ ॥
ತೆಗೆತೆಗೆದು ಬೇರ್ಪಡಿಸಿ ನೋಡಲು, । ಮಿಗಿಲೆನಿಸಿ ತೋರ್ಪಡುತಲಿಹ ಚಿ ।
ದ್ಗಗನವೇ ನೀನೆಂದು ನಿನ್ನೊಳು ತಿಳಿದು ನಿಶ್ಚಯಿಸು ॥ ೭೫ ॥

ಸರಕು ತುಂಬಿದ ಮನೆಯನೆಲ್ಲವ । ತೆರವು ಮಾಡುತ ತೆಗೆಯೆ ಬರಿಯಂ ।
ಬರವೆ ತುಂಬಿಹ ತೆರದಿ, ತನುವಿನೊಳಿರ್ದ ತತ್ತ್ವಗಳ ॥
ಹೊರಗಳೆಯಲೊಂದೊಂದನವ ಮಿ । ಕ್ಕಿರೆ ನಿರಾಕರಿಸಲ್ಕೆ ಬಾರವ ।
ಪರತರಚಿದಾಕಾಶವೇ ನೀನೆಂಮು ನಿಶ್ಚಯಿಸು ॥ ೭೬ ॥

---

ವಂಥ) ಕಟ್ಟಿಹಾದಿಯನ್ನು. ಜೀವನ್ಮುಕ್ತನು–ಬದುಕಿರುವಾಗಲೇ ಮೋಕ್ಷಸುಖವನ್ನನು ಭವಿಸುವವನು.

೭೪. (ಅವಿದ್ಯಾ)ಮಾನದಿಂ–(ಅವಿದ್ಯೆಯೆಂಬ) ಪ್ರಮಾಣದಿಂದ (ಅಳತೆಯಿಂದ) ಇದಿರಿಟ್ಟು—ಸೂಕ್ಷ್ಮದೇಹವನ್ನು ತನ್ನ ಹೊರಗಣದೆಂದು ತಿಳಿದು ತಾನು ಅದಕ್ಕಿಂತ ಬೇರೆಯಾಗಿ. ಸರ್ವನಿಯಂತೃ—ಎಲ್ಲದರ ಮೇಲೆಯೂ ತನ್ನ ಅಧಿಕಾರವನ್ನು ನಡೆಸುವಂಥದ್ದು.

೭೬. ಹೊರಗಳೆಯಲು—ತಾನಲ್ಲವೆಂದು ಬೇರ್ಪಡಿಸಲಾಗಿ. ಚಿದಾಕಾಶ–ಬಯಲಿನಂತೆ ವ್ಯಾಪಕವಾಗಿ ಸೂಕ್ಷ್ಮವಾಗಿ ನಿರ್ಲೇಪವಾಗಿರುವ ಚೈತನ್ಯ.

ದೇಹವೇ ದೀವಿಗೆಯ ಕಂಬವ । ದಾ ಹಣಿತೆಯೇ ಬಾಹ್ಯಕರಣಗ ।
ಳೂಹಿಸಲು ಪ್ರಾಣಾದಿವಾಯುವೆ ತೈಲದಂತದಕೆ; ॥
ಗಾಹುಗತಕದ ಸೂಕ್ಷ್ಮತನುವೇ । ಮೂಹುರಿಯದಹ ವರ್ತಿಯಲ್ಲಿಯ ।
ದೇಹಿಯೇ ಚಿದ್ದೀಪವದು ನೀನೆಂದು ನಿಶ್ಚಯಿಸು　　॥ ೭೭ ॥

ದೃಶ್ಯ, ಜಡ, ಸಂಧಾನವೆನಿಸುವ । ನಶ್ವರದ ಮನ, ನೇತ್ರ, ವಾಗಾ ।
ದಿ ಸ್ವಚೇಷ್ಟಾದುರ್ಬಲಗಳಿಂತಾವನೊಬ್ಬನನು ॥
ಆಶ್ರಯಿಸಿ ವ್ಯವಹರಿಸುತಿರ್ಪುವ । ಜಸ್ರ ತನ್ಮಯ ವಿಷಯಗಳನಂ ।
ತಾ ಸ್ವಯಂಜ್ಯೋತಿಯೆ ಕಣಾ ನೀನೆಂದು ನಿಶ್ಚಯಿಸು　　॥ ೭೮ ॥

ತನುವು ಮೊದಲಾಗಿರ್ಪ ಕೋಶಗ । ಳನಿತನಾತ್ಮಗಳೆಂದು ಶ್ರುತಿಯು ।
ಕ್ತ್ಯನುಭವಗಳಿಂ ನೇತಿಗಳೆದಿನ್ನುಳಿದ ಶೇಷಿತವೆ ॥
ತನಯ ಕೇಳ್ಪ್ರತ್ಯಕ್ಪ್ರಕಾಶವ । ದೆನಿಸಿ, ಜಡಕೋಶಗಳ ಬೆಳಗುವ ।
ಘನವದೇ ನೀನೆಂದು ನಿನ್ನೊಳು ತಿಳಿದು ನಿಶ್ಚಯಿಸು　　॥ ೭೯ ॥

ತೋರುವೀ ತೋರಿಕೆಯನೆಲ್ಲವ । ಬೇರೆಬೇರೆಯೆ ಕಾಣ್ಬರಿವೆ ತಾ ।
ತೋರಿಕೆಗಳನಪೇಕ್ಷಿಸದ ಬರಿಯರಿವೆನಿಸುತಿಹುದು; ॥
ಧೀರ, ಕೇಳಾ ಅರಿವೆ ಸಚ್ಚಿ । ತ್ಸಾರಸುಖವಹೆ ಬ್ರಹ್ಮ; ಸಹಜಾ ।
ಕಾರ; ಸಂವಿನ್ಮಾತ್ರವದು ನೀನೆಂದು ನಿಶ್ಚಯಿಸು　　॥ ೮೦ ॥

---

೭೭. ಗಾಹುಗತಕದ—ಇಲ್ಲದೆ ಇರುವದು ಇದ್ದಹಾಗೆ ಕಾಣುವಂಥ. ಮೂಹುರಿಯದಹ—ಸತ್ತ್ವ, ರಜ, ತಮ, ಎಂಬ ಮೂರು ಗುಣಗಳಿಂದ ಹುರಿಗೊಂಡಿರುವಂಥ. ವರ್ತಿ—ಬತ್ತಿ. ದೇಹಿಯೇ—ದೇಹಕ್ಕೆ ಸ್ವಾಮಿಯಾಗಿ ಒಳಗೆ ಇರುವವನೇ.

೭೮. ದೃಶ್ಯ—ನಮಗೆ ಹೊರಗಿನದಾಗಿ ಕಾಣತಕ್ಕದ್ದು. ಜಡ—ಅರಿಯುವ ಶಕ್ತಿ ಇಲ್ಲದ್ದು. ಸಂಧಾನ—ಎರಡನ್ನು ಕೂಡಿಸುವಂಥದ್ದು (ಉದಾಹರಣೆಗೆ ಮನಸ್ಸು ಇಂದ್ರಿಯಗಳನ್ನೂ ಜೀವನನ್ನೂ ಕೂಡಿಸುತ್ತದೆ; ನೇತ್ರ ಮತ್ತು ವಾಕ್ಕು ಮೊದಲಾದ ಇಂದ್ರಿಯಗಳು ಮನಸ್ಸಿಗೂ ವಿಷಯಗಳಿಗೂ ಗಂಟುಹಾಕುತ್ತವೆ). ಸ್ವಚೇಷ್ಟಾದುರ್ಬಲಗಳು—ತಮಗೆ ತಾವೇ ತಮ್ಮ ಕೆಲಸಗಳನ್ನು ಮಾಡುವ ಶಕ್ತಿ ಇಲ್ಲದವುಗಳು.

೭೯. ಅನಿತು (ಎಲ್ಲವೂ)+ಅನಾತ್ಮಗಳೆಂದು. ಘನ—ಜ್ಞಾನದ ಗಟ್ಟಿ.

೮೦. (ಅದು) ಸಂವಿನ್ಮಾತ್ರ—ಜ್ಞಾನಮಾತ್ರ.

ಬಿಸಿಲದೊರೆ,ಸ್ವಪ್ನಪ್ರಪಂಚವು। ಹುಸಿಯ ತೋರಿಕೆಯಾಗಿತೋರ್ಪುವು; ।
ಸಸಿನೆ ತಿಳಿದವರಿಂದ ಬಾಧಿಸಿಕೊಂಬವದರಂತೆ ॥
ಪುಸಿಯ ತೋರ್ಕೆಯ ನೇತಿಯಿಂ ಶೇ । ಷಿಸಿದ ನಿಜ ನಿರ್ಬಾಧರೂಪವು ।
ಹೆಸರಳಿದ ಪರಬೊಮ್ಮವದು ನೀನೆಂದು ನಿಶ್ಚಯಿಸು ॥ ೮೧ ॥

ಇದವೆನುತ್ತಿದಿರಾಗಿ ತೋರುವ । ದದುವೆ ಬಾಧಿಸಿಕೊಂಬುದೊಮ್ಮೆಯು ।
ಮಿದಮೆನಿಸುತಿದಿರಿಸದೆ ತದ್ವ್ಯಾವೃತ್ತಿಮುಖದಿಂದ ॥
ವಿಧಿಸಿ ಹೇಳಿಸಿಕೊಂಬ ನಿಜವೇ । ಸದಮಲಾನಂದೈಕಘನ; ಚಿ ।
ತ್ಪದವವೇ ನೀನೆಂದು ನಿನ್ನೊಳು ತಿಳಿದು ನಿಶ್ಚಯಿಸು ॥ ೮೨ ॥

ಅಂತು ಇಂತೆನಬಾರದಾತ್ಮನ । ನೆಂತರಿಯಬೇಕೆನಲು ತಿಳಿ ನೀ ।
ನಂತು ಇಂತೆನಬಾರದಿಪ್ಪುದಚಿಂತ್ಯಚಿದ್ಘನವು; ॥
ಅಂತದೇ ಆತ್ಮಸ್ವರೂಪವ । ನಂತಸುಖಮಯವದನು ನಿನ್ನೊಳು ।
ಭ್ರಾಂತಿಯುಳಿದನುಭವದೊಳದು ನೀನೆಂದು ನಿಶ್ಚಯಿಸು ॥ ೮೩ ॥

ಇಲ್ಲವೆಂಬುದು ಶೂನ್ಯವಾದಿಗೆ । ಸಲ್ಲದದು: ತಾನಿದಿರೊಳಿದ್ದೂ ।
ಇಲ್ಲವೆಂದೆಂಬಾಗ ತಾನೇ ಇಲ್ಲದಿರಬೇಕು ! ॥
ಇಲ್ಲವೆಂಬೀ ಸೊಲ್ಲು ತನಗಿ । ನ್ನೆಲ್ಲಿ ಬಂದುದು? ಬರಿಯ ಭ್ರಮೆಯದ ।
ನಿಲ್ಲವೆಂಬುದು ಬ್ರಹ್ಮವದು ನೀನೆಂದು ನಿಶ್ಚಯಿಸು ॥ ೮೪ ॥

ಪುತ್ರ, ಮಿತ್ರ, ಕಳತ್ರ, ತನು, ಧನ, । ಕ್ಷೇತ್ರ ಮೊದಲಾದಖಿಳ ತನ್ನಯ ।
ವಸ್ತುಗಳನಾತ್ಮೀಯವೆಂದೇ ಬಗೆದು ಮಮಕರಿಸಿ ॥

---

೮೧. ಬಿಸಿಲದೊರೆ—ಬಿಸಿಲಿನಲ್ಲಿ ತೋರುವ ಸುಳ್ಳುನದಿ. ಸಸಿನೆ—ಸರಿಯಾಗಿ, ಚೆನ್ನಾಗಿ. ನಿರ್ಬಾಧರೂಪವು—ಕನಸಿನ ಜಗತ್ತು ಎಚ್ಚರದಲ್ಲಿ ಸುಳ್ಳೆನಿಸಿಕೊಂಡಂತೆ ಸುಳ್ಳಾದ ದ್ದೆನಿಸಿಕೊಳ್ಳದಂಥದ್ದು. ಹೆಸರಳಿದ—ಹೆಸರಿಟ್ಟು ಹೇಳುವದಕ್ಕೆ ಬರದ.

೮೨. ಇದವೆನುತ್ತ—'ಇದು' ಎಂದು ಹೇಳಿಸಿಕೊಳ್ಳುತ್ತ. ಇದಿರಿಸದೆ—ತನಗೆ ಹೊರಗಿ ನದಾಗದೆ. ತದ್ವ್ಯಾವೃತ್ತಿಮುಖದಿಂದ—ಇದಲ್ಲನಿದಲ್ಲವೆಂಬ ರೂಪದಿಂದ.

೮೩. ಅಂತು ಇಂತೆನಬಾರದಿಪ್ಪುದು—ಅಂತು ಇಂತು ಎನಿಸಿಕೊಳ್ಳುವದೆಲ್ಲ ವಿಷಯವು; ಅದನ್ನು ಅರಿಯುವ ಚೈತನ್ಯವನ್ನು ಅಂತು ಇಂತು ಎನ್ನುವದಕ್ಕೆ ಬರುವದಿಲ್ಲ.

೮೪. ಇಲ್ಲವೆಂಬುದು ಬ್ರಹ್ಮ—ಇಲ್ಲವೆಂಬ ಸ್ಥಿತಿಯ ಸಾಕ್ಷಿಯೇ ಬ್ರಹ್ಮವು.

ಅತ್ಯಧಿಕಪ್ರಿಯರಸದೊಳಗೆ ಮುಳು | ಗುತ್ತಲಿರೆ ಪ್ರಿಯತರವೆನಿಸಿದ |
ನಿತ್ಯಸುಖವಹ ನಿನ್ನ ನೀನೆ ಅದೆಂದು ನಿಶ್ಚಯಿಸು || ೮೫ ||

ರತ್ನಮಯವಹ ಕೊಡದೊಳಗೆ ತೋ | ರುತ್ತಲಿಹ ದೀಪಪ್ರಕಾಶವು |
ಸುತ್ತಲೆಲ್ಲಾ ಒಳಹೊರಗೆ ಬೆಳಗುತ್ತಲಿರ್ಪಂತೆ ||
ತತ್ತ್ವಮಯವಹ ದೇಹದೊಳು ಹೊರ | ಗೆತ್ತ ನೋಡಲು ಥಳಥಳಿಸಿ ಬೆಳ |
ಗುತ್ತಲಿಹ ಚಿಜ್ಜ್ಯೋತಿಯೇ ನೀನೆಂದು ನಿಶ್ಚಯಿಸು || ೮೬ ||

ಅರಿವಿನುಳಿಮೆಯೆ ತಾನು; ತನ್ನೊಳು | ಬರಿಯರಿವೆತೀವಿರ್ಪುದದರೊಳು |
ಕರಣಗಳು ಸುಳಿದಾಡುತಿರ್ಪವು ಗಗನಲತೆಯೊಳಗೆ ||
ಬೆರಸಿ ತಿರುಗುವ ಪಕ್ಷಿಗಳವೋ | ಲ್ನಿರುಪಮಚಿದಾಕಾಶವೆನಿಸಿದ |
ಪರಮಸಂವಿದ್ರೂಪವೇ ನೀನೆಂದು ನಿಶ್ಚಯಿಸು || ೮೭ ||

ಭಾವಿಸಲು ಬೇರಿಲ್ಲವಂತದ | ಭಾವವೆಂದೆನಬಾರದಿಹುದಿ |
ನ್ನಾವ ತೆರನೆಂದೆನಲು ಕೇಳು ಸ್ವಭಾವವೆನಿಸಿರ್ದ ||

---

೮೫. ಅತಿಪ್ರಿಯವು–ತನ್ನವುಗಳು. ಮಮಕರಿಸಿ–ತನ್ನವೆಂದು ಮಾಡಿಕೊಂಡು. ನಿತ್ಯಸುಖವಹ–(ಪುತ್ರಾದಿಗಳು ತನ್ನವರೆಂಬುದರಿಂದಲೇ ಪ್ರಿಯವಾಗಿರುವ ಕಾರಣದಿಂದ ತಾನು ಎಲ್ಲಕ್ಕೂ ಪ್ರಿಯವಾಯಿತಾದ್ದರಿಂದ) ನಿತ್ಯಸುಖರೂಪವಾಗಿರುವ. ಈ ವಿಷಯಕ್ಕೆ ಬೃಹದಾರಣ್ಯಕಶ್ರುತಿಯಲ್ಲಿ "ಆತ್ಮನಸ್ತು ಕಾಮಾಯ ಜಾಯಾ ಪ್ರಿಯಾ ಭವತಿ....ಆತ್ಮನಸ್ತು ಕಾಮಾಯ ಪುತ್ರಾಃ ಪ್ರಿಯಾ ಭವನ್ತಿ" ಎಂದು ಮುಂತಾಗಿ ಹೇಳಿದೆ. ಎಂದರೆ ತನ್ನ ಇಚ್ಛಾಪೂರಣಕ್ಕಾಗಿಯೇ ಹೆಂಡತಿಮಕ್ಕಳ ಮೇಲೆ ಪ್ರೀತಿಯೆಂದು ತಾತ್ಪರ್ಯ.

೮೬. ತತ್ತ್ವಮಯವಹ–ಪಂಚಭೂತಗಳಿಂದ ಆಗಿರುವ. (ಮಹಾಪ್ರಲಯದವರೆಗೆ ಇದ್ದುಕೊಂಡು ಪ್ರಾಣಿಗಳಿಗೆ ಭೋಗದಾಯಕವಾಗಿರುವದರಿಂದ ಪಂಚಭೂತಗಳಿಗೆ ತತ್ತ್ವಗಳೆಂದು ಹೆಸರು. ತತ್ತ್ವವೆಂದರೆ ಇರುವ ವಸ್ತುವೆಂದರ್ಥ).

೮೭. ಅರಿವಿನುಳಿಮೆ—ವಿಷಯಗಳನ್ನೆಲ್ಲ 'ಇದು ತಾನಲ್ಲ; ಇದು ತಾನಲ್ಲ' ಎಂದು ಹೊರಗಳೆದ ಮೇಲೆ ಜ್ಞಾನರೂಪವಾಗಿ ಉಳಿದದ್ದು. ಗಗನಲತೆಯೊಳಗೆ ಬೆರಸಿ ತಿರುಗುವ ಪಕ್ಷಿಗಳವೋಲ್—ಆಕಾಶದಲ್ಲಿ ಬಳ್ಳಿಯೇ ಇಲ್ಲ; ಆ ಬಳ್ಳಿಗಳ ಮೇಲೆ ಪಕ್ಷಿಗಳು ಒಂದನ್ನೊಂದು ಅಟ್ಟಿಕೊಂಡು ತಿರುಗುವದಂತೂ ಇಲ್ಲವೇ ಇಲ್ಲ; ಇದರಿಂದ ಆಕಾಶಕ್ಕೆ ಪಕ್ಷಿಗಳ ಸೋಂಕು ಹೇಗೆ ಇಲ್ಲವೊ ಹಾಗೆ ಜ್ಞಾನರೂಪನಾದ ಆತ್ಮನಿಗೆ ಇಂದ್ರಿಯಗಳ ವ್ಯವಹಾರದ ಸೋಂಕೂ ಇಲ್ಲವೆಂದರ್ಥ. ಪರಮಸಂವಿದ್ರೂಪ–ಉತ್ಕೃಷ್ಟವಾದ ಜ್ಞಾನರೂಪ.

ಕೇವಲಾತ್ಮಸ್ವಪ್ರಕಾಶವೆ । ತೀವಿ ತೋರುತ್ತಿರ್ಪುದಂತದ ।
ಸಾವಧಾನದಿ ತಿಳಿದು ನೀನೆಂದದನು ನಿಶ್ಚಯಿಸು || ೮೮ ||

ವಿವಿಧವಹ ಸಂಸೃತಿಸಮಸ್ತವು । ವ್ಯವಹರಣೆ; ಜಾಗ್ರದಲಿ ತೋರ್ಪುದು; ।
ಸವನಿಸಿದ ತದ್ವಾಸನೆಯೆ ಸ್ವಪ್ನದಲಿ ತೋರುವದು; ||
ಅವಿರಳದ ತಾಮಸವೆ ಸುಪ್ತಿಯ । ಲವಘಡಿಸಿ ತೋರುವದವಸ್ಥಾ ।
ನಿವಹದನುಭವಸಾಕ್ಷಿಯೇ ನೀನೆಂದು ನಿಶ್ಚಯಿಸು || ೮೯ ||

ಜಾಗರಣದಲಿ ಸ್ವಪ್ನಸುಪ್ತಿಗ । ಳಾಗಿ ತೋರವು; ಸುಪ್ತಿಜಾಗ್ರಗ ।
ಳಾಗವಾಸ್ವಪ್ನದಲಿ; ಮೇಣಾ ಸ್ವಪ್ನಜಾಗರಣ ||
ಆಗಿ ತೋರವು ಸುಪ್ತಿಯಲಿ; ತಿಳಿ । ಜಾಗರಣೆ ಮೊದಲಾದವಸ್ಥೆಯ ।
ಭೋಗಸಾಕ್ಷಿಕವಾದರಿವೆ ನೀನೆಂದು ನಿಶ್ಚಯಿಸು || ೯೦ ||

ಮನವುಭಯಮುಖಮುಕುರದಂತಿಹು। ದನಘ, ನಿದ್ರೆಯ ಗವಸಣಿಗೆಯಿಂ।
ಮನದೆಡೆಯೊಳೆಚ್ಚರಿಕೆಕನಸುಗಳಾಗಿ ತೋರುವವು ; ||
ಇನಿತವಸ್ಥೆಯೊಳೊಂದಿ ತೋರುವ । ಮನವ ವ್ಯವಹಾರವನರಿವ ಚಿ ।
ದ್ಘನಪರಾಪರವಸ್ತುವೇ ನೀನೆಂದು ನಿಶ್ಚಯಿಸು || ೯೧ ||

ಕನಸಿನೊಳು ಕನಸಾಗಿ, ಬುದ್ಧಿಯ। ನೆನಹಿನೊಳು ನೆನಹಾಗಿ, ನಿದ್ರೆಯ ।
ಘನಸುಖದಿ ಸುಖವಾಗವಸ್ಥೆಗಳಾಗುಕೋಗಿನಲಿ ||

---

೮೮. ಬೇರೆ+ಇಲ್ಲ–ತನಗಿಂತ ಬೇರೆ ಇಲ್ಲ. ಅದ+ಅಭಾವವೆಂದೆನಬಾರದು.

೮೯. ವ್ಯವಹರಣೆ–ಬರೀ ವ್ಯವಹಾರ ಮಾತ್ರ (ನಿಜವಾದದ್ದಲ್ಲ). ಸವನಿಸಿದ–ಪ್ರಾಪ್ತವಾದ. ಅವಸ್ಥಾನಿವಹದನುಭವಸಾಕ್ಷಿ—ಎಚ್ಚರ, ಕನಸು, ನಿದ್ರೆ ಈ ಮೂರು ಅವಸ್ಥೆಗಳ ಅನುಭವಕ್ಕೆಲ್ಲ ಸಾಕ್ಷಿಯಾದವನು.

೯೦. ಭೋಗಸಾಕ್ಷಿಕವಾದ–ಎಚ್ಚರ, ಕನಸು, ನಿದ್ರೆ ಎಂಬ ಮೂರವಸ್ಥೆಗಳಲ್ಲಿಯೂ ತಪ್ಪದೆ ಇದ್ದುಕೊಂಡು ಆ ಎಲ್ಲ ಅನುಭವಗಳಿಗೂ ಸಾಕ್ಷಿಯಾಗಿರುವ.

೯೧. ಉಭಯಮುಖಮುಕುರ–ಎರಡು ಕಡೆಯೂ ಕಾಣುವ ಕನ್ನಡಿ (ಮನಸ್ಸು ಒಂದುಕಡೆ ಎಚ್ಚರವನ್ನೂ ಇನ್ನೊಂದು ಕಡೆ ಕನಸನ್ನೂ ತೋರಿಸುವಂಥ ಕನ್ನಡಿಯಂತಿರುವದೆಂದು ತಾತ್ಪರ್ಯ). ಗವಸಣಿಗೆ–ಮುಸುಕು.

೯೨. ಕನಸಿನೊಳು ಕನಸಾಗಿ–ಕನಸಿನಲ್ಲಿ ಕನಸಿನ ತಿಳಿವಳಿಕೆಯ ರೂಪವಾಗಿ. (ಕನಸಾಗಿ ಕಾಣುವದರ ಮೂಲಸ್ವರೂಪವು ಪರಂಜ್ಯೋತಿಯೆಂದು ತಾತ್ಪರ್ಯ). ಸುಖವಾಗಿ+

ತನಯ ಕೇಳ್ತತ್ಸಾಕ್ಷಿಯಾಗಿಯೆ । ಮನವಚನಗಳಿಗರಿಯಲಳವಡ ।
ದನುಪಮಪರಂಜ್ಯೋತಿಯೇ ನೀನೆಂದು ನಿಶ್ಚಯಿಸು ॥ ೯೨ ॥

ಮನವನೇ ಕುರುಹಿಟ್ಟು ನೋಡಲು । ತನಗೆ ತಾನೇ ತೋರುತಿರ್ಪುದು ।
ಘನಪರಂಜ್ಯೋತಿಪ್ರಕಾಶವು ಮನಕೆ ತಾ ಸಾಕ್ಷಿ; ॥
ನೆನೆವುದೇ ಮನದ ಸ್ವರೂಪವು ; । ನೆನಹು ಕಾಮಾದಿಗಳೊಳೊಂದಿಹು ।
ದನಘ, ಕಾಮಾದಿಗಳ ಪಿಡಿದಾ ಮನವ ನಿಗ್ರಹಿಸು ॥ ೯೩ ॥

ಒಮ್ಮೆ ಕಾಮಾದಿಗಳೊಳೊಂದಿಹು।ದೊಮ್ಮೆ ವೈರಾಗ್ಯದೊಳು, ಸಂಸ್ಕೃತಿ।
ಧರ್ಮದೊಳಗೊಮ್ಮೊಮ್ಮೆ, ತತ್ತ್ವವಿಚಾರಚಿಂತೆಯೊಳು ॥
ಒಮ್ಮೆ, ಪುಣ್ಯದೊಳೊಮ್ಮೆ, ಪಾಪದೊ । ಳೊಮ್ಮೆ, ಸುಖದುಃಖದಲಿ ।
ತೊಡರಿಹುದೊಮ್ಮೆಯದನರಿದಿರ್ಪುದೇ ನೀನೆಂದು ನಿಶ್ಚಯಿಸು ॥ ೯೪ ॥

ಅರಿವನರಿದಿಹೆನೆಂಬುದದು ಮನ । ವರಿವು ತಾನೆಂದೆಂಬುದದು ಮನ ।
ವರಿವಿನೊಳಗರಿವಾಗಿ ಬರಿಯರಿವಪ್ಪುದದು ಮನವು ; ॥
ಅರಿಯದೇನೂ ಕುರುಹುದೋರದೆ । ಬರಿಯ ಬೆಳಕಿನ ಬಳಕೆಯಾಗಿ ।
ರ್ಪರಿವಿನಾಕಾಶವೆ ಕಣಾ ನೀನೆಂದು ನಿಶ್ಚಯಿಸು ॥ ೯೫ ॥

---

ಅವಸ್ಥೆಗಳ+ಆಗುಹೋಗಿನಲಿ. ತತ್ಸಾಕ್ಷಿ—ಅವಸ್ಥಾತ್ರಯಗಳ ಸಾಕ್ಷಿ; "ಉಪದ್ರಷ್ಟಾನುಮಂತಾ ಚ ಕರ್ತಾ ಭೋಕ್ತಾ ಮಹೇಶ್ವರಃ । ಪರಮಾತ್ಮೇತಿ ಚಾಪ್ಯುಕ್ತೋ ದೇಹೇಽಸ್ಮಿನ್ ಪುರುಷಃ ಪರಃ" ಎಂಬ ಗೀತೋಕ್ತಿಯಂತೆ ಎಲ್ಲವನ್ನೂ ನೋಡುವವನು. ಮನವಚನಗಳಿಗರಿಯಲಳವಡದ–"ಯತೋ ವಾಚೋ ನಿವರ್ತಂತೇ ಅಪ್ರಾಪ್ಯ ಮನಸಾ ಸಹ"–ಶ್ರುತಿ.

೯೩. ನೆನಹು–ಮನಸ್ಸು. ಕಾಮಾದಿಗಳೊಳೊಂದಿಹುದು–ಕಾಮ, ಭಯ ಮುಂತಾದ ವೃತ್ತಿಗಳುಳ್ಳದ್ದು. ಮನಸ್ಸಿನ ಷೋಡಶವಿಕಾರಗಳಿಗೆ ೬ ಅ. ೨೬ ಪ.ನ್ನು ನೋಡಿ.

೯೪. ಅದನರಿದಿರ್ಪುದೇ—ಆ ಮನಸ್ಸನ್ನು ತಿಳಿದಿರುವದೇ.

೯೫. ಅರಿವ....ಮನ–ನನಗೆ ಇಂಥದ್ದರ ಜ್ಞಾನವಾಯಿತೆಂಬುದು ಕೂಡ ಮನಸ್ಸೇ; ಏಕೆಂದರೆ ಈ ಅರಿವು 'ನನಗೆ ಇಂಥದ್ದರ ಜ್ಞಾನವಾಯಿತೆಂಬ' ವಿಶೇಷರೂಪದಲ್ಲಿರುತ್ತದೆ. ಅರಿವು ...ಮನ—ಜ್ಞಾನಸ್ವರೂಪವೇ ನಾನೆಂಬುವದು ಕೂಡ ಮನಸ್ಸೇ; ಏಕೆಂದರೆ ಈ ಅರಿವು 'ಜ್ಞಾನಸ್ವರೂಪವೇ ನಾನು' ಎಂಬ ವಿಶೇಷರೂಪದಲ್ಲಿರುತ್ತದೆ. ಬರಿಯರಿವಪ್ಪುದು–ಯಾವದಾದರೊಂದು ವಿಷಯಜ್ಞಾನಸ್ವರೂಪವಾಗಿರದೆ ನಾನು ಶುದ್ಧಜ್ಞಾನಸ್ವರೂಪನೆನ್ನುವದೂ ಮನಸ್ಸೇ. ಏಕೆಂದರೆ ಈ ಅರಿವು ಶುದ್ಧಜ್ಞಾನಸ್ವರೂಪನೇ ನಾನೆಂಬ ವಿಶೇಷರೂ

ಎನ್ನ ಮನವಿನ್ನರರೆ ಚಿಂತಿಸ । ಲನ್ಯವೇನೂ ಮುಂದೆ ತೋರದು; ।
ನಿನ್ನ ಕತದಿಂ ತಿಳಿದು ನಿಶ್ಚಯವಾಯಿತೆಂಡೆನಲು ॥
ತನ್ನ ಮನಸಿನ ಕದಡು ತಿಳಿದುದ । ನಿನ್ನು ತಾನೇ ತಿಳಿದು ಪೇಳುವ ।
ಸನ್ನುತಜ್ಞಾನೈಕನಿಧಿ ನೀನೆಂಮ ನಿಶ್ಚಯಿಸು ॥ ೯೬ ॥

ನೆನಹಿನೊಡಲಾಗಿರ್ಪುದೇ ಮನ; । ಘನವಿವೇಕವೆ ಬುದ್ಧಿ; ವ್ಯವಹೃತಿ ।
ಯನುಭವದಲಭಿಮಾನರೂಪವೆ ಕೇಳಹಂಕಾರ; ॥
ಇನಿತು ವಿಧವಾಗಿರ್ಪ ಕರಣವ । ತನಯ ಪ್ರೇರಿಸುತಿರ್ಪ ಸಾಕ್ಷಿಯ ।
ದನುಪಮಪರಂಜ್ಯೋತಿಯದೆ ನೀನೆಂದು ನಿಶ್ಚಯಿಸು ॥ ೯೭ ॥

ತನ್ನ ಮನವೆಂಬಾಗ ಮನದಿಂ । ಭಿನ್ನ ತಾನೆಂದರಿದು, ಮನವನು ।
ತನ್ನಿದಿರ ದೃಶ್ಯತ್ವದಿಂ ಕುರುಹಿಟ್ಟು, ತನ್ಮನದ ॥
ಗನ್ನಗತಕವನರಿವುತಿಹ ಸಂ । ಪನ್ನಸತ್ಯಜ್ಞಾನನಿಜಚೈ ।
ತನ್ಯವೇ ನೀನೆಂದು ನಿನ್ನೊಳು ತಿಳಿದು ನಿಶ್ಚಯಿಸು ॥ ೯೮ ॥

ಸುರನರೋರಗನಲ್ಲ; ಮೇಣ್ಸ್ತ್ರೀ । ಪುರುಷವ್ಯಕ್ತಿಯದಲ್ಲ; ಬ್ರಾಹ್ಮಣ ।
ಧರಣಿಪತಿವೈಶ್ಯಾದಿವರ್ಣಾಶ್ರಮಗಳೇನಿಲ್ಲ; ॥
ಕರಚರಣಮೂರ್ಧಾಕ್ಷಿನಾಸಿಕ । ವೆರಸಿದವಯವವಿಲ್ಲ; ನಿತ್ಯ ।
ಸ್ಫುರಿತಪರಮಾಕಾಶವದು ನೀನೆಂದು ನಿಶ್ಚಯಿಸು ॥ ೯೯ ॥

ಏನುಮಲ್ಲದ ವಸ್ತು ನೀನೆಂ । ದೇ ನಿದಾನಿಸಿ ಪೇಳ್ದ ಬೆಡಗಿಂ ।
ತೇನು ? ನಾನಾರೆಂಬುವದ ನಾನರಿವ ಪರಿಯೆಂತು ॥

---

ಷವಲ್ಲಿರುತ್ತದೆ (ಮುಖ್ಯವಾಗಿ ಜ್ಞಾನದ ವಿಶೇಷರೂಪವೆಲ್ಲ ಮನಸ್ಸೆ). ಅರಿಯದೇನೂ —ಅರಿವಿನ ಯಾವ ವಿಶೇಷರೂಪವೂ ಇಲ್ಲದೆ.

೯೬. ಕದಡು—ಮಂದತ್ವ, ಅಜ್ಞಾನ.

೯೭. ಇನಿತು ......ಕರಣವ—ಮನಸ್ಸು, ಬುದ್ಧಿ, ಅಹಂಕಾರ ಎಂಬ ರೂಪದಲ್ಲಿರುವ ಅಂತಃಕರಣವನ್ನು.

೯೮. ತನ್ಮನದ—ಆ ಮನಸ್ಸಿನ. ಗನ್ನಗತಕವ—ಮೋಸಪಡಿಸುವ ಕಲ್ಪನೆಗಳನ್ನು ಕೊಡುವಂಥ ಬಗೆಬಗೆಯ ಚೇಷ್ಟೆಗಳನ್ನು.

ಸ್ವಾನುಭವವೆನಗಪ್ಪುದೆಂತೈ? । ಜ್ಞಾನವಂತನೆ, ಕರುಣಿಸೆನ್ನೀ ।
ದೀನತನವಳಿವಂತೆ ಸಲಹುವದೆಂದು ಶುಕ ನುಡಿದ || ೧೦೦ ||

ಅನ್ಯರನು ನೀನಾರು ಹೇಳೆಂ । ದಿನ್ನು ಕೇಳುವದುಚಿತಮಲ್ಲವೆ ।
ತನ್ನ ತಾನಾರೆಂದು ಕೇಳುವದುಚಿತವೇ ಮಗನೆ ? ||
ಕನ್ನಡಿಯೆ ಮುಂಗಯ್ಯ ಕಂಕಣ । ಕಿನ್ನು? ನಿನ್ನೊಳು ನಿನ್ನ ನಿಜ ಚೈ ।
ತನ್ಯವೆಂದದ ತಿಳಿದು ದೃಢತರವಾಗಿ ನಿಶ್ಚಯಿಸು || ೧೦೧ ||

ನಾನರಿಯೆ ನಾನನ್ಯನೆಂಬುದ । ನೇನವಿಡಿದದನರಿವುತಿಹೆಯದು ।
ತಾನೆ ಬರಿಯರಿವಾಗಿ ತೋರ್ಪುದು; ಕುರುಹನಿಟ್ಟದನು ||
ಧ್ಯಾನಿಸುತ್ತಿರಲನವರತವಾ । ಜ್ಞಾನದಪರೋಕ್ಷಾನುಭವಸಂ ।
ಧಾನವಹ ನಿಜ ತೋರ್ಪುದದು ನೀನೆಂದು ನಿಶ್ಚಯಿಸು || ೧೦೨ ||

ಅರಿವು ತಾನಾಗಿರ್ದು ತನ್ನನು । ವರಿಯೆನೆಂಬುದು ತನ್ನ ಬಾಯೊಳ ।
ಗಿರುವ ನಾಲಿಗೆಯಿಲ್ಲವೆಂಬನ ತೆರದಿ ಹಾಸ್ಯವಲಾ ! ||
ಅರಿಯೆನೆಂಬುದನೇತರಿಂ ನೀ । ನರಿದೆಯಾ ಬರಿಯರಿವು ತಾನೇ ।
ನಿರುಪಮಚಿದಾನಂದವದು ನೀನೆಂದು ನಿಶ್ಚಯಿಸು || ೧೦೩ ||

ಅರಿವು ತಾನಾಗಿರ್ದು ತನ್ನನು । ಮರೆವ ಪರಿಯೆಂತಕಟ! ಸೂರ್ಯಗೆ ।
ಹಿರಿದು ಕತ್ತಲೆಯುಂಟೆ? ಬೆಡಗಿನ ನುಡಿಯಲಾ ನೋಡೆ ! ।

---

೧೦೨. ಅನ್ಯನು–ಪುತ್ರ, ಶರೀರ ಮೊದಲಾದವುಗಳಿಂದ ಬೇರೆಯಾದವನು. ಏನವಿಡಿದದನರಿವುತಿಹೆಯದು–ಪುತ್ರಮೊದಲಾದವರಿಗಿಂತ ನಾನು ಬೇರೆಯೆಂಬುದನ್ನು ತಿಳಿಯೆನೆಂದು ಯಾವದರ ಆಧಾರದಿಂದ ತಿಳಿಯುತ್ತೀಯೋ ಅದು. (ಆ ಜ್ಞಾನದ+)ಅಪರೋಕ್ಷಾನುಭವಸಂಧಾನವು–ಪ್ರತ್ಯಕ್ಷವಾಗಿ ಅನುಭವಕ್ಕೆ ಹೊಂದಿಕೆಯಾಗಿರುವದು.

೧೦೩. ತನ್ನ+ಅನುವ+ಅರಿಯೆನು+ಎಂಬುದು.

೧೦೪. ಅರಿಯಲಿಲ್ಲದು—ಅದು (ಆ ತನ್ನ ಅರಿವಿನ ಸ್ವರೂಪವು) ಅರಿಯಲ್ಪಡಲಿಲ್ಲ (ಅರಿವೆಂಬ ಕ್ರಿಯೆಗೆ ವಿಷಯವಾಗಲಿಲ್ಲವೆಂದರ್ಥ). ವಿಷಯಭೂತವಾದ ವಿಶೇಷಜ್ಞಾನವು ಆತ್ಮನಲ್ಲವೆಂದು ೯೫ ನೆಯ ಪದ್ಯದಲ್ಲಿ ಹೇಳಿದೆ. ಅರಿಯಲ್ಪಟ್ಟದ್ದು ಆತ್ಮನಾಗುವದಿಲ್ಲವೆಂಬ ಅರ್ಥವನ್ನು "ಅವಿಜ್ಞಾತಂ ವಿಜಾನತಾಂ" ಎಂಬ ಕೇನಶ್ರುತಿಯೂ ಹೇಳುತ್ತದೆ. ಮರೆಯಲಿಲ್ಲದು—ಅದು (ಆ ತನ್ನ ಅರಿವಿನ ಸ್ವರೂಪವು) ಮರೆಯಲ್ಪಡಲಿಲ್ಲ (ಹೊರಗಣ ವಿಷಯಗಳನ್ನು ಮರೆಯಬಹುದು; ತನ್ನನ್ನು ತಾನು ಮರೆಯುವದಸಂಭ

ಅರಿಯಲಿಲ್ಲದು; ಮರೆಯಲಿಲ್ಲದು; । ಕುರುಹುತೆರಹೇನಿಲ್ಲವಿದ್ದಂ ।
ತಿರುತಿಹುದು; ನಿಜವಸ್ತುವದು ನೀನೆಂದು ನಿಶ್ಚಯಿಸು ॥ ೧೦೪ ॥

ನಾನು ನಾನೆಂದೆನ್ನುವೀ ಅಭಿ । ಮಾನವೇ ತಾನಲ್ಲವದನರಿ ।
ವಾ ನಿದಾನದ ಬರಿಯರಿವೆ ನೀನೆಂದು ತಿಳಿಪದನು ।
ಸ್ವಾನುಭವಸುಜ್ಞಾನದಿಂದಲಿ । ತಾನರಿಯಲಮ ನಿತ್ಯ ನಿಜ ನಿ ।
ರ್ಮಾನ ನಿರ್ಗುಣವಸ್ತುವದು ನೀನೆಂದು ನಿಶ್ಚಯಿಸು ॥ ೧೦೫ ॥

ನನ್ನ ನಾನೆಂತರಿವೆನೆಂಬುದ । ಮುನ್ನಲರಿವರಿವಾತ್ಮನದು; ನೆರೆ ।
ತನ್ನ ತಾನೇ ತೋರುತಿರ್ಪುದು; ಸ್ವಪ್ರಕಾಶವದು; ।
ತನ್ನ ಬುದ್ಧಿಗೆ ಸಾಕ್ಷಿ; ತಿಳಿ ಚೈ । ತನ್ಯರೂಪವಖಂಡಮಯವದ ।
ನನ್ಯವಮಲಾನಂದ ನೀನೆಂದವನು ನಿಶ್ಚಯಿಸು ॥ ೧೦೬ ॥

ಜ್ಞಾನದಿಂದಲಿ ತನ್ನನರಿಯೆನು । ತಾನೆನುತ್ತಿಹನದು ನಿಮಿತ್ತದಿ ।
ಜ್ಞಾನಪೂರ್ವಕವಾಗಿ ತೋರ್ಪುದು ಕೇಳದಜ್ಞಾನ; ॥
ಜ್ಞಾನದಿಂ ತೋರಿಸುತಲಿರ್ಪ । ಜ್ಞಾನ ಜಡದೃಶ್ಯಾನ್ಯವದರಿಂ ।
ಜ್ಞಾನವೇ ನೀನೆಂದು ನಿನ್ನೊಳು ತಿಳಿದು ನಿಶ್ಚಯಿಸು ॥ ೧೦೭ ॥

---

ವವು. ಏಕೆಂದರೆ ಅದು ಮರೆತವನ ಸ್ವರೂಪವಾಗಿಯೇ ಇರುವದು). ಕುರುಹುತೆರಹೇನಿಲ್ಲ—ಇಂಥ ಗುರ್ತುಗಳುಳ್ಳದ್ದೆಂಬದೂ [illegible] ಪ್ರಕಾರದ್ದೆಂಬದೂ ಆ ಅರಿವಿನ ಸ್ವರೂಪಕೆ ಇಲ್ಲ.

೧೦೫. ನಿದಾನದ—ಮೂಲಕ [illegible] ನ. ನಿರ್ಮಾನ—ಯಾವ ಅಳತೆಗೂ ಸಿಕ್ಕದಂಥದ್ದು

೧೦೬. ಮುನ್ನಲು—ಮೊದ [illegible] ಲ+ಅರಿವು+ಆತ್ಮನ—ತನ್ನನ್ನು ತಾನು ತಿಳಿಯಲಾರೆನೆಂಬ ಅರಿವೇ ಆತ್ಮ [illegible] ದಲ್ಲಿ "ವಿಜ್ಞಾತಮವಿಜಾನತಾಂ" ಎಂಬ ಕೇನ ಶ್ರುತಿಯೂ ಇದೆ. ([illegible]) [illegible] ತನ್ನನ್ನು ಬಿಟ್ಟು ಬೇರೆಯಲ್ಲದ್ದು.

[illegible]. ಜ್ಞಾನದಿಂದಲಿ ತನ್ನನ [illegible] ತಾನು—ನಾನು ನನ್ನ ಜ್ಞಾನಕ್ಕೆ ನನ್ನ ಸ್ವರೂಪವನ್ನು ವಿಷಯಭೂತವಾಗಿ ತಿಳಿದುಕೊಳ್ಳಲಾರೆನು. ಜ್ಞಾನಪೂರ್ವಕವಾಗಿ ತೋರ್ಪುದು ಕೇಳದಜ್ಞಾನ—ನನ್ನನ್ನು ನಾನು ಅರಿಯೆನೆನ್ನುವ [illegible] ಎಂದು ಜ್ಞಾನವೇ ಆದ್ದರಿಂದ ನಮ್ಮ ಅಜ್ಞಾನವೂ ಜ್ಞಾನಪೂರ್ವಕವಾಗಿಯೇ [illegible]ಸು. (ತೋರಿಸುತಲಿರ್ಪ+) ಅಜ್ಞಾನ—ಅಜ್ಞಾನವು. [illegible]ದೃಶ್ಯಾನ್ಯ—ಅರಿ [illegible] ಹೊರಗೆ ಕಾಣುವಂಥದ್ದು ವಸ್ತು ತನಗಿಂತ ಬೇರೆ [illegible]ವದ್ದು.

ತನ್ನನರಿಯದವಿದ್ಯೆಗಿಂತಲು । ಮುನ್ನಲಿಹ ಸುಜ್ಞಾನವನು ಸಂ ।
ಕೀರ್ಣವಾವಜ್ಞಾನ ಮುಸುಕೆ ಸಮರ್ಥವಲ್ಲಾಗಿ ॥
ಪೂರ್ಣಚಂದ್ರನ ಮುಸುಕಲರಿಯದ । ಚಿಹ್ನದಂತೆ ನಿರಾವರಣಪರಿ ।
ಪೂರ್ಣಪರಮಾನಂದವೇ ನೀನೆಂದು ನಿಶ್ಚಯಿಸು ॥ ೧೦೮ ॥

ತನು, ಕರಣ ಮೊದಲಾದ ತತ್ತ್ವಗ । ಳನಿತರೊಳು ಪ್ರತಿಫಲಿಸಿ ಚೇತನ ।
ವೆನಿಸಿ ಸಕಲಾಧಾರವಾಗಿಹ ಚಿತ್ಸ್ವರೂಪವನು ॥
ತನಗೆ ಕಾಣಿಸದೆಂಬುವನು ರಜ । ಕನವೊಲುದಕದೊಳಿರ್ದು ತೃಷೆಯಲಿ ।
ತನುವ ಬಿಟ್ಟಂತಕಟ! ತಾನೇ ತನಗೆ ಮರೆಯಹನು ॥ ೧೦೯ ॥

ಕಟ್ಟಳೆಲ್ಲದ ತನುಗಳನ [illegible] ಮುಟ್ಟದ [illegible]ಲು ಬೆಳಗುತ ।
ನೆಟ್ಟನವ ಚೇಷ್ಟಿಸುತಲಿ [illegible]ತ್ಮಕನು ,
ಹುಟ್ಟ[illegible]ಯಿಗೆ ತನ್ನ ತ[illegible] । [illegible]ಟ್ಟಬಂಜೆಯುನುತ್ತೆ ಯೋಚಿಪ ।
ಭ್ರಷ್ಟನೀ ಪರಿ ನಿಜವನ[illegible]? ಮಗನೆ, ಕೇಳೆಂದ ॥ ೧೧೦ ॥

ನಳಿನಸಖನಂತೇಕ ಕಾಲದಿ । ಬೆಳಗುತಿಹನಕ್ಷಿಗಳನೆಲ್ಲರ ।
ತಿಳಿಯೆಲಾ ಪರಿಯಾತ್ಮ ತನುಕರಣಾದಿ[illegible] ॥
ಬೆಳಗುತಿಹನೊಂದೇ ಪರಿಯಲಿದ । ನೆಲೆ ಮ[illegible] ತಿ[illegible] [illegible]ರಿಯ ಪರಿ ।
ಮಳಕೆ ಕರಗಳನೆತ್ತಿ ತೋರಿಸಲೇಕೆ? ಹೇ ॥ ೧೧೧ ॥

---

೧೦೮. ಮುನ್ನಲಿಹ ಸುಜ್ಞಾನ–ತನ್ನ ಸ್ವರೂ[illegible]ು ತಿಳಿಯೆನೆನ್ನುವಾಗ ತಿಳಿಯದಿರುವಿಕೆಗಿಂತ ಮೊದಲು ಅರ[illegible]ರಿಯುವ [illegible]ವದಷ್ಟೆ, ಅದು. ಸಂಕೀರ್ಣವಾದ–ಜಡವಾದ ಗುಣಗಳ ಮಿಶ್ರಣದಿಂದಾದ. [illegible]ರಣ–ಯಾವ ಮುಸುಕೂ ಇಲ್ಲದ.

೧೦೯. ಪ್ರತಿಫಲಿಸಿ–ತನು, ಕರಣ ಮೊದಲ[illegible]ಗಳ ಉಪಾಧಿಯುಳ್ಳವನಾಗಿ ಕಾಣಿಸಿಕೊಂಡು ಅಥವಾ ತನು, ಕರಣ ಮೊದಲಾದವುಗಳೇ ಚೈತನ್ಯವೆಂದು ಕಾಣುವ ಹಾಗೆ ಮಾಡಿ.

೧೧೦. ಚೇತನಾತ್ಮಕನು ಅವ (ಆ ಶರೀರಗಳನ್ನು) ಚೇಷ್ಟಿಸುತಲಿರುತಿಹನು (ಕೆಲಸ ಮಾಡಿಸುತ್ತಿರುವನು)–ಎಂದು ಅನ್ವಯವು.

೧೧೧. ಅಕ್ಷಿಗಳನೆಲ್ಲರ–ಎಲ್ಲರ ಕಣ್ಣುಗಳನ್ನೂ. ಈ ಪದ್ಯವು ಈ ಕೆಳಗೆ ಹೇಳುವ ಹಸ್ತಾಮಲಕಸಂವಾದಸ್ತೋತ್ರದ ಅನುವಾದವಾಗಿ ತೋರುತ್ತದೆ—"ನಿಮಿತ್ತಂ ಮನಶ್ಚಕ್ಷುರಾದಿಪ್ರವೃತ್ತೌ ನಿರಸ್ತಾಖಿಲೋಪಾಧಿರಾಕಾಶಕಲ್ಪಃ । ರವಿರ್ಲೋಕಚೇಷ್ಟಾನಿಮಿತ್ತಂ ಯಥಾ ಯಃ ಸ ನಿತ್ಯೋಪಲಬ್ಧಿಸ್ವರೂಪೋಽಹಮಾತ್ಮಾ॥"

ಅರಿವು ಮನದಲಿ ಪೊಳೆಯಲಾ ಮನ । ವರಿವು ತಾನಾಗಿಂದ್ರಿಯಂಗಳೊ ।
ಳಿರಕವಾಗಿರಲಿಂದ್ರಿಯಗಳರ್ಥಗಳ ಗ್ರಹಿಸುವವು; ॥
ಪರಮಚೈತನ್ಯಾತ್ಮನಿವರೊಳು । ಬೆರಸಿಕೊಂಡಿರಲರಿಯಬಾರದೆ? ।
ಕೊರಳ ಹಾರಕೆ ಪರರ ಕೇಳಲದೇಕೆ? ಶುಕಯೋಗಿ ॥ ೧೧೨ ॥

ನುಡಿವ, ನಡೆವ, ಪದಾರ್ಥಗಳ ನೆರೆ । ಹಿಡಿವ, ಬಿಡುವಾನಂದಿಸುವ ಬಹು ।
ಸಡಗರದ ಕರ್ಮೇಂದ್ರಿಯವ್ಯವಹಾರಗಳನುಳ್ಳ ॥
ಜಡಶರೀರವದಾವನೊಬ್ಬನ । ಪಿಡಿದು ಚೇಷ್ಟಿಸುತಿರ್ಪುದಾ ಎಡೆ ।
ಬಿಡದ ಚೈತನ್ಯಾತ್ಮನೇ ನೀನೆಂದು ನಿಶ್ಚಯಿಸು ॥ ೧೧೩ ॥

ಶುದ್ಧಸಂವಿತ್ತಾಗಿ ತೋರುತ । ಲಿದ್ದ ನಿಜವೇ ತಿಳಿದು ನೋಡಲು ।
ಬುದ್ಧಿ ಮೊದಲಾಗಿರ್ದ ತನುಕರಣಾದಿಯೊಳು ಪೊಳೆಯೆ ॥
ಬುದ್ಧಿ ಮೊದಲಾಗಿರ್ದುವೆಲ್ಲವು । ನಿರ್ಧರಿಸೆ ಚೈತನ್ಯವನು ಪಡೆ ।
ದಿರ್ದ ಕತದಿಂ ಚೇತನಾತ್ಮಕವೆನಿಸಿಕೊಂಡಿಹವು ॥ ೧೧೪ ॥

ಗುರುವೆ, ಬುದ್ಧಿಯ ವೃತ್ತಿಗಳನರಿ । ವರಿವೆ ಆತುಮನೆಂದು ಪೇಳ್ದಿರಿ; ।
ಕುರುಹನಿಟ್ಟದನರಿವ ಪರಿಯೆಂತೆನಲು ಕರುಣದಲಿ ॥
ಅರಿವ ಪರಿಯೆಂತೆಂಬ ಬುದ್ಧಿಯ । ನರಿವರಿವೆ ಆತುಮನೆನುತ್ತದ ।
ಕುರುಹನಿಟ್ಟದನರಿತುಕೋ ನೀನೆಂದು ಪೇಳಿದನು ॥ ೧೧೫ ॥

---

೧೧೨. ಅರಿವು ಮನದಲಿ ಪೊಳೆಯಲು–ಮನಸ್ಸಿನಲ್ಲಿ ಚೈತನ್ಯವು ಕೂಡಿಕೊಳ್ಳಲು. ತಾನು+ಆಗಿ+ಇಂದ್ರಿಯಂಗಳೊಳು. ಪರಮ . .ಬಾರದೆ?–ಚೈತನ್ಯದಾಭಾಸವೇ ಮನಸ್ಸು; ಮನಸ್ಸಿನ ಆಭಾಸವೇ ಇಂದ್ರಿಯಗಳು; ಇಂದ್ರಿಯಗಳ ಆಭಾಸವೇ ಶರೀರವು; ಹೀಗೆ ಚೈತನ್ಯವನ್ನರಿಯುವದು ಕಷ್ಟವೇನೂ ಅಲ್ಲ. ಆಭಾಸವೆಂದರೆ ಅದರಂತೆ ತೋರುವದೆಂದರ್ಥ.

೧೧೩. ಬಹುಸಡಗರದ–"ಉತ್ಕ್ರಾಮಂತಂ ಸ್ಥಿತಂ ವಾಪಿ ಭುಂಜಾನಂ ವಾ ಗುಣಾನ್ವಿತಂ ॥ ವಿಮೂಢಾ ನಾನುಪಶ್ಯಂತಿ ಪಶ್ಯಂತಿ ಜ್ಞಾನಚಕ್ಷುಷಃ" ಎಂಬ ಗೀತೋಕ್ತಿಯಂತೆ ಅನೇಕವ್ಯವಹಾರಗಳನ್ನುಳ್ಳ

೧೧೪. ತನುಕರಣಾದಿಯೊಳು ಪೊಳೆಯೆ–ಚೈತನ್ಯವು ತನುಕರಣಾದಿಗಳೆಂಬ ಉಪಾಧಿಯಿಂದ ಕೂಡಿದಂತೆ ಕಾಣಬರಲು ಅಥವಾ ತನುಕರಣಾದಿಗಳೇ ಚೈತನ್ಯವೆಂಬಂತೆ ಕಾಣಬರಲು.

೧೧೫. ಅರಿವ+ಅರಿವೆ–ತಿಳಿಯುವ ರೀತಿ ಹೇಗೆಂಬ ಬುದ್ಧಿಯನ್ನು ತಿಳಿವ ತಿಳಿವಳಿಕೆಯೇ.

ಬುದ್ಧಿಯುಉದಯಾಸ್ತಗಳ ಹುಟ್ಟಿದ । ಬುದ್ಧಿಯರಿಯದು; ತಿಳಿಯಲೀ ಪರಿ ।
ಬುದ್ಧಿಯುದಯಾಸ್ತಗಳನಂತದನರಿವ ಪರಿಗಳನು ॥
ಬುದ್ಧಿಯನುಸಂಧಾತೃವೆನಿಸು । ತ್ರಿರ್ದರಿವೆ ತಾನರಿವುದದರಿಂ ।
ಶುದ್ಧಸಹಜಾನಂದವೇ ನೀನೆಂದು ನಿಶ್ಚಯಿಸು ॥ ೧೧೬ ॥

ಸಿದ್ಧಸಾಧನವಾಗಿ ತೋರ್ಪಾ । ಬುದ್ಧಿ ಮೊದಲಾಗಿರ್ದುದೆಲ್ಲವ ।
ಹೊದ್ದಲಾ ಚೈತನ್ಯ ವಿಷಯಗ್ರಾಹಿಯೆನಿಸುವನು; ॥
ಬುದ್ಧಿವೃತ್ತಿಗಳಳಿದೊಡಾ ಕ್ಷಣ । ಶುದ್ಧ ಬುದ್ಧ ವಿಮುಕ್ತ ನಿಜವಾ ।
ದದ್ವಯಾನಂದೈಕರಸಮಯವಸ್ತುವೆನಿಸುವನು ॥ ॥ ೧೧೭ ॥

ಹಗಲು ಸೂರ್ಯನ ಬೆಳಕಿನಲಿ ರೂ । ಪಗಳು ತೋರ್ಪವು; ರಾತ್ರಿಯಲಿ ದೀ ।
ಪಗಳ ತೇಜದಿ ; ದೀಪಸೂರ್ಯರು ತೋರ್ಪರಕ್ಷಿಯಲಿ ; ॥
ಮುಗಿದು ಮುಚ್ಚಿದ ಕಣ್ಣು ಬುದ್ಧಿಯ । ಬಗೆಯಲರುಹಿಸಿಕೊಂಬುದಾ ಬು ।
ದ್ಧಿಗಳನರಿವುದು ಚಿತ್ತದೇ ನೀನೆಂದು ನಿಶ್ಚಯಿಸು ॥ ೧೧೮ ॥

---

೧೧೬. ಹುಟ್ಟಿದ ಬುದ್ಧಿಯರಿಯದು–ವೃತ್ತಿಗಳನ್ನು ಪಡೆದ ಬುದ್ಧಿಯು ತಾನು ವೃತ್ತಿಗಳನ್ನು ಪಡೆದದ್ದನ್ನು ತಿಳಿಯದು (ಯಾರೂ ತಮ್ಮ ಹುಟ್ಟನ್ನೂ ಸಾವನ್ನೂ ತಾವು ತಿಳಿಯಲಾರರಷ್ಟೆ!) ಬುದ್ಧಿಯನುಸಂಧಾತೃ–ಬುದ್ಧಿಗೆ ಸಾಕ್ಷಿಯಾಗಿ ಅದರ ವ್ಯವಹಾರಗಳನ್ನೆಲ್ಲ ನೋಡುವವನು.

೧೧೭. ಸಿದ್ಧಸಾಧನವಾಗಿ–ಪ್ರಾಣಿಗಳಿಗೆ ಸ್ವಭಾವವಾಗಿ ಬಂದಿರುವ ಸಾಧನಗಳ ರೂಪವಾಗಿ. ಬುದ್ಧಿ ಮೊಲಾಗಿರ್ದುದೆಲ್ಲವ–ಬುದ್ಧಿ, ಇಂದ್ರಿಯಗಳು ಮತ್ತು ದೇಹ—ಇವುಗಳನ್ನು. ಶುದ್ಧಬುದ್ಧವಿಮುಕ್ತ–ದೋಷವಿಲ್ಲದ್ದು, ಜ್ಞಾನಸ್ವರೂಪವಾದದ್ದು ಮತ್ತು ಕಟ್ಟುಗಳನ್ನೆಲ್ಲ ಕಳಚಿಕೊಂಡಿರುವಂಥದ್ದು. (ಈ ಮಾತುಗಳನ್ನು ಶ್ರೀಶಂಕರಭಗತ್ಪಾದರು ತಮ್ಮ ಗ್ರಂಥಗಳಲ್ಲಿ ಬಹಳ ಕಡೆ ಉಪಯೋಗಿಸಿದ್ದಾರೆ).

೧೧೮. 'ರಾತ್ರಿಯಲಿ... ತೇಜದಿ' ಎಂಬ ಮಾತುಗಳ ಮುಂದೆ 'ರೂಪಗಳು ತೋರ್ಪವು' ಎಂಬುದನ್ನು ಅಧ್ಯಾಹಾರಮಾಡಿಕೊಳ್ಳಬೇಕು. ಈ ಅಭಿಪ್ರಾಯಕ್ಕೆ ಆಧಾರವಾಗಿ ಬೃಹದಾರಣ್ಯಕಶ್ರುತಿಯಲ್ಲಿರುವದೇನೆಂದರೆ:–"ಯಾಜ್ಞವಲ್ಕ್ಯ ಕಿಂ ಜ್ಯೋತಿರಯಂ ಪುರುಷ ಇತಿ...ಅಸ್ತಮಿತ ಆದಿತ್ಯೇ ಯಾಜ್ಞವಲ್ಕ್ಯ ಚಂದ್ರಮಸ್ಯಸ್ತಮಿತೇ, ಶಾಂತೇಽಗ್ನೌ, ಶಾಂತಾಯಾಂ ವಾಚಿ, ಕಿಂ ಜ್ಯೋತಿರೇವಾಯಂ ಪುರುಷ ಇತ್ಯಾತ್ಮೈವಾಸ್ಯ ಜ್ಯೋತಿರ್ಭವತೀತ್ಯಾತ್ಮನೈವಾಯಂ ಜ್ಯೋತಿಷಾಸ್ತೇ ಪಲ್ಯಯತೇ ಕರ್ಮ ಕುರುತೇ ವಿಪಲ್ಯೇತೀತಿ" (ಯಾಜ್ಞವಲ್ಕ್ಯನೇ, ಈ ಪುರುಷನಿಗೆ ಬೆಳಕು ಯಾವದು? ...ಎಲೈ ಯಾಜ್ಞವ

ಇರುಳು ಮನೆಯಲಿ ಮಲಗಿ ನಿದ್ರೆಯು । ಭರದಲೆದ್ದವ ಮೆಲ್ಲಮೆಲ್ಲನೆ ।
ಕರದಿ ಕಂಬವ ಹುಡುಕಿ ತಡವರಿಸುತ್ತ ಭೀತಿಯಲಿ ॥
ಹೊರಡುವನು ಪೂರ್ವಾನುಭವಸಂ । ಸ್ಮರಣಸಾಧನಬುದ್ಧಿಯಿಂದೀ ।
ಪರಿಯ ಬುದ್ಧಿಯನರಿವರಿವೆ ನೀನೆಂದು ನಿಶ್ಚಯಿಸು ॥ ೧೧೯ ॥

ಮಗನೆ ಗಾಯತ್ರಿಯಲಿ ಪೇಳಿದ । ಬಗೆಯಲೇ ತಿಳಿ; ನಮ್ಮ ಬುದ್ಧಿಗೆ ।
ಮಿಗಿಲೆನಿಸಿ ಬೋಧಿಸುವದಾವುದು ನೋಡಲಾ ನಿಜವೇ ॥
ಅಗಣಿತಮಹಾತೇಜ ಸೂರ್ಯಾ । ದಿಗಳ ಬೆಳಗುವದಾಗಿ ನಾವದ ।
ಹಗಲಿರುಳು ಧ್ಯಾನಿಸುವದದು ನೀನೆಂದು ನಿಶ್ಚಯಿಸು ॥ ೧೨೦ ॥

ಬುದ್ಧಿಯರಿವುದೊ ವಸ್ತುವನು? ತಾ । ಶುದ್ಧವಸ್ತುವೆ ತನ್ನನರಿವುದೊ? ।
ಬುದ್ಧಿವಸ್ತುಗಳೊಳಗೆ ತಿಳಿಯುವದಾವುದೆಂದೆನಲು ॥
ಬುದ್ಧಿಯರಿಯದು ವಸ್ತುವನು; ತಾ । ಶುದ್ಧವಸ್ತುವೆ ತನ್ನನರಿವುದು; ।
ಬುದ್ಧಿ ಸಾಧನನಾಗಿಹುದರಿಂದನ್ಯ ಜಡ ದೃಶ್ಯ ॥ ೧೨೧ ॥

ಬುದ್ಧಿ ಚೇತನವಪ್ಪುದಾತ್ಮನ । ಹೊದ್ದಿ ; ತಾನದನರಿಯಲರಿಯದು ; ।
ಬುದ್ಧಿಯಿಂದಲಿ ತಿಳಿವುದಾತ್ಮನನೆಂಬುದುಪಚಾರ; ॥

---

ಲ್ಕ್ಯನೆ, ಆದಿತ್ಯನೂ ಅಸ್ತನಾಗಿ, ಚಂದ್ರನೂ ಮುಳುಗಿ, ಅಗ್ನಿಯೂ ಆರಿಹೋಗಿ, ಮಾತೂ ಹಿಮ್ಮೆಟ್ಟಿರುವಾಗ ಯಾವದೊಂದು ಬೆಳಕು ಈತನಿಗೆ ಸಹಾಯಕವಾಗಿರುವದು)? (ಉತ್ತರ: ಆತ್ಮನೇ ಈತನಿಗೆ ಬೆಳಕಾಗಿರುವದು. ತನ್ನ ಬೆಳಕಿನಿಂದಲೇ ಈತನು ಇರುತ್ತಾನೆ, ಸಂಚರಿಸುತ್ತಾನೆ, ಕೆಲಸಮಾಡುತ್ತಾನೆ ಮತ್ತು ಹಿಂದಿರುಗುತ್ತಾನೆ). ಮುಗಿದು....ಕೊಂಬುದು—ಕಣ್ಣನ್ನು ಮುಚ್ಚಿಕೊಂಡರೂ ಆ ಸ್ಥಿತಿಯನ್ನು ಬುದ್ಧಿಯು ಸಾಕ್ಷಿಯಾಗಿ ನೋಡುತ್ತಿರುವದು.

೧೨೦ ಗಾಯತ್ರಿಯಲಿ ಪೇಳಿದ ಬಗೆ–ಬುದ್ಧಿಯನ್ನು ಪ್ರೇರಿಸುವ ದೇವನನ್ನು ಧ್ಯಾನಿಸುತ್ತೇವೆಂಬುದೇ ಗಾಯತ್ರೀಮಂತ್ರದ ತಾತ್ಪರ್ಯವು. ಬುದ್ಧಿಗೆ ಮಿಗಿಲೆನಿಸಿ ಬೋಧಿಸುವದು—ಬುದ್ಧಿಯನ್ನು ಪ್ರೇರಿಸುವಂಥದ್ದು. ಅಗಣಿತ...ಬೆಳಗುವದಾಗಿ—"ತಸ್ಯ ಭಾಸಾ ಸರ್ವಮಿದಂ ವಿಭಾತಿ" ಶ್ರುತಿ.

೧೨೧: ವಸ್ತುವನು–ಶುದ್ಧವಸ್ತುವಾದ ಆತ್ಮನನ್ನು. ಬುದ್ಧಿವಸ್ತುಗಳೊಳಗೆ–ಬುದ್ಧಿ ಮತ್ತು ಶುದ್ಧವಸ್ತುವಾದ ಆತ್ಮ ಇವೆರಡರಲ್ಲಿ. ಬುದ್ಧಿಯು ಸಾಧನವಾದ ಕಾರಣದಿಂದ ಜಡವೂ ದೃಶ್ಯವೂ ಅನ್ಯವೂ ಆಗಿರುವದೆಂದು ತಾತ್ಪರ್ಯ.

ಹೊದ್ದಿ ಸೂರ್ಯಪ್ರಭೆಯ ಕನ್ನಡಿ । ಶುದ್ಧಮೆನೆ ತಾ ಪೊಳೆವುದಲ್ಲದೆ ।
ಸಿದ್ಧವಹ ರವಿಯುಂ ಪ್ರಕಾಶಿಸಲರಿಯದಂದದಲಿ ॥ ೧೨೩ ॥

ಅರಸಿನ ಸಮೀಪದಲಿ ಸಲಿಗೆಯೊ । ಳಿರುವ ಸಚಿವನ ಸ್ವಪ್ರಯೋಜನ ।
ಕರಸು ನೀನೆನಗೆಂಬ ಪರಿಯುಪಚಾರ ಲೋಕದಲಿ; ॥
ಪರಮಪುರುಷನ ಸನ್ನಿಧಿಯಲಿಹ । ಕರಣವಾತುಮನೆಂಬರಜ್ಞರು ; ।
ಅರಸುಸಚಿವರ ತೆರದಲಾತುಮಬುದ್ಧಿಭೇದಗಳು ॥ ೧೨೪ ॥

ಬುದ್ಧಿವಂತನೆ, ಗಾಜುಮಣ್ಣಿನ । ಶುದ್ಧಸಾರದಲಾದ ದರ್ಪಣ ।
ಸಿದ್ಧವಹ ಮುಖದರ್ಶನಕೆ ತಾ ಯೋಗ್ಯವಾದಂತೆ ॥
ಶುದ್ಧವಹ ಸತ್ತ್ವಪ್ರಧಾನದ । ಬುದ್ಧಿ ಮಾಯಾಕಾರ್ಯವಾಗಿಯು ।
ನಿರ್ಧರಿಸಲಾತ್ಮನ ವಿಚಾರಿಸಲಹುದು ಸಾಧನವು ॥ ೧೨೫ ॥

ಸಕಲವನು ಬೆಳಗುವ ದಿನೇಶನು । ಮುಕುರದಲಿ ಪ್ರತಿಬಿಂಬಿಸಲುತ ।
ನ್ಮುಕುರ ಕೋಣೆಯು ಕತ್ತಲೆಯ ಪರಿಹರಿಸುವಂದದಲಿ ॥
ಪ್ರಕಟಿಸಲು ಚಿಜ್ಜ್ಯೋತಿಯಂತ । ರ್ಮುಖದಿ ಬುದ್ಧಿಯೊಳಂತರಂಗದಿ ।
ವಿಕೃತಿಕರಮಾಯಾಂಧಕಾರವನಳಿಪುದಾ ಬುದ್ಧಿ ॥ ೧೨೬ ॥

ಬರಿಯರಿವ ತಾ ತನ್ನ ಬುದ್ಧಿಯೊ । ಳರಿಯಲಪ್ಪುದದೆಂತನಲು ನಿಜ ।
ದರಿವು ಸಾಕ್ಷಾತ್ತನಗೆ ತಾನೇ ಲಕ್ಷ್ಯವಲ್ಲಾಗಿ ॥

---

೧೨೩. ಅದ—ಆತ್ಮನನ್ನು. ಸಿದ್ಧವಹ...ದಂದದಲಿ—ಕನ್ನಡಿಯು ಸೂರ್ಯನಿಂದ ತಾನು ಥಳಥಳಿಸಿ ಆ ಪ್ರಕಾಶದಿಂದ ಬೇರೆ ವಸ್ತುವನ್ನು ಬೆಳಗೀತೇ ಹೊರತು ಸ್ವಪ್ರಕಾಶನಾದ ಸೂರ್ಯನನ್ನು ತೋರಿಸಲಾರದೆ ಇರುವ ಹಾಗೆ.

೧೨೪. ಸಚಿವನ—ಮಂತ್ರಿಯನ್ನು. ಕರಣ—ಸಾಧನವಾದ ಬುದ್ಧಿ.

೧೨೫. ಗಾಜುಮಣ್ಣಿನ—ಗಾಜನ್ನು ಮಾಡುವ ಮಣ್ಣಿನ. ನಿರ್ಧರಿಸಲು—(ಆತ್ಮನ ವಿಚಾರವನ್ನು) ಗೊತ್ತುಮಾಡಲು.

೧೨೬. ಮುಕುರದಲಿ—ಕನ್ನಡಿಯಲ್ಲಿ. ವಿಕೃತಿಕರ—ಬಗೆಬಗೆಯ ರೂಪಗಳನ್ನು ತೋರಿಸುವಂಥ.

೧೨೭. ಬುದ್ಧಿಸಾಧನ—ಮುಖವು ತನ್ನನ್ನು ತಾನು ಅರಿಯಲಾರದೆ ಕನ್ನಡಿಯ ಸಾಧನದಿಂದ ಪ್ರತಿಬಿಂಬದ ಮೂಲಕವಾಗಿ ಅರಿತುಕೊಳ್ಳುವದಷ್ಟೆ; ಇದರಂತೆ ಅರಿವು ಚೇತನ

ಪರಮಸಾಧನದರ್ಪಣವು ಮುಖ | ದರುಶನಕ್ಕಾ ಪರಿಯೊಳಾತ್ಮನ |
ನರಿವುದಕೆ ನಿಜಬುದ್ಧಿ ಸಾಧನ ಮಗನೆ ಕೇಳೆಂದ || ೧೨೬ ||

ಬುದ್ಧಿ ಸಾಧನಮಾತ್ರವಲ್ಲದೆ | ಶೊದ್ದು ತಾತ್ಮನನರಿಯರಿಯಲದು; |
ಬುದ್ಧಿ ಸಾಧನವಾದೊಡಾತ್ಮನು ತನ್ನ ತಾನರಿವ ; ||
ನಿರ್ಧರಿಸಲರಿವಂಶವಾತ್ಮನು; | ಬುದ್ಧಿ ತಾ ಜಡ, ದೃಶ್ಯ, ಸಾಧನ; |
ಬುದ್ಧಿಯಾತ್ಮನನರಿವುದೆಂಬುದು ಮರುಳುಮಾತೆಂದ || ೧೨೭ ||

ಕಣ್ಣು ಕಾಂಬುದೊ ಕನ್ನಡಿಯನಾ | ಕನ್ನಡಿಯೆ ತಾ ಕಣ್ಣ ಕಾಂಬುದೊ? |
ಕಣ್ಣು ಕನ್ನಡಿಯಿಂದ ತನ್ನನು ಕಾಂಬನೋ ತಾನು? ||
ನಿರ್ಣಯಿಸೆ ನಿಜದರಿವು ಬುದ್ಧಿಯ | ಲುನ್ನಯಿಸಿ ತಾ ತನ್ನನರಿವುದು; |
ಸನ್ನುತನೆ, ನಿಜದರಿವನರಿಯದು ಬುದ್ಧಿ ಜಡವಾಗಿ || ೧೨೮ ||

ತನ್ನ ತನ್ನಿಂದರಿವುತಿಹನೆಂ | ದುನ್ನತದ ಶ್ರುತಿ ಸಾರುತಿಹುದೆಲೆ; |
ತನ್ನ ತನ್ನಿಂದರಿವ ಪರಿಯೆಂತೆನಲು ಕೇಳದನು ; ||
ಕಣ್ಣು ಕನ್ನಡಿಯಿಂದ ತನ್ನನು | ನಿರ್ಣಯಿಸಿ ಕಾಣ್ಬಂದದಂತದು |
ತನ್ನದಪರೋಕ್ಷಾನುಭವ ಬುದ್ಧಿಪ್ರಕಾಶದಲಿ || ೧೨೯ ||

ಜ್ಞಾನ ತನ್ನಿಂ ತಾನೆ ಅರಿವುದೊ ? | ಏನೆನಲು ತಾ ತನಗೆ ದೃಶ್ಯವೆ ? |
ಜ್ಞಾನವದು ಜ್ಞಾನಾಂತರದಿ ತಾ ತೋರಿತೆಂತೆನಲು ||

---

ದಂತೆ ತೋರುವ ಬುದ್ಧಿಯ ಮೂಲಕವಾಗಿ ತನ್ನನ್ನು ತಾನೇ ಅರಿತುಕೊಳ್ಳು ವದು.

೧೨೭. ಬುದ್ಧಿಯಾತ್ಮನ–ಬುದ್ಧಿಯು ಆತ್ಮನನ್ನು ಅರಿಯುವದೆಂಬಲ್ಲಿ ಅರಿವಿನ ಅಂಶವೇ ಆತ್ಮ; ಬುದ್ಧಿಯು ಕನ್ನಡಿಯಂಥ ಸಾಧನ. ಸಾಕ್ಷಾತ್ತಾಗಿ ಬುದ್ಧಿಯೇ ತಿಳಿಯು ವದೆಂಬುದು ತಿಳಿವಳಿಕೆಯಿಲ್ಲದ ಮಾತೇ ಸರಿ.

೧೨೮. ಉನ್ನಯಿಸಿ–ಊಹಿಸಿ. ನಿಜದ....ಜಡವಾಗಿ—ಬುದ್ಧಿಯು ಜಡವಾದ್ದರಿಂದ ಆತ್ಮನ ಜ್ಞಾನವನ್ನು ಮಾಡಿಕೊಳ್ಳಲಾರದು.

೧೨೯. ಶ್ರುತಿ–"ಸಂವಿಶತ್ಯಾತ್ಮನಾತ್ಮಾನಂ" (ತಾನು ತನ್ನಲ್ಲಿ ಪ್ರವೇಶಿಸುತ್ತದೆ). (ತನ್ನದು+) ಅಪರೋಕ್ಷಾನುಭವ–ಸಾಕ್ಷಾತ್ಕಾರವು. ಬುದ್ಧಿಪ್ರಕಾಶದಲಿ–ಬುದ್ಧಿಯು ಆತ್ಮನಂತೆ ಚೈತನ್ಯರೂಪಾಗಿ ಹೊಳೆಯುವದರ ಸಹಾಯದಿಂದ.

ತಾನದೇ ಅನವಸ್ಥೆಯಪ್ಪುದ । ದೇನು ದೀವಿಗೆಯಿಂದ ದೀವಿಗೆ ।
ಕಾಣುವದೆ? ಅದು ತಾ ಸ್ವಯಂಪ್ರಭೆಯೆಂದು ತಿಳಿಯೆಂದ　　|| ೧೩೦ ||

ಬುದ್ಧಿಯಲಿ ಹೊಳೆದರಿವು ನಿಜವಾ । ಗಿದ್ದರಿವ ತಾ ಬೆಳಗಲರಿವುದೆ? ।
ಅ. .ನತೀಂದ್ರಿಯವಮೂರ್ತ .ಕಾಶವದು ; ||
. .ಸಂತನೆ, ಜಲದೊಳಗೆ ಹೊಳೆ । ದಿಪ್ಪ ರವಿಮಂಡಲಪ್ಪ .ವಾ ।
ಗಿದ್ದ ಸೂರ್ಯನ ಬೆಳಗಲರಿವುದೆ? ತಿಳಿದು ನೋಡೆಂದ　　|| ೧೩೧ ||

ಬುದ್ಧಿಯನು ಪ್ರತಿಬಿಂಬದರಿವನು । ಶುದ್ಧಸಂವಿತ್ತರಿವುದೆಂತೆನೆ ।
ವೇದ್ಯವಹ ಕನ್ನಡಿಯ ಮುಖವನು ಕಣ್ಣು ಕಾಂಬಂತೆ ; ||
ಬುದ್ಧಿ ತೋರುತ್ತಡಗುವದರಿಂ । ಬುದ್ಧಿಯರಿವದು ತೋರುತಡಗು ।
ತ್ತಿರ್ದಪುದು ತಾಂ; ಬುದ್ಧಿಸಹಿತದು ದೃಶ್ಯ; ನಿಜವಲ್ಲ　　|| ೧೩೨

ಬುದ್ಧಿಯಲಿ ಹೊಳೆದರಿವ ತಿಳಿಯಲು । ವೇದ್ಯವಾಗಿಹುದೆಲ್ಲರಿಂಗದು ; ।
ಬುದ್ಧಿಯಿಂದಾಚೆಯಲಿ ತೋರುವ ಶುದ್ಧವಾದರಿವು ||

---

೧೩೦. ಜ್ಞಾನ...ಅರಿವುದೋ—ಈ ಪ್ರಶ್ನೆಯ ಉತ್ತರವು ೧೨೬ ನೆಯ ಪದ್ಯದಲ್ಲಿಯೇ ನಿರ್ಣಯವಾಗಿದ್ದರೂ ಅಲ್ಲಿ ವ್ಯವಹಾರದೃಷ್ಟಿಯಿಂದ ಬುದ್ಧಿಯನ್ನು ಸಾಧನವಾಗಿಟ್ಟು ಕೊಂಡು ಉತ್ತರವನ್ನು ಹೇಳಿದೆ. ಇಲ್ಲಿ ಪರಮಾರ್ಥದಿಂದ ಆತ್ಮನು ತನ್ನನ್ನು ತಾನೇ ಅರಿವನೆಂದರೆ ಸ್ವಯಂಪ್ರಕಾಶನು ಎಂಬ ಉತ್ತರವನ್ನು ಹೇಳುವದಕ್ಕೆ ಮತ್ತೆ ಬಂದಿದೆ. ತಾ ತನಗೆ ದೃಶ್ಯವೆ—ತಾನು ತನಗೆ ದೃಶ್ಯವಾಗುವುದಿಲ್ಲವೆಂಬ ಈ ಉತ್ತರವು ೧೨೬ ನೆಯ ಪದ್ಯದಲ್ಲಿರುವ 'ಸಾಕ್ಷಾತ್ತನಗೆ ತಾನೇ ಲಕ್ಷ್ಯವಲ್ಲಾಗಿ' ಎಂಬುದರ ಅನುವಾದವಾಗಿದೆ; ತನ್ನನ್ನು ತಾನೆ ಅರಿಯಿತೆಂದರೆ ಆತ್ಮಾಶ್ರಯವೆಂಬ ದೋಷವೆನಿಸುವದೆಂದು ಶಾಸ್ತ್ರಕಾರರು ಹೇಳುತ್ತಾರೆ. ಅನವಸ್ಥೆ—ಒಂದು ಜ್ಞಾನವು ಮತ್ತೊಂದು ಜ್ಞಾನದಿಂದ ಅರಿಯಲ್ಪಟ್ಟಿತೆಂದರೆ ಅದಕ್ಕೆ ಮತ್ತೊಂದು ಜ್ಞಾನದ ಅಪೇಕ್ಷೆಯಾಗಬಹುದು; ಹೀಗೆ ಕೊನೆಯಾಗದೆ ಇರುವಂಥ ದೋಷಕ್ಕೆ ಅನವಸ್ಥೆಯೆಂದು ಹೆಸರು.

೧೩೧. ಬುದ್ಧಿಯಲಿ.... ಬೆಳಗಲರಿವುದೆ—ಬುದ್ಧಿಯಲ್ಲಿ ತೋರಿದ ಜ್ಞಾನರೂಪವು ಮೂಲವಾದ ಜ್ಞಾನರೂಪವನ್ನು ಬೆಳಗಲಾರದು.

೧೩೨. ಕನ್ನಡಿಯ ಮುಖವನು ಕಣ್ಣು ಕಾಂಬಂತೆ—ಕಣ್ಣು ಕನ್ನಡಿಯನ್ನೂ ಮುಖವನ್ನೂ ಕಾಣುವಂತೆ (ಆತ್ಮನು ಬುದ್ಧಿಯನ್ನೂ ಬುದ್ಧಿಗಾದ ಜ್ಞಾನವನ್ನೂ ಅರಿಯುವನು). ಬುದ್ಧಿಯ+ಅರಿವು+ಅದು.

*6

ವೇದ್ಯವಾಗದತೀಂದ್ರಿಯವು; ನೆರೆ । ಸಾಧ್ಯವಪರೋಕ್ಷಾನುಭವಸಂ ।
ಸಿದ್ಧಿಯಲಿ; ನೀನದನು ಸಾಕ್ಷಾತ್ಕರಿಸಿ ತಿಳಿಯೆಂದ ॥ ೧೩೩ ॥

ತೋರದರಿವುದು ನಿಜದರಿವು; ತಾ । ತೋರುತರಿವುದು ಬುದ್ಧಿಯರಿವಿನ।
ತಾರತಮ್ಯದಲಾತ್ಮಬುದ್ಧಿಗಳಲ್ಲಿ ಭೇದವನು ॥
ನೀರನೇ ತಿಳಿ ನೀನು; ಕೇತಕಿ । ಸಾರೆ ಸರ್ಪವನರಿವ ತೆರದಿಂ ।
ತೋರುವದು ನಿಜವಿದಿರೊಳಿಹುದೆಂದರಿಯುವದು ಬುದ್ಧಿ ॥ ೧೩೪ ॥

ಶುದ್ಧವಾಗಿದ್ದರಿವ ಹೊದ್ದಿದ । ಬುದ್ಧಿ ತಾನರಿವಾಗಿ ತನ್ನ ನಿ ।
ಬದ್ಧಿಸುವ ಪರಿಯಂತ ತಾನೇ ಆತ್ಮನಾಗಿಹುದು; ॥
ಶುದ್ಧರತ್ನವ ಗಾಜುಮಣಿಯ ನಿ । ಬದ್ಧಿಸುವ ನೋಟಕನ ತೆರದಲಿ ।
ಬುದ್ಧಿಯರಿವನು ನಿಜದರಿವನಾ ಪರಿಯಲರಿಯೆಂದ ॥ ೧೩೫ ॥

ಬುದ್ಧಿಯಿಂದಾಚೆಯಲಿ ತೋರು । ತ್ತಿದ್ದರಿವನರಿವಂದವೆಂತೆನೆ ।
ಬುದ್ಧಿ ಮೂರುಮಾವಸ್ಥೆಯೊಳು ತೋರ್ದಡಗುತಿಹುದಾಗಿ ॥
ಬುದ್ಧಿಯ ವಿಕಾರಗಳನರಿವುದು । ಶುದ್ಧಸಂವಿತ್ತದನು ಚಂದ್ರನ ।
ಬದ್ಧಿಸುವ ರಾಹುವ ನೀರೀಕ್ಷಿಸುವಂತೆ ತಿಳಿಯೆಂದ ॥ ೧೩೬ ॥

---

೧೩೩. ಬುದ್ಧಿಯಲಿ ಹೊಳೆದರಿವ—ಅರಿವು ಬುದ್ಧಿಯ ಉಪಾಧಿಯುಳ್ಳದ್ದಾಗಿ ಕಂಡದ್ದನ್ನು ಅಥವಾ ಬುದ್ಧಿಯೇ ಅರಿವೆಂಬಂತೆ ಕಂಡದ್ದನ್ನು.

೧೩೪. ತೋರದರಿವುದು ನಿಜದರಿವು—ಆತ್ಮನ ಅರಿವು ಇದಿರಾಗಿ ಕಾಣಿಸಿಕೊಳ್ಳದೆ ತಿಳಿಯುವದು. ತೋರುತರಿವುದು ಬುದ್ಧಿ—ಬುದ್ಧಿಯ ಅರಿವು ತಾನು ಕಾಣುತ್ತ ತಿಳಿಯುವದು. ನೀರನೇ—ಸುಂದರನೇ (ಎಂದು ವಾಗನನ್ನು ಕುರಿತು ಸಂಬೋಧನೆ). ತೋರುವದು ನಿಜ—(ಕೇದಗೆಯ ವಾಸನೆಯನ್ನು ಕಂಡರೆ ಸರ್ಪವನ್ನೂಹಿಸುತ್ತಾರಷ್ಟೆ. ಆಗ ತೋರುವದು ವಾಸನೆ; ತಿಳಿಯುವದು ಹಾವು. ಹಾಗೆಯೇ ಬುದ್ಧಿಯು ಚೈತನ್ಯದಂತೆ ತೋರುತ್ತದೆ; ಅದರಿಂದ ಆತ್ಮಜ್ಞಾನವು ಊಹಿತವಾಗುತ್ತದೆ.

೧೩೫. ನಿಬದ್ಧಿಸುವ—ಚೆನ್ನಾಗಿ ಒರೆಹಚ್ಚಿ ಹೋಲಿಸಿ ನೋಡುವ.

೧೩೬. ಚಂದ್ರನ ಬದ್ಧಿಸುವ ರಾಹುವ ನಿರೀಕ್ಷಿಸುವಂತೆ—ಛಾಯಾಗ್ರಹವಾದ ರಾಹು ಚಂದ್ರನನ್ನು ಹಿಡಿಯುತ್ತದೆ; ಅದಕ್ಕೇ ಗ್ರಹಣವೆನ್ನುತ್ತಾರೆ; ರಾಹು ಸ್ವತಃಕಾಣಿಸಿಕೊಳ್ಳುವದಿಲ್ಲ; ಚಂದ್ರನ ಸಂಬಂಧದಿಂದ ಗೊತ್ತಾಗುವದು. ಅದರಂತೆ ಶುದ್ಧಸಂವಿತ್ತು

ಸಾಧಕರಿಗೀ ಬುದ್ಧಿಸಾಕ್ಷಿಯು । ಸಾಧಿಸುವ ಪರಿಯೆಂತೆನಲು ನಿಜ ।
ಬೋಧವದು ನಿತ್ಯಪ್ರಕಾಶವು; ತೋರಲದು ಮುನ್ನ ॥
ಬೋಧದಂದದಿ, ಬುದ್ಧಿ ಬಳಿವಿಡಿ । ದಾದಿವಸ್ತುವಿನಿಂದ ತೋರ್ಪುದು; ।
ವೇದಶಿರವು "ತಮೇವ ಭಾಂತ"ಮೆನುತ್ತಲೋದುವದು ॥ ೧೩೭ ॥

ಬೆಲ್ಲದಿಂ ಮಧುರತೆಯು ಭಕ್ಷ್ಯಗ । ಳಲ್ಲಿ ತೋರುವ ವೋಲು ಚಿತ್ಪ್ರಭೆ ।
ಯಲ್ಲಿ ಕೂಡಿದ ಬುದ್ಧಿ ಚಿತ್ತೆಸೆವಂತೆ ತೋರುವದು; ॥
ಸಲ್ಲಲಿತಸಹಜಪ್ರಕಾಶವ । ಸೊಲ್ಲ ಪೇಳಲ್ಕರಿಯದನುಭವ ।
ದಲ್ಲಿ ಕಂಡ ಮಹಾನುಭಾವನೆ ಬಲ್ಲ ಕೇಳೆಂದ ॥ ೧೩೮ ॥

ತಿಳಿಯೆ ನಿರ್ಮಲಜಲದೊಳಗೆ ಪ್ರತಿ । ಫಲಿಸಿ ದಿನಕರಬಿಂಬ ಮಿಗೆ ಥಳ ।
ಥಳಿಸಲಾ ಜಲವೇನು ತೋರದೆ ಬಿಂಬಮಯವಾಗಿ ॥
ಪೊಳೆವವೋಲು ಚಿತ್ಪ್ರಭೆಯ ಥಾಳವ । ತಳೆದು ತನ್ನೊಳು ಬುದ್ಧಿ ತಾ ಥಳ ।
ಥಳಿಸಿ ಚಿತ್ಪ್ರಭೆಯೆಂತೆ ತೋರ್ಪುದು ಸಹಜವಲ್ಲೆಂದ ॥ ೧೩೯ ॥

ಬುದ್ಧಿಗಾತ್ಮಜ್ಞಾನವಾಗಲು । ಬುದ್ಧಿ ಸುಖಮಯವಪ್ಪುದಾತ್ಮನು ।
ಶು[illegible]ಧಸಂವಿತ್ತಾಗಿ ಸಹಜಾನಂದನಾಗಿಹನು; ॥

---

ತೋರದಿದ್ದರೂ ಅದರ ಇರುವಿಕೆಯು ಚಿದಾಭಾಸನಿಂದ ಎಂದರೆ ಇದೇ ಜ್ಞಾನವೆಂದು ಭ್ರಮಿಸುವಂತೆ ಬುದ್ಧಿಯಲ್ಲಿ ತೋರುವ ಧರ್ಮದಿಂದ ಗೊತ್ತಾಗುವದು.

೧೩೭. ನಿಜಬೋಧವು (ಆತ್ಮ)–ತನ್ನ ಆತ್ಮನ ಅರಿವು. ತೋರಲದು ಮುನ್ನ ಬೋಧದಂದದಿ–ಅದು ಮೊದಲು ಜ್ಞಾನರೂಪವಾಗಿ ತೋರಿದ ಮೇಲೆ. ಬುದ್ಧಿ ಬಳಿವಿಡಿದಾದಿವಸ್ತುವಿನಿಂದ ತೋರ್ಪುದು–ಬುದ್ಧಿಯು ಆ ಜ್ಞಾನವನ್ನು ಹಿಂಬಾಲಿಸಿ ಆ ಮೂಲ ವಸ್ತುವಿನಿಂದಲೇ ಬೆಳಗುವದು. ತಮೇವ ಭಾಂತ–(ಈ ಶ್ರುತಿವಾಕ್ಯಕ್ಕೆ ಪರಿಶಿಷ್ಟವನ್ನು ನೋಡಿ). ಎಲ್ಲವೂ ಆತ್ಮನ ಬೆಳಕಿನಿಂದಲೇ ಬೆಳಗುವವು.

೧೩೮. ಚಿತ್ತೆಸೆವಂತೆ–ಚಿದ್ರೂಪವು ಹೇಗೆ ಕಾಣುವದೋ ಹಾಗೆ. ಅನುಭವದಲ್ಲಿ ಕಂಡ–ಭಕ್ಷ್ಯಗಳಲ್ಲಿ ಸೇರಿರುವ ಬೆಲ್ಲವನ್ನು ಅರಿಯುವಂತೆ ಬುದ್ಧಿಯಲ್ಲಿ ತೋರುವ ಚಿತ್ಪ್ರಭೆಯಿಂದ ಚಿತ್ತನ್ನು ಕಂಡಂಥ. ಈ ಮಾತು "ಬಲ್ಲವನೇ ಬಲ್ಲ ಬೆಲ್ಲದ ಸವಿಯ" ಎಂಬ ಗಾದೆಯನ್ನು ನೆನಪುಗೊಡುತ್ತದೆ.

೧೩೯. ಸಹಜವಲ್ಲ–ಬುದ್ಧಿಯಲ್ಲಿ ತೋರುವ ಬೆಳಕು ಬುದ್ಧಿಯದಲ್ಲ.

ಹೊದ್ದಿ ರವಿಕಾಂತಿಯನು ಬೆಳಗು । ತ್ತಿದ್ದ ರವಿಕಾಂತದವೊಲಾ ಮನ; ।
ಸಿದ್ಧವಾಗಿಯೆ ಸ್ವಪ್ರಕಾಶನು ರವಿಯವೋಲಾತ್ಮ ॥ ೧೪೦ ॥

ಬುದ್ಧಿ ಪ್ರತ್ಯಕ್ಪ್ರವಣವಾಗಲು । ಸಿದ್ಧಿಸುವದಾತ್ಮಾಪರೋಕ್ಷವು; ।
ಬುದ್ಧಿಯೇ ಬಾಹ್ಯಪ್ರವಣದಿಂದಹುದು ಸಂಸಾರಿ; ॥
ಬುದ್ಧವೆಂಬುದು ಮುಕ್ತವೆಂಬುದು । ಬುದ್ಧಿಗೇ ಸರಿಯಾತ್ಮಕಿಲ್ಲೆಲೆ ।
ಅದ್ವಯಾನಂದೈಕರಸವದಕೆಂತೊ ? ಆ ನುಡಿಯು ॥ ೧೪೧ ॥

ಮುದ್ದೆಗಬ್ಬಿಣ ನೀರೊಳಿರಿಸಿದೊ । ಡದ್ದುವದು; ಬಳಿಕದನೆ ಪಾತ್ರೆಯ ।
ತಿದ್ದಿದರೆ ತೇಲುವದು; ತಿಳಿಯಾ ಪರಿಯಲೀ ಬುದ್ಧಿ ॥
ಹೊದ್ದಿ ಸಂಸ್ಕೃತಿಧರ್ಮವನು ತಾ । ಬದ್ಧವಾಗಿಹುದಮಲಬೋಧಸ ।
ದದ್ವಯಾತ್ಮನ ತಿಳಿದು ಜೀವನ್ಮುಕ್ತವಾಗಿಹುದು ॥ ೧೪೨ ॥

ಆದ ವಿಷಯವ ಹೊದ್ದಲದರೊಳು । ತೀವಿಕೊಂಡಿಹ ಬುದ್ಧಿ ಕೇಳಂ ।
ತಾ ವಿಷಯದೊಳಗೆರಕವಾಗಿಯೆ ಬದ್ಧವಾಗಿಹುದು; ॥
ಕೇವಲಾನಂದಾನುಭವದೊಳು । ಭಾವವನು ನೆಲೆಗೊಳಿಸೆ ಬುದ್ಧಿಗೆ ।
ಜೀವತನವಳಿದೈಕ್ಯವಪ್ಪುವು ಬ್ರಹ್ಮದೊಳಗೆಂದ ॥ ೧೪೩ ॥

ತನ್ನನರಿಯದುದೇ ಅವಿದ್ಯೆಯದಿನ್ನು ಶಾಸ್ತ್ರಶ್ರವಣದಿಂದಲಿ ।
ನಿರ್ಣಯಿಸಿ ತಾ ತನ್ನ ತಿಳಿಯಲವಿದ್ಯೆಯಡಗುವದು; ॥

---

೧೪೦. ಬುದ್ಧಿ . . . . ವಾಗಿಹನು—ಆತ್ಮಜ್ಞಾನದ ಸಂಪರ್ಕವಾದರೆ ಬುದ್ಧಿಯು ಸುಖಮಯವಾಗುತ್ತದೆ; ಎಂದರೆ ಚಿದ್ರೂಪದಿಂದಲೂ ಸುಖರೂಪದಿದಲೂ ತುಂಬಿರುವಂತೆ ಕಾಣುತ್ತದೆ; ಆತ್ಮನಲ್ಲಿ ಚಿತ್ಸುಖರೂಪಗಳು ಸ್ವಭಾವದಿಂದಲೇ ಇರುತ್ತವೆ.

೧೪೧. ಪ್ರತ್ಯಕ್ಪ್ರವಣವಾಗಲು—ಒಳಗಡೆಗೆ ಹರಿದರೆ. ಬದ್ಧವೆಂಬುದು . . . . ಬುದ್ಧಿಗೇ ಸರಿ—"ಮನ ಏವ ಮನುಷ್ಯಾಣಾಂ ಕಾರಣಂ ಬಂಧಮೋಕ್ಷಯೋಃ" ಎಂಬ ಉಕ್ತಿಯಂತೆ ಬದ್ಧ, ಮುಕ್ತ ಎನ್ನುವದು ಬುದ್ಧಿಗೇ ಸರಿ.

೧೪೨. ಅದ್ದುವದು—ಮುಳುಗುವದು. (ಪಾತ್ರೆಯ) ತಿದ್ದಿದರೆ—ಪಾತ್ರೆಯಾಗಿ ಮಾಡಿದರೆ.

೧೪೪. ಅನನ್ಯನಾತ್ಮನು ತನ್ನ ತಿಳಿದೊಡೆ ತಾನೆ ಲಯುವಹುದು—ಅದ್ವಯಸ್ವರೂಪ

ತನ್ನನರಿವೊಡೆ ಸಾಧನವು ತನ । ಗನ್ಯವೆನಿಸಿ ಬುದ್ಧಿ ; ನೋಡಲ ।
ನನ್ಯನಾತ್ಮನು ತನ್ನ ತಿಳಿದೊಡೆ ತಾನೆ ಲಯಪಹುದು || ೧೪೪ ||

ಅದು ನಿಮಿತ್ತದಿ ಬುದ್ಧಿ ಚಿತ್ತಿನ । ಹದನ ವಿವರಿಸಿ ತಿಳಿದು, ನಿಜವಾ ।
ದುದನೆ ನಿಶ್ಚಯವಾಗಿ ತಾನೆಂದರಿದನಾತ್ಮಗಳ ||
ವಿದಿತವಿದ್ಯಾದಿಗಳಿನುತ್ತಮ । ಸದಮಲಾನಂದೈಕಘನಚಿ ।
ತ್ಪದದೊಳೊಂದಿಸೆ ನಿನಗೆ ಜೀವನ್ಮುಕ್ತಿಯಹುದೆಂದ || ೧೪೫ ||

ಸತ್ಯದುಳುಮೆಯೆ ದೇಹದೊಳು ಳಚಿ । ಗುತ್ತಲಿಹ ಚಿತ್ತಿನೆಸಪ ಚೆಲುವಿಕೆ ।
ಯತ್ಯಧಿಕದಾನಂದವೆನಿಸುವ ಸೊಬಗು ; ರಂಜಿಸುವ ||
ಪ್ರತ್ಯಗಾತ್ಮನೆನಿಪ್ಪ ಮೋಹನ । ಮೂರ್ತಿಯದ ನೆನೆನೆಸೆದು ನೀನೇ ।
ಕತ್ವವೆನಿಸುವ ಮುಕ್ತಿಪದದಲಿ ನಿಂದು ಸುಖಿಯಾಗು || ೧೪೬ ||

ದೇವನಾರೆಂದೆನಲು ಬುದ್ಧಿಯ । ಭಾವದಲಿ ಭಾವವನರಿವ ಸ ।
ದ್ಭಾವರೂಪನು; ಸಾಕ್ಷಿಯಾತನೆ ದೇವನೆನಿಸುವನು; ||
ಆವಗಲು ಶ್ರುತಿಶಿರಗ"ಳೇಕೋ । ದೇವ"ನೆಂದೇ ಸಾರುತಿರಲದ ।
ಗಾವಿಲರು ಶ್ರುತಿವಿಮುಖರರಿಯರು ಭೇದವಾದಿಗಳು || ೧೪೭ ||

---

ನಾದ ಆತ್ಮನು ತನ್ನನ್ನು ತಾನು ತಿಳಿದರೆ ಬುದ್ಧಿಯು ತನಗೆ ತಾನೇ ಇಲ್ಲವಾಗುವದು.

೧೪೫. ಬುದ್ಧಿ ಚಿತ್ತಿನ—ಬುದ್ಧಿಯ ಮತ್ತು ಚಿತ್ತಿನ. ನಿಜವಾದುದನೆ—ಬುದ್ಧಿ ಶರೀರ ಮೊದಲಾದವುಗಳೆಲ್ಲ ಬರೀ ತೋರಿಕೆಯವಾದ್ದರಿಂದ ಅವುಗಳ ತೋರಿಕೆಗೆ ಆಧಾರವಾಗಿ ನಿಜವಾಗಿರುವ ಆತ್ಮವನ್ನೆ. ತಾನೆಂದು+ಅರಿದನು+ಅನಾತ್ಮಗಳ. ವಿದಿತವಿದ್ಯಾದಿಗಳಿಂ—ತಿಳಿಯಲ್ಪಟ್ಟಂಥ ಜ್ಞಾನ, ಉಪಾಸನೆ, ಭಕ್ತಿ ಮೊದಲಾದವುಗಳಿಂದ.

೧೪೬. ಸತ್ಯದುಳುಮೆಯೆ—'ಇದಲ್ಲ; ಇದಲ್ಲ'ವೆಂದು ಬುದ್ಧಿ, ದೇಹ ಮೊದಲಾದ ವಿಷಯಗಳನ್ನೆಲ್ಲ ಹೊರಗಳೆದ ಮೇಲೆ ಅವುಗಳಿಗೆ ಆಧಾರವಾಗಿ ಉಳಿದ ನಿಜಸ್ವರೂಪವೆ.

೧೪೭. ಬುದ್ಧಿಯ ಭಾವದಲಿ ಭಾವವನರಿವ—ಬುದ್ಧಿಯ ಮೂಲಕವಾಗಿ ವಿಷಯಗಳ ಇರುವಿಕೆಯನ್ನು ಅರಿಯುವಂಥ. "ಏಕೋ ದೇವ"—(ಶ್ರುತಿವಾಕ್ಯಕ್ಕೆ ಪರಿಶಿಷ್ಟವನ್ನು ನೋಡಿ.) ದೇವರೊಬ್ಬನೆ. ಗಾವಿಲರು—ಮೂಢರು. ಭೇದವಾದಿಗಳು—ಚಿದ್ರೂಪ

ಮಾಸಿ ದರ್ಪಣ ಮಲಿನವಾಗಿರೆ । ದೋಷವೇ? ಬೆಳಗಿದರೆ ತೇಜೋ ।
ರಾಶಿಯಹ ರವಿಯಂತಿಹುದಲೇ; ಪ್ರತ್ಯಗಾತುಮನು ॥
ಕ್ಲೇಶಪಂಚಕಯುಕ್ತಸಂಸೃತಿ । ಪಾಶಬದ್ಧಮನಸ್ಸಿನಲಿ ಮಿಗೆ ।
ಸೂಸದಿರೆ ಚಿಜ್ಜ್ಯೋತಿರೂಪಿಗೆ ಹಾನಿಯೇನೆಂದ ॥ ೧೪೮ ॥

ಇಂತು ತ್ವಂಪದಲಕ್ಷ್ಯವನು ದೃ । ಷ್ಟಾಂತಪೂರ್ವಕವಾಗಿ ನೆರೆ ತಿಳಿ ।
ವಂತೆ ಚಿದಚಿದ್ಭೇದಲಕ್ಷಣದಿಂದ ಬೋಧಿಸಲು ॥
ಭ್ರಾಂತಿಯಳಿದು, ನಿಜಾನುಭವವಿ । ಶ್ರಾಂತಿಸುಖಮಯನಾಗಿ, ಶುಕನೇ ।
ಕಾಂತದಲಿ ಚಿಂತಿಸಿದ ಸಹಜಾನಂದಗುರುಪದವ ॥ ೧೪೯ ॥

ಪಂಚವಿಂಶತಿತತ್ತ್ವದೂರ, ವಿ । ರಿಂಚಿಮುಖ್ಯಸುರಾಳಿವಂದಿತ, ।
ಪಂಚಶರಹರ, ಪಾಶಭಂಜನ, ಪರಮಕಾರುಣಿಕ, ॥

---

ನಾವ ಆತ್ಮನೂ ಜಡರೂಪವಾದ ವಿಷಯಗಳೂ ಎರಡೂ ಸತ್ಯವೆಂದು ಭೇದವನ್ನು ನ..ಸ..ಪವರು.

೧೪೮. ಕ್ಲೇಶಪಂಚಕ—೧೦. ೨೨ಪ. ನೋಡಿ. ಸೂಸದಿರೆ—(ಪ್ರತ್ಯಗಾತ್ಮನು ಬದ್ಧವಾದ ಮನಸ್ಸಿನಲ್ಲಿ) ಎದ್ದು ಹೊಳೆಯದೆ ಇದ್ದರೆ.

೧೪೯. ಚಿದಚಿದ್ಭೇಧ—ಚೇತನವನ್ನೂ ಜಡವನ್ನೂ ಬಿಡಿಸಿ ಬಿಡಿಸಿ ತಿಳಿಯುವದು. ಭ್ರಾಂತಿಯಳಿದು—ವಿಷಯಾಕಾರವಾದ ಜಗತ್ತು ಕೂಡ ಸತ್ಯವಾದುದೆಂಬ ತಪ್ಪುತಿಳಿವಳಿಕೆಯು ಹೋಗಿ.

೧೫೦. ಪಂಚವಿಶತಿತತ್ತ್ವಗಳು—೧ ಪ್ರಧಾನ, ೧ ಮಹತ್ತತ್ತ್ವ, ೧ ಅಹಂಕಾರತತ್ತ್ವ ೫ ಭೂತತನ್ಮಾತ್ರೆಗಳು, ೫ ಮಹಾಭೂತಗಳು, ೧೧ ಇಂದ್ರಿಯಗಳು, ೧ ಪುರುಷ. ಈ ೨೫ ಸಾಂಖ್ಯರ ಎಣಿಕೆ. ಪಂಚಶರಹರ—ಅರವಿಂದ, ಅಶೋಕ, ಚೂತ, ನವಮಲ್ಲಿಕಾ, ನೀಲೋತ್ಪಲ ಈ ಐದು ಪುಷ್ಪಗಳನ್ನು ಬಾಣಗಳಾಗಿ ಉಳ್ಳ ಮನ್ಮಥನನ್ನು ಸಂಹಾರಮಾಡಿದವನು (ಈಶ್ವರ). ಪಾಶಭಂಜನ—ಯಮನ ಹಗ್ಗವನ್ನು ಹರಿದವನು; ಅಥವಾ ಮಲ (ಜ್ಞಾನಕ್ರಿಯೆಗಳನ್ನು ಮುಚ್ಚಿಹಾಕುವದು), ಮಾಯಾ (ಪ್ರಪಂಚದ ತತ್ತ್ವಗಳಿಗೆಲ್ಲ ಉಪಾದಾನಕಾರಣವಾಗಿ ಸತ್ಯವಾಗಿರುವದು), ಕರ್ಮ (ಧರ್ಮಾಧರ್ಮಾತ್ಮಕವಾದದ್ದು), ತಿರೋಧಾಯಿಕ (ಭೋಗವನ್ನುಂಟುಮಾಡುವದು), ಬಿಂದು (ಮೋಕ್ಷವನ್ನು ಕೊಡುವ ಈಶ್ವರತತ್ತ್ವ—ಮೋಕ್ಷವನ್ನು ಕೊಡುವದು ಈಶ್ವರಾಧೀನವೆಂಬುದೂ ಒಂದು ಪಾಶವೆ) ಇವು ಪಂಚಪಾಶಗಳೆಂದು ಶ್ರೀಭೋಜದೇವನೃಪತಿಯು ಬರೆದಿರುವ ತತ್ತ್ವಪ್ರಕಾಶಿಕೆ ಎಂಬಗ್ರಂಥದ

ಪಂಚವದನ, ಪರಾ, ಪರಾತ್ಪರ, । ಪಂಚಕೃತ್ಯಪ್ರವರ್ತಿತಾರ್ಥಪ್ರ ।
ಪಂಚಮಯ, ಶ್ರೀಮಲ್ಲಿಕಾರ್ಜುನ ಸಲಹು ಮೂಜಗವ || ೧೫೦ ||

ಶ್ರೀಮತ್ಪರಮಹಂಸ ಪರಿವ್ರಾಜಕಾಚಾರ್ಯ ಸಹಜಾನಂದಗುರುವರ್ಯ
ಪಾದಕಮಲಭೃಂಗಾಯಮಾಣ ಸಹವಾಸಿ ಮಹಲಿಂಗರಂಗ
ವಿರಚಿತವಾದ ಅನುಭವಾಮೃತವೆಂಬ ಗ್ರಂಥದಲ್ಲಿ
ತ್ವಂಪದಾರ್ಥಶೋಧನೆಯೆಂಬ
ಮೂರನೆಯಧ್ಯಾಯವು ಮುಗಿದುದು.

---

ಟೀಕಿನಲ್ಲಿರುವವುಗಳನ್ನಾದರೂ ಇಲ್ಲಿ ಗ್ರಹಿಸಬಹುದು. ಪಂಚವದನ—ಸದ್ಯೋಜಾತ' ವಾಮದೇವ, ಅಘೋರ, ತತ್ಪುರುಷ, ಈಶಾನ ಎಂಬ ಐದು ಮುಖವುಳ್ಳವನು. ಪಂಚ ಕೃತ್ಯ . . ಪ್ರಪಂಚಮಯ—ಸೃಷ್ಟಿ, ಸ್ಥಿತಿ, ಸಂಹಾರ, ನಿಯಮ, ಅನುಪ್ರವೇಶ ಎಂಬ ಪಂಚಕೃತ್ಯಗಳಿಂದ ಪ್ರವೃತ್ತಿಮಾಡಿದಂಥ ಪದಾರ್ಥಗಳ ಪ್ರಪಂಚಮಯನಾದವನು (ಈಶ್ವರ).

## ನಾಲ್ಕನೆಯ ಅಧ್ಯಾಯ

### ತತ್ಪದಾರ್ಥಶೋಧನೆ

**ಸೂ॥ ಬಾದರಾಯಣ ಶುಕಮುನೀಶ್ವರ । ಗಾದರದಿ ತತ್ಪದವ ಶೋಧಿಸಿ ।**
**ಬೋಧಿಸಿದ ಸತ್ಯಾದ್ವಯಾನಂದವನು ತಿಳಿವಂತೆ ॥**

ವಾರಿನಿಧಿಯೇ ಪಾತ್ರೆ, ಕಜ್ಜಲ । ಸಾರವಂಜನಗಿರಿಯ ಕೆಸರೀ ।
ಧಾರಿಣೀತಲ ಹಲಗೆ, ಸುರತರು ಬರೆವ ಲೆಕ್ಕಣಿಕೆ, ॥
ಶಾರದಾಂಬಿಕೆ ಶ್ರೀಗಿರೀಶನ । ಪಾರಗುಣಸಾಗರವನೆಣಿಸ ।
ಲ್ಕಾರದಾದಳು; ಮನುಜಕೀಟಕರರಿಯಲಳವಹುದೆ? ॥ ೧ ॥

ಉದಯದಲಿ ಮಲಮೂತ್ರಗಳು ಬಿಡು । ವದೆ ಕೆಲಸ; ಮಧ್ಯಾಹ್ನಕಾಲದಿ ।
ಕ್ಷುಧೆತೃಷೆಗಳಲಿ ಕುದಿದು ಕೋಟಲೆಗೊಂಬುದೇ ಕೆಲಸ; ॥
ಉದರ ತುಂಬಿದ ಬಳಿಕ ಕಾಮನ । ಕದನದಲಿ ರಾತ್ರಿಯನು ಕಳೆವಾ ।
ಅಧಮರಿಗೆ ಪೇಳದಿರು ಮರೆದೀ ಅನುಭವಾಮೃತವ ॥ ೨ ॥

ಶಿಷ್ಟರಿಗೆ, ಶಿವಭಕ್ತಿಯಲಿ ಪರಿ । ತುಷ್ಟರಿಗೆ, ಪರಮಾರ್ಥಗತಿಯನು ।
ನಿಷ್ಠೆಯಿಂದಲಿ ಸಾಧಿಸುವ ಸಾಧುಗಳಿಗನವರತ ॥

---

ಸೂ॥ ಸತ್ಯಾದ್ವಯಾನಂದವನು—ಮೂರು ಕಾಲದಲ್ಲಿಯೂ ನಿಜವಾಗಿಯೂ ಇರುವಂಥ, ಎರಡನೆಯದಿಲ್ಲದಂಥ, ಆನಂದಸ್ವರೂಪವಾದ್ದಂಥ ಬ್ರಹದ ವಿಚಾರವನ್ನು.

೧. ವಾರಿನಿಧಿಯೇ ಪಾತ್ರೆ—ಸಮುದ್ರವೇ ಮಶಿಯ ಕುಡಿಕೆ ಮೊದಲಾದ ಅಭಿಪ್ರಾಯಗಳಿರುವ ಪದ್ಯವು ಶಿವಮಹಿಮ್ನಸ್ತೋತ್ರದ ೩೨ನೆಯ ಶ್ಲೋಕದ ಅನುವಾದವಾಗಿದೆ. ಆ ಶ್ಲೋಕವೇನೆಂದರೆ:- "ಅಸಿತಗಿರಿಸಮಂ ಸ್ಯಾತ್ಕಜ್ಜಲಂ ಸಿಂಧುಪಾತ್ರೇ । ಸುರತರುವರಶಾಖಾ ಲೇಖಿನೀ ಪತ್ರಮುರ್ವೀ ॥ ಲಿಖತಿ ಯದಿ ಗೃಹೀತ್ವಾ ಶಾರದಾ ಸರ್ವಕಾಲಂ । ತದಪಿ ತವ ಗುಣಾನಾಮೀಶ ಪಾರಂ ನ ಯಾತಿ ॥" ಶ್ರೀಗಿರೀಶನ + ಅಪಾರಗುಣಸಾಗರವನು " ಮನುಜಕೀಟಕರು—ಸಣ್ಣ ಹುಳದಂಥ ಮನುಷ್ಯರು.

**೩. ಪರಮಾರ್ಥಗತಿಯನು—ಮೋಕ್ಷಸಾಧನೆಯ ಮಾರ್ಗವನ್ನು. ಗೋಷ್ಠಿ—ಸಭೆ.**

ಶ್ರೇಷ್ಠವಹ ಶಾಸ್ತ್ರಗಳ ಶ್ರವಣದ । ಗೋಷ್ಠಿಯುಳ್ಳವರಿಂಗೆ, ಸಮತೆಯ ।
ದೃಷ್ಟಿವಂತರಿಗೊಲಿದು ಪೇಳೀ ಅನುಭವಾಮೃತವ ॥ ೩ ॥

ಹೇಳಿದೆನು ತ್ವಂಪದದ ಲಕ್ಷ್ಯವ; । ಕೇಳು ಶುಕಯೋಗೀಂದ್ರ, ನಿತ್ಯ ನಿ ।
ರಾಳ ನಿರ್ಗುಣ ನಿಖಿಲಸಾಕ್ಷಿ ನಿರೀಹ ನಿಸ್ಸೀಮ ॥
ಮೂಲಭೂತಪ್ರಕೃತಿಪರತರ । ಕಾಲಕರ್ಮಾತೀತ ಬ್ರಹ್ಮವ ।
ಹೇಳುವರು ತತ್ಪದದ ಲಕ್ಷ್ಯವದೆಂದು ಬಲ್ಲವರು ॥ ೪ ॥

ಮಾಯೆ ತ್ರಿಪುಟಿಯ ರೂಪು; ತ್ರಿಪುಟಿನಿ । ಕಾಯವೇ ಜಗಜೀವಕರಣನಿ ।
ಕಾಯವವು ತಿಳಿ ಭೋಗ, ಭೋಗ್ಯವು, ಭೋಕ್ತೃವೆನಿಸುವವು; ॥
ಈಯಶೇಷವ ನೇತಿಗಳೆದುಳಿ । ದಾ ಯಥಾರ್ಥಸ್ವಪ್ರಕಾಶಾ ।
ಪಾಯರಹಿತಸುಖೈಕವಿಗ್ರಹವೇ ಪರಬ್ರಹ್ಮ ॥ ೫ ॥

ಎಂದಡೆಂದನು ಗುರುವೆ, ಮಾಯೆಯ । ಚಂದವಾವುದು? ಜೀವಜಗವಾ ।
ರಿಂದ ತೋರಿತದಾದ ಬಗೆಯೆಂತೆನಲು ಕರುಣದಲಿ ॥
ಕಂದ, ಕೇಳ್ಳೈ;ಮಾಯೆಯೆನೆ ಪುಸಿ । ಯಿಂದ್ರಜಾಲ, ಮರೀಚಿಕಾಜಲ ।
ದಂದ, ರಜ್ಜುಭುಜಂಗದಂದದಿ ತೋರುತಿಹುದೆಂದ ॥ ೬ ॥

---

೪. ನಿರೀಹ—ಕ್ರಿಯಾರಹಿತವಾದದ್ದು. ನಿಸ್ಸೀಮ—ಎಲ್ಲೆಕಟ್ಟಿಲ್ಲದ್ದು. ಮೂಲಭೂತ ಪ್ರಕೃತಿಪರತರ—ಎಲ್ಲಕ್ಕೂ ಕಾರಣವಾಗಿರುವ ಪ್ರಕೃತಿಗಿಂತಲೂ ಮೂಲಕಾರಣವಾದ್ದು. ಕಾಲಕರ್ಮಾತೀತ—ಸಾವಿಗೂ ಮಾಡಿದ ಕರ್ಮದ ಫಲಕ್ಕೂ ಕಟ್ಟುಬೀಳದೆ ಇರುವಂಥದು.

೫. ಮಾಯೆ—ಜಗತ್ತಿನ ನಾಮರೂಪಗಳ ಬೀಜರೂಪವಾದ ಶಕ್ತಿವಿಶೇಷವು. ತ್ರಿಪುಟಿಯ—ಸತ್ವ, ರಜ, ತಮ ಎಂಬ ಮೂರು ಅವಯವಗಳುಳ್ಳ. ಭೋಗ—ಸುಖದ ಅಥವಾ ದುಃಖದ ಅನುಭವ. ಭೋಗ್ಯವು—ಅನುಭವಿಸಲ್ಪಡುವ ವಸ್ತು. ಭೋಕ್ತೃ—ಅನುಭವಿಸುವವನು. ನೇತಿಗಳೆದು—ಇವೆಲ್ಲ ಬ್ರಹ್ಮವಲ್ಲವೆಂದು ಕೈಬಿಟ್ಟು.

೬. 'ತೋರಿತದಾದ ಬಗೆಯೆಂತೆನಲು' ಎಂಬ ಕಡೆ ಮೂಲದಲ್ಲಿ 'ಲಾದುದು ಕಾರಣವ ಹೇಳೆನಲು' ಎಂದಿದೆ. ಮುಂದೆ ಜಗತ್ತಾದ ಕಾರಣದ ವಿಚಾರವಿಲ್ಲದೆ ಆದ ಪರಿಯೇ ಇರುವದರಿಂದ ಹೀಗೆ ತಿದ್ದಿದ್ದಾಗಿದೆ. ಮುಂದೆ ೯ ನೇ ಪದ್ಯದಲ್ಲಿ ಕವಿಯು ತಾನೇ "ಆಗಿ ತೋರಿದ ಬಗೆಯ" ಎಂದುಪಯೋಗಿಸುವದರಿಂದ ಈ ತಿದ್ದಿದ ರೂಪವು ಯೋಗ್ಯವಾಗಿದೆ. ಮಾಯೆಯೆನೆ ಪುಸಿ—ಮಾಯೆ ಎಂದರೆ 'ಯಾ ಮಾ ಸಾ ಮಾಯಾ' ಎಂಬ ವ್ಯುತ್ಪತ್ತಿಯಿಂದ ಇಲ್ಲದ್ದೆಂದು ಅರ್ಥ.

ಆದಿಮಧ್ಯಾಂತಂಗಳಿಲ್ಲದ । ನಾದಿಯಹ ಮಾಯೆಯನು ತಿಳಿದದ ।
ಭೇದಿಸಲು ಶತಕಲ್ಪವಾದರು ಬ್ರಹ್ಮಗಳವಲ್ಲ; ॥
ವಾದಿಗಳು ಹೊಡೆದಾಡಿ ಬರಿದೇ । ಕಾದಿ ಕಲ್ಲನು ಹಾಯ್ವರಲ್ಲದೆ ।
ಶೋಧಿಸುತ ಸುಳ್ಳೆಂದು ತಿಳಿದವರಿಲ್ಲ ಕೇಳೆಂದ ॥ ೭ ॥

ಈ ವಿಧದ ಪುಸಿಮಾಯೆ ತಾನೇ । ಆವರಣವಿಕ್ಷೇಪಶಕ್ತಿಯ ।
ಭಾವದಿಂದೆರಡಾಗಿ ತೋರ್ಪುದಖಂಡವಸ್ತುವನು ॥
ಆವರಿಸಿಕೊಂಡಿರ್ಪುದದು ಕೇ । ಳಾವರಣಶಕ್ತಿಯು; ಜಗತ್ತನು ।
ಜೀವರನು ವಿಕ್ಷೇಪಶಕ್ತಿಯೆ ಮಾಡುತಿಹುದೆಂದ ॥ ೮ ॥

ಮಗನೆ, ಮಾಯೆಯ ಪರಿಯನೆಲ್ಲವ । ಮಿಗಿಲೆನಲು ಪೇಳುವೆನು; ಮತ್ತೀ ।
ಜಗದುದಯವದರಿಂದಲಾದುದನೆಲ್ಲ ಪೇಳುವೆನು; ॥
ಬಗಯಲೀ ಮಿಥ್ಯಾಪ್ರಪಂಚವು । ಸಗುಣಬ್ರಹ್ಮದಲಾಗಿ ತೋರಿಪ ।
ಬಗೆಯು ಪಂಚೀಕರಣತತ್ತ್ವಗಳಿಂದ ಪೇಳುವೆನು ॥ ೯ ॥

ಆದಿಮಧ್ಯಾಂತಂಗಳಿಲ್ಲದ । ನಾದಿಯಹ ನಿರ್ಗುಣ ನಿರಂಜನ ।
ವಾದಶುದ್ಧಾವ್ಯಕ್ತ ಸಹಜಾನಂದ ಘನಮಾತ್ರ ।

---

೭. ಇಲ್ಲದ+ಅನಾದಿಯಹ. ಬ್ರಹ್ಮಗೆ–ಚತುರ್ಮುಖಬ್ರಹ್ಮನಿಗೆ.

೮. ಆವರಣ–ಮುಸುಕು; ಹಗ್ಗವನ್ನು ಹಗ್ಗವೆಂದು ತಿಳಿಯದಿರುವದು ಆವರಣ. ವಿಕ್ಷೇಪ–ಬುದ್ಧಿಯ ಹೊರಚೆಲ್ಲುವಿಕೆ; ಹಗ್ಗವನ್ನು ಹಾವೆಂದು ತಿಳಿಯುವದು ವಿಕ್ಷೇಪ.

೯. ಬಗೆಯಲು–ವಿಚಾರಮಾಡಿದರೆ. ಪಂಚೀಕರಣತತ್ತ್ವಗಳು––ಐದೈದು ಭಾಗಗಳು ಕೂಡಿ ಆಗಿರುವದೆಂಬ ವಿಚಾರಗಳು..

೧೦. ಇಲ್ಲದ+ಅನಾದಿಯಹ. ಶುದ್ಧಾವ್ಯಕ್ತ–ಶುದ್ಧವಾದ ಮತ್ತು ಅವ್ಯಕ್ತವಾದ. ವಿನಾದಮಯವಹ ಶಬ್ದ–ವಿಶೇಷವಾದ ನಾದದಿಂದ ತುಂಬಿದ ಶಬ್ದ. ಸೃಷ್ಟಿಗೆ ಮೊದಲು ಶಬ್ದವು ಉತ್ಪತ್ತಿಯಾಯಿತೆಂದು ತಾಂತ್ರಿಕರು ಹೇಳುತ್ತಾರೆ. ಈ ಶಬ್ದವನ್ನೇ ಓಂಕಾರವೆಂದು ಹೇಳಬಹುದು. ಅದರಿಂದಾದುದೀ ತೋರ್ಪ ಪ್ರಪಂಚವು–ಈ ಕಾಣುವ ಜಗತ್ತೆಲ್ಲ ಈ ಶಬ್ದದಿಂದಾಯಿತು. "ವಾಚಾರಂಭಣಂ ವಿಕಾರೋ ನಾಮಧೇಯಂ" ಎಂಬ ಛಾಂದೋಗ್ಯಶ್ರುತಿಯಂತೆ ಹೆಸರನ್ನು ಬಿಟ್ಟು ಬೇರೆ ವಸ್ತುವಿಲ್ಲದ್ದರಿಂದ ಓಂಕಾರದಿಂದಲೇ ಎಲ್ಲ ಜಗತ್ತಾಯಿತೆಂದು "ಓಮಿತ್ಯೇತದಕ್ಷರಮಿದಂ ಸರ್ವಂ ತಸ್ಯೋಪವ್ಯಾಖ್ಯಾನಂ" ಎಂದು ಮಾಂಡೂಕ್ಯಶ್ರುತಿಹೇಳುತ್ತದೆ. ಈ ನಾದದ ವಿಷಯದಲ್ಲಿ

ಬೋಧರೂಪನೊಳಾದುದೊಂದು ವಿ । ನಾದಮಯವಹ ಶಬ್ದವದರಿಂ ।
ದಾದುದೀ ತೋರ್ಪ ಪ್ರಪಂಚವು ಮಗನೆ, ಕೇಳೆಂದ　　॥ ೧೦ ॥

ತತ್ತ್ವನಿಪ ವಾಚ್ಯದಲಿ ಶಬಲತೆ । ವೆತ್ತ ಬ್ರಹ್ಮದಲಾಯ್ತು ಸದಸ ।
ದ್ವ್ಯಕ್ತಿಯಾದವ್ಯಕ್ತವದರಿಂದೀ ಮಹತ್ತತ್ತ್ವ ; ॥

---

ಸೂತಸಂಹಿತೆಯ ಟೀಕಾಕಾರರಾದ ಶ್ರೀ ಮಾಧವಾಚಾರ್ಯರು ಹೇಳಿರುವದೇನಂದರೆ— "ಪ್ರಾಣಿಗಳಿಗೆ ಕರ್ಮಫಲವನ್ನು ಕೊಡುವದಕ್ಕಾಗಿ ಸೃಷ್ಟಿಯನ್ನು ಮಾಡಬೇಕೆಂದು ಈಶ್ವರನಿಗೆ ಇಚ್ಛೆಯಾಗುವದು. ಮಾಯೆಯು ಪ್ರಾಣಿಗಳ ಕರ್ಮದ ಪರಿಪಕ್ವಾವಸ್ಥೆಯಾಗಿ ಪರಿಣಮಿಸಿದಾಗ ಈಶ್ವರನು ಅದರೊಡನೆ ಕೂಡಿಕೊಳ್ಳುವನು. ಈ ಸ್ಥಿತಿಗೆ ಬಿಂದುವೆಂದು ಹೆಸರು. ಈ ಬಿಂದುವು ಕಾಲಕರ್ಮದಿಂದ ಸ್ಥೂಲವಾದ ಬೀಜವೆಂಬ ಅಚಿದಂಶವೆಂದೂ ಸೂಕ್ಷ್ಮವಾದ ನಾದವೆಂಬ ಚಿದಚಿನ್ಮಿಶ್ರಾಂಶವೆಂದೂ ಜೀವನ ಮತ್ತು ಈಶ್ವರನ ಸ್ವರೂಪವಾದ ಪರವೆಂಬ ಚಿದಂಶವೆಂದೂ ಮೂರು ಭಾಗವಾಗಿ ಒಡೆದುಕೊಳ್ಳುವದು. ಆ ವಿಭಾಗದ ಕಾಲದಲ್ಲಿ ಶಬ್ದಬ್ರಹ್ಮವೆಂಬ ಶಬ್ದವು ಹುಟ್ಟುವದು. ಈ ಶಬ್ದಬ್ರಹ್ಮವೆಂಬ ಶಬ್ದವೇ ಜಗತ್ತಿಗೆ ಉಪಾದಾನಕಾರಣವು."

೧೧, ತತ್ತ್ವನಿಪ—ತತ್ ಎಂಬ ಶಬ್ದದ. ವಾಚ್ಯದಲಿ—ವಾಚ್ಯಾರ್ಥವಾದ ಸುಗುಣಬ್ರಹ್ಮರೂಪದಲ್ಲಿ. ಶಬಲತೆವೆತ್ತ—ಸತ್ತ್ವರಜಸ್ತಮೋಗುಣಗಳಿಂದ ಕೂಡಿದ. ಸದಸದ್ವ್ಯಕ್ತಿಯಾದ—(ಮುಂದೆ) ಸತ್ತಾದ ಮತ್ತು ಅಸತ್ತಾದ ರೂಪುಳ್ಳ. ಅವ್ಯಕ್ತ—ಪ್ರಧಾನ್ಯ, ಪ್ರಕೃತಿ. ಮಾಯೆ. ಅವ್ಯಕ್ತವೆಂದರೆ ಮಾಯೆಯೆಂದು ಮುಂದಿನ ಪದ್ಯದಲ್ಲಿ ಕವಿಯೇ ಹೇಳಿರುವನು. ಈ ಅವ್ಯಕ್ತವನ್ನು ಮೊದಲು ಮಾಡಿಕೊಂಡು ಹೇಳುವದು ಸಾಂಖ್ಯಶಾಸ್ತ್ರಕಾರರ ಪದ್ಧತಿ. ಈವಿಷಯದಲ್ಲಿ ವೇದಾಂತದ ಅಭಿಪ್ರಾಯವೆಂತೆಂದರೆ: ಈಶ್ವರನ ಇಚ್ಛೆಯಿಂದ ಜೀವರ ಭೋಗಕ್ಕೆ ಸಾಧನವಾಗಿ ಶುದ್ಧಸತ್ತ್ವಪ್ರಧಾನವೂ ತ್ರಿಗುಣಾತ್ಮಕವೂ ಆದ ಮಾಯೆಯಲ್ಲಿರುವ ತಮೋಗುಣವನ್ನು ಹೆಚ್ಚಾಗಿ ಬಳಸಿಕೊಂಡು ತ್ರಿಗುಣಾತ್ಮಕವಾದ ಆಕಾಶ ಮೊದಲಾದ ೫ ಸೂಕ್ಷ್ಮಭೂತಗಳು ಹುಟ್ಟಿದವು. ಆ ಒಂದೊಂದು ಭೂತದಲ್ಲಿಯೂ ಇರುವ ಸತ್ತ್ವಾಂಶದಿಂದ ಒಂದೊಂದು ಜ್ಞಾನೇಂದ್ರಿಯವು ಹೊರಬಿದ್ದು ಆಕಾಶದಿಂದ ಶ್ರೋತ್ರ, ವಾಯುವಿನಿಂದ ತ್ವಕ್ಕು, ತೇಜಸ್ಸಿನಿಂದ ಚಕ್ಷುಸ್ಸು, ನೀರಿನಿಂದ ನಾಲಿಗೆ, ಪೃಥ್ವಿಯಿಂದ ಘ್ರಾಣ—ಹೀಗೆ ೫ ಜ್ಞಾನೇಂದ್ರಿಯಗಳಾದವು. ಆ ಐದು ಭೂತಗಳ ಸತ್ತ್ವಾಂಶದ ಬೆರಕೆಯಿಂದ ಅಂತಃಕರಣವೇರ್ಪಟ್ಟಿತು. ಅದರಲ್ಲಿ ಸಂಶಯಾತ್ಮಕವಾದ ವೃತ್ತಿಯು ಮನಸ್ಸೆನಿಸಿತು; ನಿಶ್ಚಯಾತ್ಮಕವಾದ ವೃತ್ತಿಯು ಬುದ್ಧಿಯೆನಿಸಿತು. ಇನ್ನು ಆ ಒಂದೊಂದು ಭೂತದಲ್ಲಿಯೂ ಇರುವ ರಜೋಂಶದಿಂದ ಒಂದೊಂದು ಕರ್ಮೇಂದ್ರಿಯವು ಹೊರಬಿದ್ದು ಆಕಾಶದಿಂದ ವಾಕ್ಕು, ವಾಯುವಿನಿಂದ ಪಾಣಿ, ತೇಜಸ್ಸಿನಿಂದ ಪಾದ, ನೀ

ಮುತ್ತೆರದಹಂಕಾರವದರಿಂ, । ಸತ್ತ್ವದಿಂ ವೈಕಾರಿಕವು ತಿಳಿ, ।
ಮತ್ತೆ ತೈಜಸ ರಜದಿ, ತಾಮಸದಿಂದ ಭೂತಾದಿ || ೧೧ ||

ತನಯ ಕೇಳವ್ಯಕ್ತಮಾವುದ । ದೆನಲನಿರ್ವಚನೀಯಮಾಯೆಯೆ; ।
ಘನತೆವೊಂದಿದ ಗರ್ಭಿಣಿಯ ಪರಿಯೇ ಮಹತ್ತತ್ತ್ವ ; ||
ಜನಿತವೈಕಾರಿಕವೆ ಮನವೆಂ । ದೆನಿಪ ಕರಣವು; ತೈಜಸವೆ ಕೇ ।
ಳನಘ, ತನ್ಮಾತ್ರೆಗಳು ; ಭೂತಾದಿಗಳು ಪೃಥ್ವ್ಯಾದಿ || ೧೨ ||

---

ನಿಂದ ಪಾಯು, ಪೃಥ್ವಿಯಿಂದ ಉಪಸ್ಥ-ಹೀಗೆ ೫ ಕರ್ಮೇಂದ್ರಿಯಗಳಾದವು. ಆ ಐದೂ ಸ್ಥೂಳ ಭೂತರಜೋಂಶದ ಬೆರಕೆಯಿಂದ ಪ್ರಾಣವೇರ್ಪಟ್ಟಿತು. ಇದು ವೃತ್ತಿಭೇದದಿಂದ ಪ್ರಾಣ, ಅಪಾನ, ಸಮಾನ, ವ್ಯಾನ, ಉದಾನ,-ಎಂದು ೫ ಬಗೆಗಳಾಗಿರುವದು. ಜ್ಞಾನೇಂದ್ರಿಯಗಳೈದು, ಕರ್ಮೇದ್ರಿಯಗಳೈದು, ಪ್ರಾಣಗಳೈದು, ಮನಸ್ಸು, ಬುದ್ಧಿ- ಈ ಹದಿನೇಳೂ ಸೇರಿ ಸೂಕ್ಷ್ಮಶರೀರವೆನಿಸುವದು. ಈ ಸೂಕ್ಷ್ಮಶರೀರವಾದಮೇಲೆ ಸ್ಥೂಲಶರೀರ ಮೊದಲಾದವುಗಳೇರ್ಪಡುಪದಕ್ಕಾಗಿ ಆಕಾಶ ಮೊದಲಾದ ಪ್ರತಿಯೊಂದು ಸೂಕ್ಷ್ಮಭೂತದ ತಮಸ್ಸಿನ ಅಂಶವನ್ನೂ ಐದೈದರ ಬೆರಕೆಯಾಗಿ ಪಂಚೀಕರಣವನ್ನು ಮಾಡಲಾಯಿತು. ಪಂಚೀಕರಣವೆಂದರೆ ಪ್ರತಿಯೊಂದು ಸೂಕ್ಷ್ಮಭೂತವನ್ನೂ ಐದೈದರ ಬೆರಕೆಯ ಸ್ಥೂಲವಾಗಿ ಮಾಡುವದೆಂದರ್ಥ. ಈ ಅಭಿಪ್ರಾಯವನ್ನು ಶ್ರೀಸುರೇಶ್ವರಾಚಾರ್ಯರು ತಮ್ಮ ಪಂಚೀಕರಣವಾರ್ತಿಕದಲ್ಲಿ ಎತ್ತಿಹಿಡಿದಿದ್ದಾರೆ. ಉದಾಹರಣೆಗೆ ಆಕಾಶವೆಂಬ ಸೂಕ್ಷ್ಮಭೂತದ ಅರ್ಧಭಾಗಕ್ಕೆ ಉಳಿದ ನಾಲ್ಕು ಸೂಕ್ಷ್ಮಭೂತಗಳ ಪ್ರತಿಯೊಂದರ ಬೇಳೆಪಾಲನ್ನು ಬೆರಸಿದರೆ ಸ್ಥೂಲವಾದ ಆಕಾಶವಾಯಿತು. ಈ ಕ್ರಮದಲ್ಲಿ ೫ ಸ್ಥೂಲಭೂತಗಳಾದವು.-(ಪಂಚದಶೀ ೧-೧೮. ೨೩-೨೬, ೨೭). ಹೀಗಿದ್ದರೂ ಜಗತ್ತಿನ ಸೃಷ್ಟಿಯೇ ಆಗಿಲ್ಲವೆಂದು ಹೇಳುವ ವೇದಾಂತಿಗಳಿಗೆ ಸೃಷ್ಟಿಕ್ರಮದಲ್ಲಿ ತಾತ್ಪರ್ಯವೇ ಇಲ್ಲದ್ದರಿಂದ ಮಂದಾಧಿಕಾರಿಗಳಿಗೆ ಲಯಚಿಂತನೆಗೆ ಉಪಯೋಗವಾಗಲೆಂದು ಯಾವ ಸೃಷ್ಟಿಕ್ರಮವನ್ನು ಹಿಡಿದರೂ ಬಾಧಕವಿಲ್ಲ.

೧೨. (ಮಹತ್ತತ್ತ್ವವು) ಗರ್ಭಿಣಿಯ ಪರಿ—'ಸ ಈಕ್ಷತ ಲೋಕಾನ್ನುಸೃಜ' ಎಂಬ ಐತರೇಯಶ್ರುತಿಯಂತೆ ಭಗವಂತನು ಲೋಕಗಳನ್ನು ಸೃಷ್ಟಿಮಾಡಬೇಕೆಂನು ಬುದ್ಧಿಯಲ್ಲಿ ವಿಚಾರವನ್ನು ತಂದುಕೊಂಡನು. ಆಗಲೇ ಜಗತ್ತಿನ ಗರ್ಭಧಾರಣ [illegible]ತಾಯಿತು. ಆದ್ದರಿಂದ ಮಹತ್ತತ್ತ್ವವೆಂಬ ಬುದ್ಧಿಗೆ 'ಗರ್ಭಿಣಿಯ ಪರಿ' ಎಂ[illegible]ಕೆ ಬಂತು. "ಮಮ ಯೋನಿರ್ಮಹದ್ಬ್ರಹ್ಮ ತಸ್ಮಿನ್ಗರ್ಭಂ ದಧಾಮ್ಯಹಂ" ಎಂ[illegible] ಗೀತಾವಾಕ್ಯವೂ ಈ ಅರ್ಥವನ್ನು ಹೇಳುತ್ತದೆ. ತನ್ಮಾತ್ರೆಗಳು—ಪಂಚಭೂತಗಳ ಸೂಕ್ಷ್ಮರೂಪಗಳು.

ಮಗನೆ ರಾಜಸವಾದ ಹಮ್ಮಿನ । ಲೊಗೆದವೀ ತನ್ಮಾತ್ರೆಗಳು; ಕೇ ।
ಳ್ಳಿಗಳಿದೀ ತನ್ಮಾತ್ರೆಗಳಿನೀ ಭೂತಪಂಚಕವು; ॥
ಬಗೆಯಲದರಿಂದಾದವೀ ತೋ । ರ್ಪಗಣಿತಚರಾಚರಗಳೆಲ್ಲವು ।
ನಿಗಮವಿದ, ಪೃಥ್ವ್ಯಾದಿಭೂತಾತ್ಮಕವು ಜಗವೆಂದ ॥ ೧೩ ॥

ಬೆರೆಯೆ ಭೂತಾಂಶಗಳು ಪಂಚೀ । ಕರಣದಿಂ ಫಲಿ ಸ್ವೇದಜೋದ್ಭಿಜ ।
ನೆರೆ ಜರಾಯುಜವಂಡಜವೆನಿಪ ನಾಲ್ಕು ಪ್ರಾಣಿಗಳು; ॥
ಪುರಗಗನಜಲವನಚರಂಗಳು । ಚರಗಳಿವು; ಪಂಚೀಕೃತಂಗಳು ।
ತರುಲತಾಗುಲ್ಮಾದಿಗಳು ಕೇಳಚರವೆನಿಸುವವು ॥ ೧೪ ॥

ದಶಗುಣಾಧಿಕ ವಸುಧೆಯಿಂ ಜಲ; । ದಶಗುಣಾಧಿಕ ಜಲದಿ ಪಾವಕ ; ।
ದಶಗುಣಾಧಿಕ ವಹ್ನಿಯಿಂ ಪವಮಾನವಗರಿಂದ ॥

---

೧೪. ಪಂಚೀಕರಣ—ಐದೈದು ಭಾಗಗಳು ಕೂಡಿ ಆಗಿರುವದು. ಈ ಪಂಚೀಕರಣಪದ್ಧತಿಯು ಉಪನಿಷತ್ತಿನಲ್ಲಿಲ್ಲ. ಛಾನ್ದೋಗ್ಯೋಪನಿಷತ್ತು ಅಗ್ನಿ, ಜಲ, ಭೂಮಿ ಈ ಮೂರೇ ಭೂತಗಳ ಸೃಷ್ಟಿಯನ್ನು ಹೇಳಿ ಈ ಮೂರೂ ಕೂಡಿ ಜಗತ್ತಾಗಿರುವದಕ್ಕೆ ತ್ರಿವೃತ್ಕರಣವನ್ನುಪದೇಶಿಸಿರುತ್ತದೆ. ಇನ್ನು ಕೆಲವು ಉಪನಿಷತ್ತುಗಳಲ್ಲಿ ಆಕಾಶ, ವಾಯು ಎಂಬೆರಡು ಭೂತಗಳೂ ಸೇರಿ ಐದು ಭೂತಗಳ ಸೃಷ್ಟಿಯೂ ಉಕ್ತವಾಗಿರುವದರಿಂದ ಆ ಐದೂ ಕೂಡಿ ಜಗತ್ತಾಗಿರುವದೆಂಬ ಪಂಚೀಕರಣದ ವಿಚಾರವು ಬಳಕೆಗೆ ಬಂದಿರುವದು. ಸೃಷ್ಟಿಯಾಯಿತೆಂದು ಹೇಳುವದೇ ಶ್ರುತಿಗೆ ಸಮ್ಮತವಿಲ್ಲದ್ದರಿಂದ ಸೃಷ್ಟಿಯ ಕ್ರಮದ ವಿಷಯದಲ್ಲಿ ಒಂದೊಂದು ಶ್ರುತಿಯು ಒಂದೊಂದು ಬಗೆಯಾಗಿ ಹೇಳಿರುವದೆಂಬುದನ್ನು ಈ ಸಂದರ್ಭದಲ್ಲಿ ಮರೆಯಬಾರದು. ಸ್ವೇದಜ— ಬೆವರಿನಿಂದ ಹುಟ್ಟುವ ಹೇನು, ಕೂರೆ ಮೊದಲಾದವು, ಉದ್ಭಿಜ (ಈ ಶಬ್ದವು ಉದ್ಭಿಜ್ಜವೆಂದಿರಬೇಕು)-ಭೂಮಿಯನ್ನು ಸೀಳಿಕೊಂಡು ಮೇಲಕ್ಕೆ ಬರುವ ಸಸ್ಯಾದಿಗಳು. ಜರಾಯುಜ —ಗರ್ಭಾಶಯದಿಂದ ಹುಟ್ಟಿದ ಮನುಷ್ಯರು. ಗೋವು ಮೊದಲಾದುವು. ಅಂಡಜ— ಮೊಟ್ಟೆಯಿಂದ ಹುಟ್ಟುವ ಪಕ್ಷಿ ಮೊದಲಾದವು. ಗುಲ್ಮ—ಪೊದೆ.

೧೫. ಅಗಣಿತವೆನಿಸವ— ಇವೆಲ್ಲವುಗಳಿಗಿಂತ ಬಹಳಪಾಲು ಹೆಚ್ಚಾದ. ಸಪ್ತಾವರಣ —ಭೂಮಿ, ಜಲ, ಅಗ್ನಿ, ವಾಯು, ಆಕಾಶ, ಅಹಂಕಾರ, ಮಹತ್ತತ್ತ್ವ ಈ ಏಳು ಬಗೆಯ ಮುಸುಕು.

೧೬. ಅನ್ಯೋನ್ಯವಿಸಿಮಯರೀತಿಯಿಂ—ಪ್ರತಿಯೊಂದೂ ಉಳಿದ ಪ್ರತಿಯೊಂದರಲ್ಲಿಯೂ ಸೇರುವ ರೀತಿಯಿಂದ. ಜಾತಿಭೇದಗಳಾಗಿ— ಬೇರೆ ಬೇರೆ ಬಗೆಬಗೆಯ ವಸ್ತು

ದಶಗುಣಾಧಿಕ ಗಗನವಗಣಿತ । ವೆಸೆವ ಹಮ್ಮಿಂಘಂ ಮಹತ್ತಿಂ ।
ಪಸರಿಸಿದ ಸಪ್ತಾವರಣದಿಂದಾಯ್ತು ಮೂಲೋಕ ॥ ೧೫ ॥

ಭೂತಪಂಚಕದಂಶಗಳ ಸಂ । ಘಾತ ಕೇಳನ್ಯೋನ್ಯವಿನಿಮಯ ।
ರೀತಿಯಿಂ ಸಂಜಾತವಾದವು ತತ್ತ್ವನಿಕರಗಳು; ॥
ಈ ತೆರದೊಳದರಿಂದ ಬಹುವಿಧ । ಜಾತಿಭೇದಗಳಾಗಿ ತೋರ್ಪುವು; ।
ಭೌತಿಕವು ಪಂಚೀಕೃತಂಗಳು ಪ್ರಾಣಿಜಾತಗಳು ॥ ೧೬ ॥

ಗರುವ, ಪಂಚೀಕರಣವೆಂಬುದ । ನರುಹುವೆನು ನೀನರಿವವೋಲ್ಕಿಗೆ; ।
ಧರಣಿ ಮೊದಲಾದೈದುಭೂತವಿಭಾಗದಿಂದಾದ ॥
ಪರಿಪರಿಯ ತತ್ತ್ವಗಳ ಮೊತ್ತದ । ಪರಿಯಲಾದ ಪ್ರಯೋಜನಂಗಳ, ।
ಮೆರೆವ ತತ್ತನ್ನಾಮಗಳನಧಿದೇವತಾದಿಗಳ ॥ ೧೭ ॥

ಧರಣಿ ಮೊದಲಾದೈದು ಭೂತವ । ನೆರಡು ಭಾಗವ ಮಾಡುತದರೊಳು ।
ಭರದೊಳೈದರ್ಧಗಳಲೊಂದೊಂದರಲಿ ನಾಲ್ಕಾಗಿ ॥
ಮರಳಿ ಭಾಗವ ಮಾಡುತವುಗಳ । ಬೆರಸೆ ವಿಂಶತಿಯಾಯ್ತು; ಕೂಡಲ್ ।
ಪಿರಿಯ ಭಾಗಗಳೈದನಿಪ್ಪತ್ತೈದು ತತ್ತ್ವಗಳು ॥ ೧೮ ॥

ಬರಿಯ ನಭವೇ ಜ್ಞಾತೃ; ಭೂಕಳೆ । ವೆರೆಯೆ ಹಮ್ಮು; ಜಲಾಂಶ ಕೂಡ
ಲ್ಕರಿವ ಚಿತ್ತ; ಕೃಶಾನುಭಾಗದಿ ಬುದ್ಧಿ; ಮಾರುತನ ॥

---

ಗಳಾಗಿ. ಪ್ರಾಣಜಾತಗಳು—ಪ್ರಾಣಿಗಳ ಸಮೂಹಗಳು.

೧೮. ಬೆರಸೆ—ಮೇಲೆಹೇಳಿದ ಪೃಥ್ವಿಮೊದಲಾದವುಗಳನ್ನು ಮೊದಲು ಸರಿಯಾಗಿ ಎರಡೆರಡು ಪಾಲುಮಾಡುವದು; ಆಮೇಲೆ ಒಂದರ್ಧವನ್ನು ಬೇರೆ ಇಟ್ಟುಕೊಂಡು ಇನ್ನೊಂದರ್ಧವನ್ನು ಸರಿಯಾಗಿ ನಾಲ್ಕು ಪಾಲುಮಾಡುವದು; ಇದರಿಂದ ಅರ್ಧಪಾಲು ಗಳು ೫ ಬೇಳೆಪಾಲುಗಳು ೨೦ ಸೇರಿ ೨೫ ಆಯಿತು; ಇವುಗಳ ಬೆರಕೆಯಿಂದ ೨೫ ತತ್ತ್ವ ಗಳಾದವೆಂದು ಮುಂದಿನ ಪದ್ಯದಿಂದ ೨೬ನೆ ಪದ್ಯದವರೆಗೆ ಹೇಳಲಾಗುವದು. ಇದೊಂದು ಬಗೆಯು ಪಂಚೀಕರಣ. ಇಲ್ಲಿ ಪಂಚಿಕರಣವೆಂದರೆ ಐದ್ವೈದು ವೃತ್ತಿಗಳುಳ್ಳ ಐದ್ವೈದು ಜಾತಿ ಯವುಗಳನ್ನು ಮಾಡುವದೆಂದಿಟ್ಟುಕೊಳ್ಳಬೇಕು. ಈ ಕ್ರಮವನ್ನು ಶ್ರೀ ತೋಟಕಾಚಾರ್ಯ ರೆಂಬ ಹೆಸರಿನವರು ಪಂಚೀಕರಣಪದ್ಧತಿಯೆಂಬ ನಾಲ್ಕೇ ಪುಟದ ಚಿಕ್ಕ ಗ್ರಂಥದಲ್ಲಿ ಎತ್ತಿ ಹಿಡಿದು ಇದನ್ನು ಲಯಚಿಂತನೆಗೆ ವಿನಿಯೋಗಮಾಡಿ ತೋರಿಸಿದ್ದಾರೆ.

೧೯. ಹೊರೆಗಲಸಿ—(ವಾಯುವಿನ ಅಂಶದ) ಭಾರವನ್ನು ಕೂಡಿಕೊಂಡು. ಜ್ಞಾತೃ

ಹೊರೆಗಲಸಿ ಮನವಾಯಿತಂತಃ । ಕರಣವೈದೀ ವ್ಯೋಮತತ್ತ್ವದ ।
ಪರಮಸಾರದಲುದಿಸಿದವು·ಶುಕಯೋಗಿ ಕೇಳೆಂದ ॥ ೧೯ ॥

ವ್ಯಾನ ಕೇವಲ ಮಾರುತನಲೀ । ಪ್ರಾಣ ಭೂಭಾಗದಲಿ ; ಜಲದಲ ।
ಪಾನ ; ವಹ್ನಿಯ ಕಳೆಯಲಾದುದುದಾನವದರಿಂದ ॥
ಈ ನಭದಲಿ ಸಮಾನವಾದುದು ; । ನೂನವಿದು ಪ್ರಾಣಾದಿಪಂಚಕ ; ।
ಮಾನನಿಧಿ, ಪವಮಾನತತ್ತ್ವದ ಸಾರದಿಂದಾಯ್ತು ॥ ೨೦ ॥

ನೇತ್ರ ಬರಿಯನಲನಲಿ; ವಸುಧಾ। ಮಾತ್ರ ಬೆರೆಯಲು ಘ್ರಾಣ;ಬುಧಜನ;
ಪಾತ್ರ ಕೇಳ್ಳೆ ಜಿಹ್ವೆ ಜಲಭಾಗದಲಿ ; ಪವನಾಂಶ ॥
ಗಾತ್ರದಲಿ ವರ್ತಿಸುವ ತ್ವಕ್ಕದು ; । ಶ್ರೋತ್ರ ಗಗನದ ಕಳೆಯಲಾದುದು ।
ನೇತ್ರ ಮೊದಲಾದಿಂದ್ರಿಯಂಗಳು ವೀತಿಹೋತ್ರನಲಿ ॥ ೨೧ ॥

ಬರಿಯ ಜಲದಿಂ ರಸ; ವಸುಧೆಗಳೆ । ವೆರೆಯೆ ಗಂಧ;ಧನಂಜಯಾಂಶದ ।
ಉರುವ ರೂಪು ; ಸ್ಪರ್ಶವಾದುದು ಪವನಭಾಗದಲಿ ; ॥
ಮೆರೆವ ಶಬ್ದ ತ್ರಿದಶಮಾರ್ಗದ । ನೆರವಿನಿಂತೀ ಐದುವಿಷಯಗ ।
ಳರಿಯೆ ಜಲತತ್ತ್ವದೊಳಗುದಿಸಿದವೆಂದನಾ ಮುನಿಪ ॥ ೨೨ ॥

---

ಜೀವನು. ಇವನನ್ನು ಇಲ್ಲಿ ಕರಣಗಳ ಸಾಲಿನಲ್ಲಿ ಸೇರಿಸಲಾಗಿದೆ. ಇವನು ಮನಸ್ಸಿನಂತೆ ಕರಣನಲ್ಲದಿದ್ದರೂ ಕ್ರಿಯೆಗೆ ಕಾರಕನಾದ್ದರಿಂದ ಕರಣವೆಂದಿರಬಹುದೆಂದು ತೋರುತ್ತದೆ. ಅಥವಾ ಇದು ಉಪಾಧಿಯ ಕಡೆಗೆ ಲಕ್ಷ್ಯವನ್ನು ಕೊಟ್ಟು ಆಡಿರುವ ಮಾತೆಂದು ತಿಳಿಯಬಹುದು.

೨೦. ನೂನ—ನಿಜ. ಪ್ರಾಣಪಂಚಕವು ವಾಯುತತ್ತ್ವದ ಸಾರವಾದ್ದರಿಂದ ಭೌತಿಕವೇ ಹೊರತು ಆತ್ಮನಲ್ಲವೆಂದು ತಾತ್ಪರ್ಯ.

೨೧. ಗಾತ್ರ—ಶರೀರ. ಜ್ಞಾನೇಂದ್ರಿಯಪಂಚಕವೂ ಅಗ್ನಿತತ್ತ್ವದ ಸಾರವಾದ್ದರಿಂದ ಭೌತಿಕವೇ ಹೊರತು ಆತ್ಮನಲ್ಲವೆಂದು ತಾತ್ಪರ್ಯ. ವೀತಿಹೋತ್ರನಲಿ ಎಂಬದರ ಮುಂದೆ 'ಆದವು' ಎಂಬ ಕ್ರಿಯಾಪದವನ್ನು ಅಧ್ಯಾಹಾರಮಾಡಿಕೊಳ್ಳಬೇಕು.

೨೨. ಧನಂಜಯಾಂಶದಲಿ— ಅಗ್ನಿಯ ಅಂಶದಿಂದ. ಉರುವ— ಶ್ರೇಷ್ಠವಾದ. ತ್ರಿದಶಮಾರ್ಗ— ಆಕಾಶ. ನೆರವಿಂ (+ಇಂತು + ಈ ಐದು)—ಸಹಾಯದಿಂದ. ಪಂಚವಿಷಯಗಳು ಜಲತತ್ತ್ವದ ಸಾರವಾದ್ದರಿಂದ ಭೌತಿಕವೇ ಹೊರತು ಆತ್ಮನಲ್ಲವೆಂದು ತಾತ್ಪರ್ಯ.

ಬರಿಯ ಧರೆಯಿಂ ಪಾಯು; ಜಲಗಳಿ। ಬೆರೆಯಲಾಯಿತು ಗುಹ್ಯ; ಪಾವಕ ।
ನಿರದಲಾದುದು ಪಾದ ; ಪಾಣಿಯು ಪವನಭಾಗದಲಿ ; ॥
ನಿರುತ ಗಗನಾಂಶದಲಿ ವಾಕ್ಕೀ । ತೆರದಿ ಕರ್ಮೇಂದ್ರಿಯಗಳಿವು ವಿ ।
ಸ್ತರಿಸಿದವು ಭೂತತತ್ತ್ವದಿಂದಲಿ ಮಗನೆ ಕೇಳೆಂದ ॥ ೨೩ ॥

ಧರೆ ಜಲಾನಲವಾಯುಗಗನದ । ಬರಿಯ ಭಾಗದಲಾದವಿಂತೀ ।
ಪರಿಯ ಪಾಯುರಸಾಕ್ಷಿವ್ಯಾನಜ್ಞಾತೃವಿಂತೈದು ; ॥
ಬೆರೆಯೆ ನಭದಂಶದೊಳಗಾದವು । ನಿರುತವೀ ವಾಕ್ಛಬ್ದಶ್ರೋತ್ರಗ ।
ಳುರೆ ಸಮಾನವುಮಿಂತು ತತ್ತ್ವಚತುಷ್ಟಯಗಳಿಂದ ॥ ೨೪ ॥

ಬೆರೆಯೆ ಮರುದಂಶಗಳು ಮಿಗೆ ತ್ವಕ್। ಸ್ಪರುಶ ಪಾಣಿ ಮನಸ್ಸು; ವಹ್ನಿಯ।
ನೆರೆಯಲಾದುದು ರೂಪುಪಾದವುದಾನಬುದ್ಧಿಗಳು ; ॥
ಉರುವ ಜಲದಂಶದಲಿ ಗುಹ್ಯವು । ನಿರುತ ಜಿಹ್ವಾಪಾನಚಿತ್ತವು ; ।
ಧರೆಯ ಭಾಗದಿ ಗಂಧನಾಸಾಪ್ರಾಣಹಮ್ಮುಗಳು ॥ ೨೫ ॥

ಕರಣವೈದು, ಪ್ರಾಣಪಂಚಕ, । ನಿರುತವಿಂದ್ರಿಯವೈದು, ವಿಷಯೋ ।
ತ್ಕರುಷವೈದೆಲೆಮಗನೆ, ಕರ್ಮೇಂದ್ರಿಯಗಳಿಂತೈದು ॥

---

೨೩. ಪಾಯು—ಗುದಸ್ಥಾನ (ಪುರೀಷಸ್ಥಾನ). ಜಲ (ದ) + ಕಳೆ. ಗುಹ್ಯ—ಭಗ, ಶಿಶ್ನ (ಮೂತ್ರಸ್ಥಾನ). ಇರದಲಿ— ಇರುವಿಕೆಯಿಂದ. ಕರ್ಮೇಂದ್ರಿಯಪಂಚಕವೂ ಭೂತತತ್ತ್ವದ ಸಾರವಾದ್ದರಿಂದ ಭೌತಿಕವೇ ಹೊರತು ಆತ್ಮನಲ್ಲವೆಂದು ತಾತ್ಪರ್ಯ.

೨೪. ಬೆರೆಯೆ—(ಧರೆ, ಜಲ, ಅನಲ, ವಾಯು, ಗಗನ ಇವುಗಳಿಗೆ) ಕೂಡಿದರೆ (ಈ ಪದ್ಯದ ಮತ್ತು ಮುಂದಿನ ಪದ್ಯದ ತಾತ್ಪರ್ಯವು ಹಿಂದಿನ ೧೯ ರಿಂದ ೨೩ ರ ವರೆಗಿನ ಪದ್ಯಗಳ ಸಾರವು).

೨೫. ಬೆರೆಯೆ— ಉಳಿದ ನಾಲ್ಕು ಭೂತಗಳೊಡನೆ ಸೇರಲಾಗಿ. ವಹ್ನಿಯ ನೆರೆಯಲಿ—(ಉಳಿದ ನಾಲ್ಕು ಭೂತಗಳೊಡನೆ ಸೇರಿದ) ಅಗ್ನಿಯ ಅಂಶದಿಂದ. (ಮುಂದೆ) ಜಲದಂಶದಲಿ, ಧರೆಯಭಾಗದಿ ಎಂಬುದಕ್ಕೂ ಹೀಗೆಯೇ ಅರ್ಥ. ಈ ವಾಯು. ಮೊದಲಾದ ಭೂತಗಳ ಅಂಶಗಳು ಯಾವ ಯಾವ ಇತರ ಭೂತಗಳೊಡನೆ ಸೇರಿ ಯಾವ ಯಾವ ವಸ್ತುವಾದವೆಂಬುದು ೧೯ ರಿಂದ ೨೩ ರ ವರೆಗಿನ ಪದ್ಯಗಳಲ್ಲಿ ಬಂದಿದೆ.)

೨೬. ಕರಣವೈದು— ಜ್ಞಾತೃ, ಅಹಂಕಾರ, ಚಿತ್ತ, ಬುದ್ಧಿ, ಮನಸ್ಸು. ಇವುಗಳ ಉತ್ಪತ್ತಿಯ ವಿಚಾರವು ೧೯ ನೆಯ ಪದ್ಯದಲ್ಲಿದೆ. ಜ್ಞಾತೃ ತಿಳಿಯುವವನು—ನಿಜವಾಗಿ

ಧರೆಜಲಾನಲವಾಯುಗಗನದ । ಬೆರಕೆಯಾಗಲು ಕೇಳು ಪಂಚೀ ।
ಕರಣವಾದವು ; ತಿಳಿಯಲಿಪ್ಪತ್ತೈದು ತತ್ತ್ವಗಳು || ೨೬ ||

ಮಗನೆ ಗಗನಕೆ ಶಬ್ದವೊಂದೇ, । ಬಗೆಯೆ ಶಬ್ದಸ್ಪರ್ಶ ವಾಯುವಿ ।
ಗೊಗೆದ ವಹ್ನಿಗೆ ತಿಳಿಯೆ ಶಬ್ದಸ್ಪರ್ಶರೂಪುಗಳು, ||
ನೆಗಳಿ ಶಬ್ದಸ್ಪರ್ಶರೂಪುಗ । ಳೊಗೆವ ರಸವುಂ ಜಲಕೆ, ಪೃಥ್ವಿಗೆ ।
ಮಿಗಿಲು ಶಬ್ದಸ್ಪರ್ಶ ಮೊದಲಾದೈದು ವಿಷಯಗಳು || ೨೭ ||

ಕರಣಗಳಿಗಧಿದೇವತೆಗಳಾ । ಹರಿಪರಬ್ರಹ್ಮೇಂದುಗಳು ; ದಿ ।
ಙ್ಮರುತ ದಿನಪತಿ ವರುಣರಶ್ವಿನಿಯರ್ಕಳಿಂದ್ರಿಯಕೆ ; ||

---

ತಿಳಿಯುವವನು ಕರಣವಲ್ಲದಿದ್ದರೂ ವಿಷಯಜ್ಞಾನಕ್ಕೆ ತಿಳಿಯುವವನೊಬ್ಬನು ಬೇಕಾಗುವದು. ಆದ್ದರಿಂದ ಆದನ್ನು ಕರಣವೆಂದದ್ದಾಗಿದೆ. ಆ ಜ್ಞಾತೃಸ್ವರೂಪವು ಭೌತಿಕವಾದ್ದರಿಂದ ಆತ್ಮನಲ್ಲವೆಂಬುದನ್ನು ನೆನಪಿನಲ್ಲಿಡಬೇಕು. ಈ ಗ್ರಂಥದ ಕವಿಯ ಶಿಷ್ಯರಾದ ಕೈವಲ್ಯನವನೀತಕಾರರೂ ಜ್ಞಾತೃವನ್ನು ಕರಣಗಳ ಲೆಕ್ಕದಲ್ಲಿ ಒಡಿದಿದ್ದಾರೆ. ಸಾಮಾನ್ಯವಾಗಿ ಒಳಗಿನ ಕರಣಗಳೆಂದರೆ ಮನಸ್ಸು, ಬುದ್ಧಿ, ಚಿತ್ತ, ಅಹಂಕಾರ ಈ ನಾಲ್ಕೆ. ಜ್ಞಾತೃವನ್ನು ಕರಣವೆನ್ನುವ ಒಂದು ಪಂಥವೇ ಇದೆ.

೨೭. ಆಕಾಶಾದಿಯಾಗಿ ಭೂತಗಳಿಗೆ ಒಂದೊಂದು ಗುಣವು ಹೆಚ್ಚಾಗಿರುವದೆಂದು ತಾತ್ಪರ್ಯ.

೨೮. ಹರಿಪರಬ್ರಹ್ಮೇಂದುಗಳು--ಹರಿ ಚಿತ್ತಕ್ಕೆ, ಪರ ಅಹಂಕಾರಕ್ಕೆ, ಬ್ರಹ್ಮ ಬುದ್ಧಿಗೆ, ಇಂದು (ಚಂದ್ರ) ಮನಸ್ಸಿಗೆ. (ಚಿತ್ತಕ್ಕೆ ಅಧಿದೈವವು ಜೀವವೆಂದು ಕೈವಲ್ಯನವನೀತಕಾರರ ಮತವು ; ಶ್ರೀ ಸುರೇಶ್ವರಾಚಾರ್ಯರು ಪಂಚೀಕರಣವಾರ್ತಿಕದಲ್ಲಿ ಆ ಜೀವವನ್ನೆ ಕ್ಷೇತ್ರಜ್ಞನೆಂದು ಕರೆದಿದ್ದಾರೆ. ಬುದ್ಧಿಗೆ ಅಧಿದೈವವು ಬೃಹಸ್ಪತಿಯೆಂದು ಕೈವಲ್ಯನವನೀತಕಾರರ ಮತವು. ಶ್ರೀ ಸುರೇಶ್ವರಾಚಾರ್ಯರ ಅಭಿಪ್ರಾಯವೂ ಹೀಗೆಯೇ ಇರುವದು. ಪಂಡಿತ ಪೀತಾಂಬರ ಪುರುಷೋತ್ತಮಜಿಯವರು ತಮ್ಮ ವಿಚಾರ ಚಂದ್ರೋದಯದಲ್ಲಿ ಬುದ್ಧಿಯ ಅಧಿದೈವವನ್ನು ಬ್ರಹ್ಮವೆಂದೇ ಒಡಿದಿರುವರು). ದಿಙ್ಮರುತ . . ಇಂದ್ರಿಯಕೆ—ದಿಕ್ಕು ಶ್ರೋತ್ರಕ್ಕೆ, ಮರುತ ತ್ವಕ್ಕಿಗೆ, ದಿನಪತಿ ಕಣ್ಣಿಗೆ, ವರುಣ ಜಿಹ್ವೆಗೆ, ಅಶ್ವಿನಿಯರು ಘ್ರಾಣಕ್ಕೆ. (ಕೈವಲ್ಯನವನೀತಕಾರರ ಅಭಿಪ್ರಾಯವೂ ಹೀಗೆಯೇ ಇರುವದು ; ಆದರೆ ಘ್ರಾಣದ ಅಧಿದೈವವು ಪೃಥ್ವಿಯೆಂದು ಪಂಚೀಕರಣವಾರ್ತಿಕಕಾರರಾದ ಶ್ರೀ ಸುರೇಶ್ವರಾಚಾರ್ಯರ ಮತ). ಅಗ್ನಿ . . ಕರ್ಮೇಂದ್ರಿಯಗಳಿಗೆ–ಅಗ್ನಿ ವಾಕ್ಕಿಗೆ, ಇಂದ್ರ ಪಾಣಿಗೆ. ವಿಷ್ಣು ಪಾದಕ್ಕೆ, ರುದ್ರ ಗುಹ್ಯಕ್ಕೆ, ಮೃತ್ಯು ಪಾಯು

ಗರುವ, ಕೇಳಗ್ನೀಂದ್ರವಿಷ್ಣುಗ । ಉರುವ ರುದ್ರನು ಮೃತ್ಯುವಿವು ದೇ ।
ವರುಗಳಾ ಕರ್ಮೇಂದ್ರಿಯಂಗಳಿಗೆಂದು ಪೇಳುವರು ॥ ೨೮ ॥

ಭೂತಪಂಚಕದೇವತೆಗಳು ವಿ । ಧಾತೃ ಹರಿ ರುದ್ರೇಶ ಮತ್ತು ಮ ।
ಹಾತಿಶಯುದ ಸದಾಶಿವಾಖ್ಯರು ; ಕಠಿನ, ದ್ರವವುಷ್ಣ ॥
ಧೌತಪಿವರಗಳವರ ಧರ್ಮ ; ಮ । ಹೀತಲಾಂಶದೊಳಸ್ಥಿ ಚರ್ಮವು ।
ಮಾ ತೆರದೊಳಿಹ ರೋಮ ನಾಡಿಯು ಮಾಂಸವಾಗಿಹವು ॥ ೨೯ ॥

ರಕ್ತಮೂತ್ರಶ್ಲೇಷ್ಮಮೇಧ । ಶ್ಶುಕ್ಲ ಜಲದಂಶಗಳು ; ಕ್ಷುಧೆ, ತೃಷೆ ।
ಮತ್ತೆ ನಿದ್ರಾಲಸ್ಯ, ಸ್ತ್ರೀಸಂಗತಿಗಳಿಂತೈದು ॥
ವ್ಯಕ್ತವಗ್ನ್ಯಂಶಗಳು ; ಪಾರುವ, । ಸುತ್ತಿ ಸುಳಿವ, ನಿರೋಧಬಡಿಪ, ಸ ।
ಮಸ್ತಕ್ರಿಯೆ ಮರುದಂಶ ; ಕಾಮಾದಿಗಳು ಗಗನಾಂಶ ॥ ೩೦ ॥

ತತ್ತ್ವನಿಕರಗಳಿಲ್ಲ ಚೇತನ । ವೆತ್ತು ಚೈತನ್ಯಾತ್ಮನಿಂದಲಿ ।
ತತ್ತದುಚಿತಗಳಾದ ಚೇಷ್ಟೆಗಳಿಂದ ಚರಿಸುವವು ; ॥

---

ವಿಗೆ. (ಗುಹ್ಯಕ್ಕೆ ಅಧಿದೇವತೆ ಬ್ರಹ್ಮನೆಂಬು ಕೈವಲ್ಯನವನೀತಕಾರರ ಮತ್ತು ಶ್ರೀ ಸುರೇಶ್ವರಾಚಾರ್ಯರ ಅಭಿಪ್ರಾಯ).

೨೯. ಭೂತಪಂಚಕದೇವತೆಗಳು– ವಿಧಾತೃ (ಬ್ರಹ್ಮ) ಪೃಥ್ವಿಗೆ, ಹರಿ ನೀರಿಗೆ ರುದ್ರ ತೇಜಕ್ಕೆ, ಈಶ್ವರ ವಾಯುವಿಗೆ, ಸದಾಶಿವನು ಆಕಾಶಕ್ಕೆ. 'ಕಠಿನ . . ಧೌತ ಎಂಬ ಕಡೆ 'ಕಠಿಣ ವಹಿಷ್ಟ್ರಪರು । ಭೂತ' ಎಂದು ಅನೇಕ ಪ್ರತಿಗಳಲ್ಲಿದೆ. ಈ ಮಾತುಗಳಿಗೆ ಅರ್ಥವೂ ಅನ್ವಯವೂ ಆಗುವದಿಲ್ಲ. ಭೂತಗಳ ಧರ್ಮಗಳನ್ನು ಹೇಳುವದಕ್ಕೆ ಹೊರಟಿರುವ ಈ ಸ್ಥಲದಲ್ಲಿ ಕೆಲವು ಹಳೇ ಪ್ರತಿಗಳಲ್ಲಿ 'ಕಠಿಣದ್ರವ ಉಷ್ಣ' ಎಂದು ಕಣ್ಣಿಗೆ ಬಿತ್ತು. ಭೂಮಿಗೆ ಕಠಿನ ಧರ್ಮವೂ ನೀರಿಗೆ ದ್ರವಧರ್ಮವೂ ಅಗ್ನಿಗೆ ಉಷ್ಣಧರ್ಮವೂ ಹೊಂದಿತು. ಮುಂದೆ 'ಭೂತ' ಎನ್ನುವದು ವಾಯುಧರ್ಮಕ್ಕೆ ಹೊಂದಲಿಲ್ಲ. ಆದ್ದರಿಂದ ಈ ಗ್ರಂಥದ ಸಂಸ್ಕೃತ ಭಾಷಾಂತರವಾಗಿ ಇನ್ನೂ ಕೈಬರಹದಲ್ಲಿಯೇ ಇರುವ ಪುಸ್ತಕದಲ್ಲಿ ಈ ಕಠಿನ ಮೊದಲಾದ ಶಬ್ದಗಳ ಸಾಲಿನಲ್ಲಿದ್ದ 'ಧೌತ' ಎಂಬ ಶಬ್ದವನ್ನು ಇಲ್ಲಿ ಸೇರಿಸಿದೆ. 'ಧೌತ' ಎಂದರೆ ಚೊಕ್ಕಟಮಾಡುವದೆಂದರ್ಥವನ್ನಿಟ್ಟುಕೊಳ್ಳಬೇಕು. ಇದು ವಾಯುವಿನ ಧರ್ಮ. ಇನ್ನು ವಿವರವೆಂದರೆ ಶಬ್ದವು ಹುಟ್ಟುವದಕ್ಕೆ ಆಧಾರವಾದ ಪೊಳ್ಳು. ಇದು ಆಕಾಶದ ಧರ್ಮ. ಅವರ—ಆ ಪಂಚಭೂತಗಳ. ಆ ತೆರದ— ಬಹು ಸೂಕ್ಷ್ಮವಾದ.

ಪ್ರತ್ಯಗಾತ್ಮಜ್ಯೋತಿ ತತ್ತ್ವದ । ಮೊತ್ತದೊಳು ಪ್ರತಿಫಲಿಸಲವೆ ಕೇ ।
ಳುತ್ತಮನೆ ಅಧಿದೇವತೆಗಳೆಂದಾದುದಭಿಧಾನ　　|| ೩೧ ||

ಪುತ್ರ ಕೇಳೈ ಕೋಶಪಂಚಕ । ತತ್ತ್ವಮಯವಾಗಿಪ್ಪುದದು ತಾ ।
ನಿತ್ತೆರದ ತನುಗಳಲಿ ಸೂಕ್ಷ್ಮಸ್ಥೂಲವೆಂದೆನಿಸಿ ; ||
ಸತ್ತ್ವರಜತಮವಾದಹಂಕೃತಿ । ವೃತ್ತಿಯೆಲ್ಲವ ತಿಳಿದು ನೋಡಲು ।
ಕರ್ತೃಕರ್ಮಕ್ರಿಯೆಗಳಾಗಿ ಪ್ರವರ್ತಿಸುತ್ತಿಹವು　　|| ೩೨ ||

ಸದಮಲಾನಂದೈಕರಸವನು । ಪೊದೆದು, ತಾನೇ ನಾಮರೂಪಂ ।
ಬುದ ತಳೆದು, ಬ್ರಹ್ಮಾಂಡತಂಡದಿ ಹಬ್ಬಿ ಪಸರಿಸುತ, ||
ಬುದುಬುದಾಕಾರದಲಿ ತೋರುವ । ದದು ಕಣಾ ಮಾಯಾವಿಲಾಸವು ; ।
ವಿಧಿಹರಿಹರಾದಿಗಳಿದನು ಬಗೆಯದೆಯೆ ಮೋಹಿಪರು　　|| ೩೩ ||

ಗುರುವೆ ಚಿತ್ತಯಿಸಯ್ಯ, ಮಾಯೆಯ । ಹರಿಹರಬ್ರಹ್ಮಾದಿಗಳು ಗೆಲ ।
ಲರಿದೆನಲು ನಿಸ್ಸೀಮನಿರವಧಿಯಾದ ಸಂಸೃತಿಯ ||

---

೩೦. ಕಾಮಾದಿಗಳು—ಕಾಮ, ಶೋಕ, ಭಯ, ಮೋಹ, ಕ್ರೋಧ—ಮೊದಲಾದವು.

೩೧. ಪ್ರತ್ಯಗಾತ್ಮಜ್ಯೋತಿ—ಒಳಗಿನ ಆತ್ಮನ ಪ್ರಭೆ. ತತ್ತ್ವದ—ಭೂಮಿ ಮೊದಲಾದ ಭೂತತತ್ತ್ವಗಳ. ಪ್ರತಿಫಲಿಸಲು—ಆತ್ಮನು ತತ್ತ್ವಗಳ ಉಪಾಧಿಯುಳ್ಳವನಾಗಿ ಕಾಣಲು ಅಥವಾ ತತ್ತ್ವಗಳೇ ಆತ್ಮನೆಂಬಂತೆ ಕಾಣಿಸಿಕೊಳ್ಳಲು. ಅವೆ—ಆ ತತ್ತ್ವಗಳು ಪಾಧಿಯುಳ್ಳ ಚೈತನ್ಯಗಳೆ (ಇವೇ ಅಧಿದೇವತೆಗಳೇ ಹೊರತು ಇವಕ್ಕೆ ಬೇರೆಯಾಗಿ ಒಂದೊಂದು ವ್ಯಕ್ತಿಯಿರುವದಿಲ್ಲವೆಂಬುದನ್ನೂ ಒಂದು ಪಕ್ಷ ಎಲ್ಲಿಯಾದರೂ ಒಂದೊಂದು ರೂಪವನ್ನು ಹೇಳಿದ್ದರೆ ಅದು ಉಪಾಸನಾರ್ಥವಾಗಿ ಹೇಳಿದ್ದೆಂಬುದನ್ನೂ ನೆನಪಿನಲ್ಲಿಡಬೇಕು.)

೩೨. ತತ್ತ್ವಮಯವಾಗಿಪ್ಪುದು—ಭೂಮಿ ಮೊದಲಾದ ಭೂತತತ್ತ್ವಗಳಿಂದಾದದ್ದಾಗಿರುವದು. ಇತ್ತೆರದ—ಎರಡು+ತೆರದ. ಅಹಂಕೃತಿವೃತ್ತಿ— ಅಹಂಕಾರದ ವೃತ್ತಿಗಳು.

೩೩. ಪೊದೆದು—ಹೊದ್ದುಕೊಂಡು. ತಾನೆ—ಆ ಮಾಯೆಯೆ. ಬುದುಬುದಾಕಾರದಲಿ—ನೊರೆಯುಳ್ಳ ತೆರೆಯ ಹಾಗೆ. ಬಗೆಯದೆಯೆ— ತಿಳಿಯದೆಯೆ. ಮೋಹಿಪರು—ಮೋಹಗೊಳ್ಳುವರು.

ಶರಧಿಯನು ನಾವೆಂತು ದಾಂಟುವೆ । ವರೆಮುರುಳುಗಳು, ತಾಮಸರು, ಕಾ ।
ಪುರುಷರಾಶಾಪಾಶಬದ್ಧರು ವಿಷಯವಿಹ್ವಲರು ॥ ೩೪ ॥

ಕೇಳು ಶುಕಯೋಗೀಂದ್ರ, ಮಾಯೆಯ। ಮೂಲಮುಟ್ಟೆ ವಿಚಾರಿಸಲು ಪುಸಿ।
ಕಾಳಲಾ ಅವಿಚಾರಸಿದ್ಧ ; ವಿಚಾರಿಸಿದೊಡಿಲ್ಲ ; ॥
ಹೇಳಹೇಳಲು ದೊಡ್ಡಿತಾಗಿ ವಿ । ಶಾಲವೆನಲುಚ್ಚಂಗಿಕೋಟೆಯ ।
ವೋಲು ಹೆಚ್ಚುವದಾಲಿಸಿದರೊನ್ಮೊಳನು ಕೇಳಿಂದ ॥ ೩೫ ॥

---

೩೪. ಅಂದು—ಅಸಾಧ್ಯ. ನಿಸ್ಸೀಮ ನಿರವಧಿ—ಈ ಎರಡು ಶಬ್ದಗಳಿಗೂ ಕೊನೆ ಇಲ್ಲದ್ದೆಂದು ಒಂದೇ ಅರ್ಥ. ಆದರೆ ನಿಸ್ಸೀಮ ಎಂಬುವನ್ನು ದೇಶದಲ್ಲಿ ಕೊನೆಯಿಲ್ಲದ್ದೆಂಬರ್ಥಕ್ಕೂ ನಿರವಧಿ ಎಂಬುದನ್ನು ಕಾಲದಲ್ಲಿ ಕೊನೆಯಿಲ್ಲದೆಂಬರ್ಥಕ್ಕೂ ಉಪಯೋಗಮಾಡಿಕೊಳ್ಳಬಹುದು. ಮಾಯೆಗೆ ದೇಶದ ಕೊನೆಯಿಲ್ಲವೆಂದರೆ ಬ್ರಹ್ಮಲೋಕವನ್ನು ಕೂಡ ಬಿಟ್ಟಿಲ್ಲವೆಂದರ್ಥ. ಅದಕ್ಕೆ ಕಾಲದ ಕೊನೆಯಿಲ್ಲವೆಂದರೆ ಕಾಲ ಮೊದಲಾದವುಗಳ ಸತ್ಯತ್ವಕಲ್ಪನೆಯು ಇರುವವರೆಗೂ ಅದು ಬಿಟ್ಟುಹೋಗುವದಿಲ್ಲವೆಂದರ್ಥ. ಕಾಪುರುಷರು—ಕೆಟ್ಟಜನರು. ವಿಷಯವಿಹ್ವಲರು—ಹೊರಗಣ ಭೋಗಸಾಧನಗಳಲ್ಲಿ ತೊಳಲುವವರು.

೩೫. ಪುಸಿಕಾಳಲಾ—ಜಳ್ಳಾದ ಕಾಳಿನಂತೆ ! ಅಥವಾ ಸುಳ್ಳಾದದ್ದು (ಪುಸಿ) ಮತ್ತು ತುಚ್ಛವಾದದ್ದು (ಕಾಳು-ಕಾಡು). ಉಚ್ಚಂಗಿಕೋಟೆಯವೋಲು – ಬಳ್ಳಾರಿ ಜಿಲ್ಲೆಯ ಹರಪನಹಳ್ಳಿ ತಾಲ್ಲೂಕಿನಲ್ಲಿ ಉಚ್ಚಂಗೀದುರ್ಗವೆಂಬ ಒಂದು ದೊಡ್ಡ ಊರಿದೆ. ಇದು ಇತಿಹಾಸದಲ್ಲಿ ಪ್ರಸಿದ್ಧವಾದ ಸ್ಥಲ. ೧೧ ನೇ ಶತಮಾನದ ಮಧ್ಯದಿಂದ ೧೨ ನೇ ಶತಮಾನದ ಕೊನೆಯವರೆಗೂ ಆ ಪ್ರಾಂತವು ಪಾಂಡ್ಯರಾಜರ ಆಳಿಕೆಗೊಳಪಟ್ಟಿತ್ತೆಂದೂ ಮಲ್ಲಪಾಂಡ್ಯದೇವ, ವಿಜಯಪಾಂಡ್ಯದೇವ ಮೊದಲಾದವರು ಪ್ರಖ್ಯಾತರಾಗಿದ್ದರೆಂದೂ ಆದ್ದರಿಂದ ಆ ಭಾಗಕ್ಕೆ ಪಾಂಡ್ಯರಾಜ್ಯ ಅಥವಾ ಪಾಂಡುಮಂಡಲವೆಂದು ಹೆಸರಾಗಿತ್ತೆಂದೂ ಈ ಕಾಲದಲ್ಲಿ ದಾವಣಗೆರೆಯ ಹತ್ತಿರದಲ್ಲಿರುವ ಉಚ್ಚಂಗಿದುರ್ಗವು ಅದರ ರಾಜಧಾನಿಯಾಗಿತ್ತೆಂದೂ ಮಿ॥ ರೈಸ್‌ಸಾಹೇಬರು ಮೈಸೂರ ಗೆಜಿಟಿಯರಿನಲ್ಲಿ ಚಿತ್ರದುರ್ಗ ಡಿಸ್ಟ್ರಿಕ್ಟಿನ ಇತಿಹಾಸವನ್ನು ಬರೆಯುವಾಗ ಬರೆದಿರುತ್ತಾರೆ. ಈ ಉಚ್ಚಂಗೀದುರ್ಗವು ದಾವಣಗೆರೆಗೆ ೧೦ ಮೈಲಿಗಳ ದೂರದಲ್ಲಿದೆ. ಇಲ್ಲಿರುವ ಕೋಟೆಯು ಸುಮಾರು ನಾಲ್ಕು ಮೈಲು ಸುತ್ತಳತೆ ಇರಬಹುದು. ಈ ಕೋಟೆಯಲ್ಲಿ ಹಿಂದಿನ ಅಶ್ವಶಾಲೆ, ಗಜಶಾಲೆ, ಗರಡಿಯ ಮನೆ, ಉಯ್ಯಾಲೆಯ ಕಂಬ ಮೊದಲಾದವುಗಳ ಗುರ್ತುಗಳಿನ್ನೂ ಕಾಣುತ್ತಿವೆ. ಈ ಕೋಟೆಯನ್ನು ಬಿಟ್ಟರೆ ೩೬ ಮೈಲು ದೂರದಲ್ಲಿರುವ ಚಿತ್ರದುರ್ಗದವರೆಗೂ ಇಂಥ ಕೋಟೆ ಇಲ್ಲ. ಇಲ್ಲಿರುವ ಕೋಟೆಯು

ನೀಲರುಚಿಯಭ್ರದಲಿ, ದೀಪ | ಜ್ವಾಲೆಯೊಳು ಕಾಳಿಕೆಯು, ಮತ್ತೆ ಚ |
ಥಾಳಿಸುವ ಚಂದ್ರಮನ ನಡುವೆ ಕಳಂಕು ತೋರ್ಪಂತೆ ||
ಕಾಳೆನಿಪ ಪುಸಿಮಾಯೆ ಬ್ರಹ್ಮನೊ | ಳಾಳಿ ಹೊಕ್ಕಾಶ್ರಯಿಸಿ ಮೆರೆವುದು ; |
ಹೇಳಲೇನದು ಮಿಥ್ಯ ; ತಥ್ಯದವೋಲು ತೋರುವವು || ೩೬ ||

ಇದಮೆನುತ್ತಿದಿರಿಟ್ಟ ಕತದಿಂ | ದದು ದಿಟದವೋಲಿರ್ಪುದಂತದ |
ವಿಧಿಪ ಗುರುಮುಖದಿಂದ ತಿಳಿಯಲದಿಲ್ಲವೆನಿಸುವದು ; ||
ಸದಸದಾತ್ಮಿಕೆಯೆನಿಪ ಮಾಯೆಯು | ಹದವನಿರ್ವಚನೀಯವದರಿಂ |
ದದರ ಪರಿಯನು ಪೇಳೆ ದುರ್ಘಟವೆನಿಸಿ ತೋರುವವು || ೩೭ ||

ಹರಿಹರಬ್ರಹ್ಮರುಗಳಿಂತೀ | ಪರಿಯೊಳಿಹ ಮಾಯೆಯನು ಗೆಲುವಡೆ |
ಹಿರಿದು ಯತ್ನವ ಮಾಡುತಜಪಾಯೋಗ ಮೊದಲಾದ ||
ಪರಿಪರಿಯ ಸಾಧನಗಳಿಂದದ | ಪರಿಹರಿಸಲರಿಯದೆ ನಿರಂತರ |
ಶರಣುಹೊಕ್ಕೇ ಬದುಕಿದರು ತತ್ಪಾದಪಂಕಜವ || ೩೮ ||

---

ದೂರಕ್ಕೆ ಹಿರಿದಾಗಿಯೂ ಒಳಹೊಕ್ಕರೆ ಕಿರಿದಾಗಿಯೂ ಕಾಣುವದೆಂದು ಈಗಲೂ ಅದನ್ನು ನೋಡಿದವರು ಹೇಳುತ್ತಿರುತ್ತಾರೆ. ಈ ಅಭಿಪ್ರಾಯವು ಈ ಪದ್ಯದ ಕಲ್ಪನೆಗೂ ಒಪ್ಪುತ್ತದೆ. ಇದು ಉಚ್ಚಶೃಂಗವೆಂದು ಪುರಾಣಪ್ರಸಿದ್ಧವೂ ಆದ ಕ್ಷೇತ್ರ.

೩೬. ನೀಲರುಚಿಯು (ಕಪ್ಪು ಬಣ್ಣವು) + ಅಭ್ರದಲಿ (ಆಕಾಶದಲ್ಲಿ). ಕಾಳು—ಕಾಡು, ಕೀಳು. ಮಿಥ್ಯ ; ತಥ್ಯದವೋಲು—ವಿಚಾರದೃಷ್ಟಿಯಿಂದ ನೋಡಿದರೆ ಅದು ಕಾಣದೆ ಹೋಗುವದರಿಂದ ಅದನ್ನು ಸುಳ್ಳೆಂದು ಹೇಳಬೇಕು. ಈ ಅಭಿಪ್ರಾಯವು ಮುಂದಿನ ಪದ್ಯದಲ್ಲಿರುವದು. ಸ್ಥೂಲದೃಷ್ಟಿಗೆ ಕಾಣುವದರಿಂದ ಅದನ್ನು ನಿಜವೆಂದು ಹೇಳಬೇಕು.

೩೭. ಇದಂ—ಇದು. (ಅದ+) ವಿಧಿಪ—ಆ ಮಾಯೆಯ ಮೇಲೆ ಆಜ್ಞೆಯನ್ನು ನಡೆಸುವಂಥ (ಮಾಯೆಯನ್ನು ದಾಟಿದಂಥ ಎಂದು ತಾತ್ಪರ್ಯ. ಅಂಥ ಗುರುಮುಖದಿಂದ ಕೇಳಿದರೆ ಮಾತ್ರ ಮಾಯೆಯ ಮಿಥ್ಯಾತ್ವವು ಮನಕ್ಕೆ ಅಳವಡುವದು). ಸದಸದಾತ್ಮಿಕೆ—ನಿಜವಾದದ್ದು ಮತ್ತು ಸುಳ್ಳಾದದ್ದು. ಅನಿರ್ವಚನೀಯ—ಹೀಗೆಂದು ಹೇಳುವದಕ್ಕೆ ಬರುವದಿಲ್ಲ.

೩೮. ಅಜಪಾಯೋಗ—೨೧,೬೦೦ ಸಂಖ್ಯೆಯ ಶ್ವಾಸೋಚ್ಛ್ವಾಸಗಳು ಯಾವಾಗಲೂ ಹಂಸಮಂತ್ರವನ್ನುಚ್ಚರಿಸುತ್ತಿರುವವೆಂದು ಅನುಸಂಧಾನಮಾಡುತ್ತಿರುವದು. ತತ್ಪಾದಪಂಕಜವ— ಆ ಮಾಯಾಸ್ವರೂಪಳಾದ ಆದಿಶಕ್ತಿಯ ಪಾದಕಮಲಗಳನ್ನು

ಅದು ನಿಮಿತ್ತ್ತಿಲೆ ಮಗನೆ ಅಣಿಮಾ । ದ್ಯಧಿಕಸಿದ್ಧಿಯಿನಾವಳೊಬ್ಬಳ ।
ಪದಪಯೋಜರಜಃಪ್ರಭಾವಮಹಾಪ್ರಸಾದವನು ॥
ಮುದದಿ ಪಡೆದದರಿಂದ ಲೋಕ । ಕ್ಕಧಿಕರೆನಿಸಿಯೆ ಮೆರೆದರಾ ವಿಧಿ ।
ಮಧುರಿಪುಪ್ರಮುಖರು ಕಣಾ ಸತ್ತ್ವಾದಿಗುಣಯುತರು ॥ ೩೯ ॥

ಬ್ರಹ್ಮಸನ್ನಿಧಿಯಲ್ಲಿ ಮಾಯಾ । ಧರ್ಮವಹ ಸರ್ಗಸ್ಥಿತಿಯು ಲಯ ।
ಕರ್ಮಗಳು ತೋರುವವು ಮಿಥ್ಯಾಜಾತಭೂತಗಳು ; ॥
ಹಮ್ಮು ಹೃತ್ಕರ್ಮೇಂದ್ರಿಯಂಗಳ । ನೆಮ್ಮಿ ಜಾಗ್ರತ್ಸ್ವಪ್ನಗಳ ತಾ ।
ಬ್ರಹ್ಮದಾಧಾರದಲಿ ತೋರ್ದಡುಗುವದು ಕೇಳೆಂದ ॥ ೪೦ ॥

ತನ್ನನರಿಯದವಿದ್ಯೆಯಿಂದು । ತ್ತಪ್ನನಾದುದು ಜಗವದೆಂತೆನೆ ।
ತನ್ನ ನಿದ್ರೆಯ ವಶದಿ ಮಲಗಿರೆ ಕನಸು ತೋರ್ಪಂತೆ ; ॥
ತನ್ನ ನಿಜವರಿದಾಗ ತಾನೇ । ಕಾರ್ಣವದವೋಲ್ಸಕಲವೆಲ್ಲವು ।
ತನ್ನೊಳಡಗಲು ಪೂರ್ಣನದ್ವಯಬ್ರಹ್ಮನಾಗಿಹೆನು ॥ ೪೧ ॥

ಈವಿಧದ ಮಾಯೆಯನು ಗೆಲುವಡೆ । ಭಾವಶುದ್ಧಿಯನೊಂದಿ ಗುರುವಿನ
ಪಾವನಾಂಘ್ರಿಯ ಪಿಡಿದು, ತತ್ಕಾರುಣ್ಯವನು ಪಡೆದು, ॥

---

೩೯. ಅಣಿಮಾದಿಗಳು–ಅಣಿಮಾ (ಸಣ್ಣದು), ಮಹಿಮಾ (ದೊಡ್ಡದು), ಗರಿಮಾ (ಭಾರ), ಲಘಿಮಾ (ಹಗುರ), ಪ್ರಾಪ್ತಿ (ಬೆರಳ ತುದಿಗೆ ಚಂದ್ರನಾದರೂ ಇಳಿದು ಬರುವದು), ಪ್ರಾಕಾಮ್ಯ (ತನ್ನ ಮನಸ್ಸಿಗೆ ಬಂದದ್ದೆಲ್ಲ ಆಗುವದು), ಈಶತ್ವ (ಪ್ರಭುತ್ವ), ವಶಿತ್ವ, (ಸ್ಥಾವರಗಳು ಕೂಡ ಆಜ್ಞೆಯನ್ನು ನಡೆಸುವದು). (ಪಡೆದು।) ಅದರಿಂದ––ಆ ಸಿದ್ಧಿಯಿಂದ. ಸತ್ತ್ವಾದಿಗುಣಯುತರು–ಸತ್ತ್ವದ ಮೇಲಿನ ಅಧಿಕಾರಿ ವಿಷ್ಣು, ರಜೋಗುಣದ ಅಧಿಕಾರಿ ಬ್ರಹ್ಮ, ತಮೋಗುಣದ ಅಧಿಕಾರಿ ಈಶ್ವರ.

೪೦. ಮಿಥ್ಯಾಜಾತಭೂತಗಳು–ಹುಟ್ಟಿರುವಂತೆ ಸುಳ್ಳುಸುಳ್ಳಾಗಿಕಾಣುವವುಗಳು. ಹೃತ್ಕರ್ಮೇಂದ್ರಿಯಂಗಳ– ಹೃದಯವನ್ನೂ ಕರ್ಮೇಂದ್ರಿಯಗಳನ್ನೂ. ನೆಮ್ಮಿ–ಆಶ್ರಯಿಸಿ. ಜಾಗ್ರತ್ಸ್ವಪ್ನಗಳ–ಹೃದಯವನ್ನಾಶ್ರಯಿಸಿ ಸ್ವಪ್ನವನೂ ಕರ್ಮೇಂದ್ರಿಯಗಳನ್ನಾಶ್ರಯಿಸಿ ಎಚ್ಚರವನ್ನೂ.

೪೧. ತನ್ನನರಿಯದ+ಅವಿದ್ಯೆಯಿಂದ. ತಾನು (ತನಗಿಂತ ಬೇರೆಯಾದ ಜಗತ್ತನ್ನು ನೋಡುತ್ತಿದ್ದ ತಾನು) + ಏಕಾರ್ಣವದವೋಲ್– ಅಖಂಡವಾದ ಸಮುದ್ರದ ಹಾಗೆ,

ಜೀವಪರಮಾತ್ಮೈಕ್ಯವೆನಿಪ ಮ । ಹಾವಿಶೇಷಾನುಭವವಲ್ಲದೆ ।
ಭಾವಿಸಲು ಬೇರೊಂದುಪಾಯವದಿಲ್ಲ ನೋಡೆಂದ ॥ ೪೨ ॥

ಗುರುವಿನುಪದೇಶದಲಿ ಮಾಯಾ । ವರಣವಳಿದು, ಮತಾಂತರದಿ ಸಂ ।
ಚರಿಪ ಸಂಶಯ ಹೋಗಿ, ಕರ್ಮಗಳೆಲ್ಲ ಲಯವಾಗಿ ॥
ಪರಿಹರಿಸಿ ಜನ್ಮಗಳ, ಜರೆ ಮರೆ । ಮರಣ ಕನಸಿನ ಬಂಧ ಕೆಟ್ಟೆ ।
ಚ್ಚರದ ಸಹಜಾನಂದಪದದೊಳಗೊಂದಿ ಸುಖಿಯಹನು ॥ ೪೩ ॥

ಮಗನೆ ಮೂಲಪ್ರಕೃತಿಯೆನಿಸುವ। ವಿಗಡವಹ ಮಾಯಾಗುಣಂಗಳೊ ।
ಳೊಗೆದವಿದ್ಯಾವಿದ್ಯೆಯೆನಿಸುವುಪಾಧಿಯಿಂದಾದ ॥
ಸಗುಣವಹ ಜೀವೇಶ್ವರತ್ವವ । ನಿಗಮವೇ ಹೇಳುವದುಪಾಧಿಯ ।
ಬಗೆಯಳಿಯಲದ್ವೈತಶುದ್ಧ ಬ್ರಹ್ಮವಾಗಿಹುದು ॥ ೪೪ ॥

ಗ್ರಾಮದೇಶದ್ವೀಪದಲ್ಲಿಹ । ವ್ಯೋಮವೊಂದೇ ಪರಿಯಲಿರ್ಪಂ ।
ತೀ ಮನುಜ ಪಶು ಪಕ್ಷಿ ತರು ಲತೆ ದೇವ ದೈತ್ಯರಲಿ ॥

---

೪೩. ಮತಾಂತರದಿ– ಆ ಮತವು ನಿರ್ದುಷ್ಟವಾದದ್ದು, ಈ ಮತವು ನಿರ್ದುಷ್ಟವಾದದ್ದು ಎಂದು ಬೇರೆ ಬೇರೆ ಮತಗಳಲ್ಲಿ ಗುಣಭ್ರಾಂತಿಯಿಂದ. ಕರ್ಮಗಳೆಲ್ಲ– ಪಾಪಕರ್ಮಗಳೂ ಪುಣ್ಯಕರ್ಮಗಳೂ ಕೂಡ (ಪಾಪಕರ್ಮಗಳು ದುಃಖಾಧಿಕವಾದ ಜನನವನ್ನು ಕೊಟ್ಟರೆ ಪುಣ್ಯಕರ್ಮಗಳು ಸುಖಾಧಿಕವಾದ ಜನ್ಮವನ್ನು ಕೊಡುವವು. ಎಷ್ಟೇ ಸುಖಾಧಿಕವಾದರೂ ದುಃಖದ ಮಿಶ್ರಣವಿಲ್ಲದೆ ಇರುವದಿಲ್ಲ. ಈ ಅಭಿಪ್ರಾಯವನ್ನು ಈ ಕವಿಯೇ ೨ ಅ. ೩೨ ಪ. ದಲ್ಲಿ ಹೇಳಿದ್ದಾನೆ. ಆದ್ದರಿಂದ "ಜ್ಞಾನಾಗ್ನಿಃ ಸರ್ವಕರ್ಮಾಣಿ ಭಸ್ಮಸಾತ್ಕುರುತೇಽರ್ಜುನ" ಎಂಬ ಗೀತೋಕ್ತಿಯಂತೆ ಪಾಪಕರ್ಮಗಳೂ ಪುಣ್ಯಕರ್ಮಗಳೂ ಎರಡೂ ಲಯವಾಗುವವು). ಪರಿಹರಿಸಿ ಜನ್ಮಗಳ— ಹುಟ್ಟುಸಾವುಗಳ ಬಂಧನವನ್ನು ಕಳಚಿಕೊಂಡು. ಕನಸಿನಬಂಧ–ಜರೆ, ಮರೆ, ಮರಣ ಈ ಬಂಧಗಳೆಲ್ಲಾ ಕನಸಿನ ಬಂಧದಂತೆ ಇರುವವು. ಎಚ್ಚರವಾಗುತ್ತಲೆ ಕನಸಿನ ದುಃಖದ ಸಂಬಂಧವು ತನಗೆ ತಪ್ಪುವಂತೆ ಜ್ಞಾನವಾಗುತ್ತಲೆ ಜರೆ ಮೊದಲಾದವುಗಳ ಸಂಬಂಧವು ತನಗೆ ತಪ್ಪುವದು.

೪೪. ಒಗೆದ+ಅವಿದ್ಯಾ+ವಿದ್ಯೆ+ಎನಿಸುವ+ ಉಪಾಧಿಯಿಂದ (ಸಂಬಂಧದಿಂದ)+ ಆದ. ಜೀವೇಶ್ವರತ್ವ— ಅವಿದ್ಯೆಯ ಉಪಾಧಿಯಿಂದ ಜೀವತ್ವ, ವಿದ್ಯೆಯ ಉಪಾಧಿಯಿಂದ ಈಶ್ವರತ್ವ. ನಿಗಮವೇ ಹೇಳುವದು— "ಜೀವೇಶಾವಾಭಾಸೇನ ಕರೋತಿ ಮಾಯಾ (ವಿದ್ಯಾ) ಚಾವಿದ್ಯಾ ಚ ಸ್ವಯಮೇವ ಭವತಿ"— ಶ್ರುತಿ.

ಭೂಮಿ ಮೊದಲಾಗಿರ್ದ ಭೂತ । ಸ್ತೋಮದಲಿ ಮಣಿಗಣದ ಸೂತ್ರದ ।
ನೇಮದಲಿ ಸಮನಾಗಿ ತೋರುವದೇ ಪರಬ್ರಹ್ಮ || ೪೫ ||

ತರುಲತಾದಿಗಳಲ್ಲಿ ರಸ, ಜೀ । ವರುಗಳಲಿ ಚೇತನ, ಸಮೀರನ ।
ಲುರುವ ಬಲ, ಜಲದಲ್ಲಿ ಸ್ವಾದ, ಸುಗಂಧ ಪೃಥ್ವಿಯಲಿ, ||
ತರಣಿಪಾವಕಚಂದ್ರಮರೊಳತಿ । ಭರತತೇಜಃಪುಂಜವಾ ಅಂ ।
ಬರದಿ ಶಬ್ದವದೆನಿಸಿ ತೋರುವದೇ ಪರಬ್ರಹ್ಮ || ೪೬ ||

ಬಿಂಬಪ್ರತಿಬಿಂಬಗಳು ಕಲ್ಪಿತ । ವಂಬರದ ದಿನಮಣಿಯೊಳಾ ಪರಿ ।
ಬೆಂಬಳಿಯಲೇ ಕಲ್ಪಿತರು ಜೀವೇಶರೆಂಬುವರು ; ||
ತುಂಬಿತುಳುಕದ ನಿಸ್ತರಂಗಚಿ । ದಂಬುಧಿಯೊಳೀ ಪರಿಯೊಳೆಸೆದು ವಿ ।
ಜೃಂಭಿಸುತ್ತಿಹುದಾವುದದು ತಾನೇ ಪರಬ್ರಹ್ಮ || ೪೭ ||

ಘಟಮಠಗಳೊಳಗಿಪ್ಪ ಬಯಲನು । ಘಟಮಠದ ಬಯಲೆಂದು ಪೇಳ್ವರು;।
ಘಟಮಠಗಳಳಿದಾಗ ಬಯಲಿಗೆ ಹೇಳೆ ಹೆಸರಿಲ್ಲ ; ||

---

೪೫. ಮಣಿಗಣದ ಸೂತ್ರದ—"ಮಯಿ ಸರ್ವಮಿದಂ ಪ್ರೋತ್ರಂ ಸೂತ್ರೇ ಮಣಿಗಣಾ ಇವ" ಎಂಬ ಗೀತೋಕ್ತಿಯಂತೆ, ಎಲ್ಲ ಮಣಿಗಳೊಳಗೂ ವ್ಯಾಪಿಸಿರುವ ಸೂತ್ರದ ಹಾಗೆ (ಬ್ರಹ್ಮವು ಎಲ್ಲೆಡೆಯಲ್ಲಿಯೂ ವ್ಯಾಪಿಸಿರುವದೆಂದರ್ಥ).

೪೬. ಜೀವರುಗಳಲಿ ಚೇತನ—"ಜೀವನಂ ಸರ್ವಭೂತೇಷು" ಮತ್ತು "ಭೂತಾನಾಮಸ್ಮಿ ಚೇತನಾ" ಎಂಬ ಗೀತೋಕ್ತಿಯಂತೆ. ಜಲದಲ್ಲಿ ಸ್ವಾದ—"ರಸೋಽಹಮಪ್ಸು" ಎಂಬ ಗೀತೋಕ್ತಿಯಂತೆ. ಸುಗಂಧ ಪೃಥ್ವಿಯಲಿ—"ಪುಣ್ಯೋ ಗಂಧಃ ಪೃಥಿವ್ಯಾಂ ಚ" ಎಂಬ ಗೀತೋಕ್ತಿಯಂತೆ. ತರಣಿ . . ತೇಜಃಪುಂಜ—"ಪ್ರಭಾಸ್ಮಿ ಶಶಿಸೂರ್ಯಯೋಃ" ಮತ್ತು "ತೇಜಶ್ಚಾಸ್ಮಿ ವಿಭಾವಸೌ" ಎಂಬ ಗೀತೋಕ್ತಿಯಂತೆ. ಅಂಬರದಿ ಶಬ್ದ—"ಶಬ್ದಃ ಖೇ" ಎಂಬ ಗೀತೋಕ್ತಿಯಂತೆ.

೪೭. ಕಲ್ಪಿತವು—ಹುಟ್ಟುಗಟ್ಟಿದ್ದು. ಬಿಂಬ ಪ್ರತಿಬಿಂಬ ಎಂಬ ಎರಡೂ ಆಕಾಶದಲ್ಲಿರುವ ಸೂರ್ಯನಲ್ಲಿ ಕಲ್ಪಿತನೆಂದರ್ಥ. ಪ್ರತಿಬಿಂಬವು ಕಲ್ಪಿತವೆಂಬದನ್ನು ಎಲ್ಲರೂ ಮಾನಗಂಡಿದ್ದಾರೆ. ಬಿಂಬವೂ ಕೂಡ ಕಲ್ಪಿತವೆ. ಹೇಗೆಂದರೆ ಪ್ರತಿಬಿಂಬ ವೊಂದಿರುವದರಿಂದ ಅದರಿಂದ ಬಿಡಿಸಿ ತಿಳಿಯುವದಕ್ಕಾಗಿ ಸೂರ್ಯನನ್ನು ಬಿಂಬವೆನ್ನ ಬೇಕೇ ಹೊರತು ಮತ್ತೇನೂ ಇಲ್ಲ. ಬೆಂಬಳಿಯಲೇ—ಬೆನ್ನ ಹಿಂದೆಯೇ. ಜೀವೇಶರೆಂಬುವರು—ಜೀವವು ಪ್ರತಿಬಿಂಬವು ; ಈಶ್ವರನು ಬಿಂಬವು; (ಶುದ್ಧವಸ್ತು ಬ್ರಹ್ಮ). ನಿಸ್ತರಂಗಚಿದಂಬುಧಿಯೊಳ್—ಅಲೆಯಿಲ್ಲದ ಜ್ಞಾನಸಮುದ್ರದಲ್ಲಿ.

ಅಟಮಟದ ಬ್ರಹ್ಮಾಂಡತತಿಗಳು । ಸಟೆಯು ಪಿಂಡಾಂಡಗಳಡಗಲಾ ।
ದಿಟವನಂತಿಂತೆನಲಶಕ್ಯವದೇ ಪರಬ್ರಹ್ಮ　　　　|| ೪೮ ||

ಆವಿಗೆಯ ಬಲುಗಿಚ್ಚಿನುರಿಯೊಳು । ಬೇವ ಮಡಿಕೆಗಳಂತೆ ಬ್ರಹ್ಮಾಂ ।
ಡಾವಳಿಗಳನು ತಿಳಿ ದುರೀಕ್ಷ್ಯಮಹಾಪ್ರಕಾಶದಲಿ ॥
ತೀವಿ ತೋರುತ್ತಿರ್ಪುವಾವಗ । ತೀವ್ರತೇಜೋರಾಶಿಯಾದ ಮ ।
ಹಾವಿಭವವಿಸ್ಫೂರ್ತಿಯದು ಕೇಳ್ಪೈ ಪರಬ್ರಹ್ಮ　　　　|| ೪೯ ||

ಬಿಸಿಲು ನಭದಲಿ ತೋರದೆಯೆ ಪಸ । ರಿಸಿ ಪುರಗ್ರಾಮಂಗಳಲಿ ತೋ ।
ರ್ದೆಸೆವವೊಲ್ ಪರಿಪೂರ್ಣನಾಗಿಯುಮಿಾ ಚರಾಚರದಿ ॥
ಮಸಗಿ ಕೆಲವೆಡೆಯಲ್ಲಿ ತೋರದೆ । ಮಿಸುಪ ಕರಣಾದಿಯಲಿ ತೋರು ।
ತ್ತೆಸೆವ ತೇಜೋರಾಶಿಯದು ಕೇಳ್ಪೈ ಪರಬ್ರಹ್ಮ　　　　|| ೫೦ ||

ಅಣುವಿನೊಳಗಣುವೆನಿಸಿತೋರ್ಪುದು ; । ಗುಣನಿಧಿಯೆ ತನುವಿನೊಳು
ಲಿಣಿಕೆಯಲಿ ಕಾಣಿಸುತಲಿಹುದು ಮಹಾಪ್ರಮಾಣದಲಿ ; । [ತನುವವೊ ।
ಗಣಿಸಪೋಗೆ ಮಹತ್ತೆನಿಸಿ, ಸ । ನ್ಮಣಿಗಳೊ ು ನಭದಂತೆ ಪೊಳೆವು ।
ತ್ತಿಣಿಕೆ ಮಿಾರಿದನಂತವೇ ಕೇಳ್ಪೈ ಪರಬ್ರಹ್ಮ　　　　|| ೫೧ ||

---

೪೮. ಅಟಮಟದ-ಸುಳ್ಳಾದ. ಅಂತಿಂತೆನಲು-- ಜೀವನೆಂದಾಗಲಿ ಈಶ್ವರನೆಂದಾಗಲಿ ಹೇಳಲು. (ಬ್ರಹ್ಮಾಂಡದ ಉಪಾಧಿಯುಳ್ಳವನು ಈಶ್ವರ ; ಪಿಂಡಾಂಡದ ಎಂದರೆ ಶರೀರದ ಉಪಾಧಿಯುಳ್ಳವನು ಜೀವ ; ಬ್ರಹ್ಮಾಂಡವೂ ಪಿಂಡಾಂಡವೂ ಲಯವಾದ ಮೇಲೆ ಯಾವ ಹೆಸರೂ ಇಲ್ಲ).

೪೯. ದುರೀಕ್ಷ್ಯಮಹಾಪ್ರಕಾಶದಲಿ–ನೋಡುವದಕ್ಕೆ ಅಶಕ್ಯವಾದಷ್ಟು ಉಜ್ಜ್ವಲವಾದ ಪ್ರಕಾಶವಲ್ಲಿ. ತೀವ್ರ–ತೀಕ್ಷ್ಣವಾದ (ದಟ್ಟವಾದ ಎಂದರ್ಥ).

೫೦. ಬಿಸಿಲು ನಭದಲಿ ತೋರದೆಯೆ–ಆಕಾಶದಲ್ಲಿ ಯಾರೂ ಇಲ್ಲವಾದ್ದರಿಂದ ಅಲ್ಲಿ ಬಿಸಿಲಿರುವದು ಯಾರಿಗೂ ತೋರುವದಿಲ್ಲ. ಕರಣಾದಿಯಲಿ–ಅಂತಃಕರಣ ಮೊದಲಾದವುಗಳಲ್ಲಿ.

೫೧. ಅಣುವಿನೊಳಗಣುವೆನಿಸಿ–“ ಅಣೋರಣೀಯಾನ್ ” ಎಂಬ ಶ್ರುತಿಯಂತೆ ಬಹಳ ಸಣ್ಣದಾಗಿಯೂ. ಮಹತ್ತೆನಿಸಿ–“ ಮಹತೋ ಮಹೀಯಾನ್ ” ಎಂಬ ಶ್ರುತಿಯಂತೆ ಬಹಳ ದೊಡ್ಡದಾಗಿಯೂ ಲೋಕದಲ್ಲಿರುವ ಎಲ್ಲ ಅಣುವಾದ ಮತ್ತು ಮಹತ್ತಾದ ವಸ್ತುಗಳ ಇರುವಿಕೆಯೂ ಆತ್ಮನಿಂದಲೆ ಆದ್ದರಿಂದ ಆತ್ಮನು ಬಹಳ ಅಣು

ಕ್ಷೀರಸಾಗರದೊಳಗೆ ಬಹು ಸಂ । ಚಾರವಡೆದಿಹ ಜಲಚರಂಗಳು ।
ಕ್ಷೀರದಾಧಾರದಲಿ ಜೀವಿಸಿ ವಿಹರಿಸುವ ತೆರದಿ ॥
ಭೂರಿಸುರನರತಿರ್‍ಯಗಾದಿಶ । ರೀರಿಗಳು ಜೀವಿಸುವರಾವನ ।
ಪಾರಸುಖಸಾಗರದೊಳದು ಕೇಳ್ಳೈ ಪರಬ್ರಹ್ಮ ॥ ೫೨ ॥

ಪ್ರಾಣಿಗಳೊಳೊಳಹೊರಗೆ ಮಿಗೆ ಸ । ತ್ಪ್ರಾಣವಾಗಿಯೆ ಚರಿಸುವ ಜಗ ॥
ತ್ಪ್ರಾಣನಂದದಿ ಸಕಲದೊಳು ಚೈತನ್ಯರೂಪದಲಿ ॥
ಪ್ರಾಣವೆನಿಸುತ್ತವನು ಪೊದ್ದದೆ, । ಕೇಣವಿಲ್ಲದೆ ತೋರುತಿಹ ನಿ ।
ರ್ವಾಣ ಸರ್ವವ್ಯಾಪಿಯೇ ಕೇಳ್ಳೈ ಪರಬ್ರಹ್ಮ ॥ ೫೩ ॥

ಸೂಜಿಗಲ್ಲಿನ ಸನ್ನಿಧಿಯಲಾ । ಸೂಜಿಗಳು ಚಲಿಸುತ್ತಲಿರ್ದೊಡೆ ।
ಸೂಜಿಗಲ್ಲಿಗೆ ಚಲನವೆಂಬ ವಿಕಾರವಿಲ್ಲವಲಾ ! ॥
ಈ ಜಗಜ್ಜೀವರುಗಳಾವನ । ತೇಜದಲಿ ವ್ಯವಹರಿಸರಾ ನಿ ।
ರ್ವ್ಯಾಜ ನಿರುಪಾಧಿಕ ನಿರಂಜನವೇ ಪರಬ್ರಹ್ಮ ॥ ೫೪ ॥

ಒಂದರಿವೆ ಪುಸಿನಾಮರೂಪುಗ । ಳಿಂದ ನಾನಾಬೇಧವಾಗಿಯೆ ।
ನಿಂದು ಜೀವೇಶ್ವರ, ಸಮಷ್ಟಿವ್ಯಷ್ಟಿ ಮೊದಲಾದ ॥

---

ವಾದವನು ಮತ್ತು ಬಹಳ ಮಹತ್ತಾದವನು. ಇಷ್ಟೇ ಹೊರತು ಅವನು ಅಣುವೂ ಅಲ್ಲ ಮಹತ್ತೂ ಅಲ್ಲ. ಅನಂತ–ಮಹತ್ತ್ವಕ್ಕೂ ಅಣುತ್ವಕ್ಕೂ ಎರಡಕ್ಕೂ ಕೊನೆಯಿಲ್ಲದ್ದು. (ವಸ್ತುವಿನ ಪರಿಮಾಣವೇ ಬ್ರಹ್ಮಕ್ಕೆ ತೋರುವದೇ ಹೊರತು ಬ್ರಹ್ಮಕ್ಕೆ ಪರಿಮಾಣವಿಲ್ಲವೆಂದು ತಾತ್ಪರ್ಯ).

೫೨. ಭೂರಿ–ಬಹಳ. ತಿರ್‍ಯಗಾದಿ– ಕೀಳು ಪ್ರಾಣಿಗಳೇ ಮುಂತಾದ. ಜೀವಿಸುವರಾವನ। ಅಪಾರಸುಖಸಾಗರದೊಳ್–"ಏತಸ್ಯೈವಾನಂದಸ್ಯಾನ್ಯಾನಿ ಭೂತಾನಿ ಮಾತ್ರಾಮುಪಜೀವಂತಿ" ಎಂಬ ಶ್ರುತಿಯಂತೆ.

೫೩. ಸತ್ಪ್ರಾಣವಾಗಿಯೆ–(ಬಲವಾದ) ಉತ್ತಮವಾದ ಪ್ರಾಣಸ್ವರೂಪನಾಗಿ.) ಜಗತ್ಪ್ರಾಣನಂದದಿ–ವಾಯುವಿನ ಹಾಗೆ (ವಾಯು ಎಲ್ಲೆಲ್ಲಿಯೂ ವ್ಯಾಪಿಸಿರುವ ಹಾಗೆ. ಅವನು ಪೊದ್ದದೆ–ಆ ಯಾವ ವಸ್ತುಗಳ ಸೋಂಕೂ ಇಲ್ಲದೆ. ನಿರ್ವಾಣ– ಮೋಕ್ಷಸ್ವರೂಪನಾದ.

೫೪. ಈ ಜಗಜ್ಜೀವರುಗಳು–ಈ ಜಗತ್ತೂ ಮತ್ತು ಜೀವರುಗಳೂ. ನಿರ್ವ್ಯಾಜ–ತನ್ನ ಇರುವಿಕೆಯು ಮತ್ತೊಂದು ನಿಮಿತ್ತವನ್ನು ಅವಲಂಬಿಸದೆ ಇರುವದು. ನಿರುಪಾಧಿಕ–ಯಾವದರ ಸಂಬಂಧವೂ ಇಲ್ಲದ. ನಿರಂಜನ–ಯಾವದರ ಲೇಪವೂ ಇಲ್ಲದೆ ಇರುವ.

ಚಂದದಲಿ ತೋರುತ್ತಲಿಹುದದ । ರಿಂದಲೊಬ್ಬನೆ ಮಾವ, ಮೈದುನ, ।
ತಂದೆಯೆನಿಪಂತದ್ವಯವು ಕೇಳೈ ಪರಬ್ರಹ್ಮ ॥ ೫೫ ॥

ಪರಕೆ ಪರವೆನಿಪಾ ಕ್ಷರಾಕ್ಷರ । ಪುರುಷರೀ ಪ್ರಕೃತಿಯಲಿ ತೋರಲು; ।
ನಿರುತವುಂ ಕ್ಷೇತ್ರಜ್ಞಕ್ಷೇತ್ರಗಳಾಗಿ ದೃಗ್ದೃಶ್ಯ ॥
ಸ್ಫುರಿಸುತಿಹ ಜಡಜೀವರೂಪಿನ । ಲಿರುತ ಭೋಗ್ಯವು ಭೋಕ್ತೃವೆಂಬೀ ।
ಪರಿಯಲಿಹರವರಿಂದಲುತ್ತಮನೇ ಪರಬ್ರಹ್ಮ ॥ ೫೬ ॥

ದ್ರವ ಮಧುರ ಶುಭ್ರತ್ವದೊಡಲೆನಿ।ಸುವದು, ತಾ ಗೋಕ್ಷೀರವೊಂದೇ ।
ವಿವರಿಸಲ್ಕಾ ತೆರದಿ ಸಚ್ಚಿತ್ಸುಖಮಯಾತ್ಮಕವು ॥
ಹವಣಿಸಲು ಬಾರದ ಮಹಾಕಾ । ಶವ ತಳೆದು ನೋಡುತ್ತನಂತಾ ।
ಖ್ಯವ ತಳೆದುಕೊಂಡಿಪ್ಪುದದು ಕೇಳೈ ಪರಬ್ರಹ್ಮ ॥ ೫೭ ॥

---

೫೫ ಸಮಷ್ಟಿ–ಒಟ್ಟು. ವ್ಯಷ್ಟಿ–ಬಿಡಿಬಿಡಿ.

೫೬. ಪರಕೆ ಪರವೆನಿಪ– ಭೂತವಿಕಾರಗಳಾದ ವಸ್ತುಗಳು ನಮಗೆ ಬಾಯಿನೀರು ಕರೆಸುವವದರಿಂದ ನಮ್ಮ ಭಾಗಕ್ಕೆ ಅವು ಪರಗಳು. ಆ ಭೂತವಿಕಾರಗಳಿಗಿಂತ ಮೂಲವಾದ ಭೂತಗಳು ಪರಗಳು. ಇವೇ ಕ್ಷರಗಳು. ಆ ಮೂಲಭೂತಗಳಿಗಿಂತ ಅವುಗಳನ್ನು ತಿಳಿಯುವ ಕ್ಷೇತ್ರಜ್ಞನಂತು ಇನ್ನೂ ಪರನು. ಹೀಗೆ ಕ್ಷೇತ್ರಕ್ಷೇತ್ರಜ್ಞರು ಪರಕೆ ಪರವೆನಿಸಿರುವರು. ಆ ಕ್ಷರಾಕ್ಷರಪುರುಷರು "ದ್ವಾವಿಮೌ ಪುರುಷೌ ಲೋಕೇ ಕ್ಷರಶ್ಚಾಕ್ಷರ ಏವ ಚ । ಕ್ಷರಸ್ಸರ್ವಾಣಿ ಭೂತಾನಿ ಕೂಟಸ್ಥೋಽಕ್ಷರ ಉಚ್ಯತೇ ॥" ಎಂಬ ಗೀತೋಕ್ತಿಯಂತೆ ಕ್ಷರನೆಂದರೆ ಪಂಚಭೂತಗಳು, ಅಕ್ಷರನೆಂದರೆ ಅಂತರ್ಯಾಮಿಯಾದ ಚೈತನ್ಯ. ಕ್ಷೇತ್ರಜ್ಞ– ಅಂತರ್ಯಾಮಿ, ಕ್ಷೇತ್ರ – ಪಂಚ ಭೂತಗಳು; ದೃಕ್– ಅಂತರ್ಯಾಮಿ, ದೃಶ್ಯ–ಪಂಚಭೂತಗಳು. ಭೋಗ್ಯವು – ಪಂಚಭೂತಗಳು. ಭೋಕ್ತೃ– ಅಂತರ್ಯಾಮಿ. ಉತ್ತಮನೇ ಪರಬ್ರಹ್ಮ–" ಉತ್ತಮಃ ಪುರುಷಸ್ತ್ವನ್ಯಃ ಪರಮಾತ್ಮೇತ್ಯುದಾಹೃತಃ " ಎಂಬ ಗೀತೋಕ್ತಿಯಂತೆ ಪರಬ್ರಹ್ಮವಸ್ತು ಇವೆರಡಕ್ಕಿಂತ ಶ್ರೇಷ್ಠವಾದದ್ದು

೫೭. ಹವಣಿಸಲು– ಇಷ್ಟೆಂದು ಪರಿಮಿತಿಯನ್ನು ಕಲ್ಪಿಸಿ ಹೇಳಲು. ತಳೆದು–ಧರಿಸಿ (ಭೂತಾಕಾಶಕ್ಕೆ ಆಧಾರವಾಗಿ) ಅನಂತಾಖ್ಯವ–" ಸತ್ಯಮನಂತಂ ಬ್ರಹ್ಮ " ಎಂಬ ಶ್ರುತಿಯಲ್ಲಿ ಹೇಳಿರುವಂತೆ ಬ್ರಹ್ಮವು ಅನಂತ ಎಂಬ ಹೆಸರನ್ನು ಪಡೆದಿರುವದು. ಅನಂತವೆಂದರೆ ಅಂತವಿಲ್ಲದ್ದೆಂದರ್ಥ (ಈ ಪದ್ಯದಲ್ಲಿ ಪೂರ್ವಾರ್ಧದ ಸಂಗತಿಯೇ ಬೇರೆ; ಉತ್ತರಾರ್ಧದ ಸಂಗತಿಯೇ ಬೇರೆ. ಒಂದೇ ಅನೇಕ ಹೆಸರುಗಳಿಂದಿರುವದೆಂಬುದು ಪೂರ್ವಾರ್ಧದ ಸಂಗತಿ ; ಅಪಾರವಾದ ಆಕಾಶಕ್ಕೆ ಕೂಡ ಆಧಾರವಾಗಿ ಅನಂತವೆನಿಸಿಕೊಂಡಿರುವದೆಂಬುದು ಉತ್ತರಾರ್ಧದ ಸಂಗತಿ).

ಆವರಿಸಿ ಬ್ರಹ್ಮಾಂಡತಂಡವ | ತೀವಿಕೊಂಡೊಳಹೊರಗನೆಲ್ಲವ |
ನೀ ವಿಧದಲೆಸೆದಿರ್ಪುದಾವುದು ಸಗುಣವೆಂದೆನಿಸಿ ||
ಆ ವಿಯಲ್ಲತೆಗಪ್ಪುದಾವಿ | ರ್ಭಾವನಾವುದರಿಂದಲಾ ಸ |
ದ್ಭಾವವಹ ಚಿದ್ವ್ಯೋಮವೇ ಕೇಳ್ಕೆ ಪರಬ್ರಹ್ಮ || ೫೮ ||

ಖರಕಿರಣ ಮೊದಲಾದ ತೇಜೋ | ಭರಿತರಹ ಪಾವಕಶಶಾಂಕರು |
ಹರಿಹರಾದಿಗಳಾರ ದೀಪ್ತಿಯು ನೆರಿಸಿ ಬೆಳಗುವರು ||
ಕರಣಗಿರಣಗಳೆಂಬ ತುಚ್ಛಗ | ಳರಿಯದಪ್ರತಿಮಪ್ರಕಾಶ |
ಸ್ಫುರಿತತೇಜೋರಾಶಿಯೇ ಕೇಳ್ಕೆ ಪರಬ್ರಹ್ಮ || ೫೯ ||

ನೀರ ತಿಳಿ ನೀನೀಪ್ರಪಂಚವು | ತೋರದದರಿಂ ಮುನ್ನ ; ತೋರದು |
ತೋರುತಡಗಿದ ಬಳಿಕ ; ತೋರ್ಪುದು ವರ್ತಮಾನದಲಿ ||
ತೋರದಡಗದೆ ಸಹಜವಾಗಿಯೆ | ತೋರಿ ತೋರುವ, ಮೂರು ಕಾಲವ |
ಮೀರಿ ಮಿಕ್ಕಾವಾಗ ತೋರುವದೇ ಪರಬ್ರಹ್ಮ || ೬೦ ||

ಬಿಸಲ ತೊರೆಯಲಿ ಭಾವಿಸುತ್ತಿರೆ | ಪುಸಿಯೆನಿಪ ಜಲದಂಶವುಂ ಶೋ|
ಷಿಸಿ ನಿಜತ್ವ ಮರೀಚಿಕಾಂಶದೊಳುಳಿದ ತೆರನಂತೆ ||

---

೫೮. ಆ ವಿಯಲ್ಲತೆಗೆ–ಬ್ರಹ್ಮಾಂಡದ ಒಳಹೊರಗೆಲ್ಲಾ ವ್ಯಾಪಿಸಿ ಸಗುಣಸ್ವರೂಪವಾಗಿ ಬಳ್ಳಿಯಂತೆ ಹರಡಿಕೊಂಡಿರುವ ಆಕಾಶಕ್ಕೆ. ಸದ್ಭಾವ– ಸತ್ (ಇರುವಿಕೆ) ಎಂಬ ಸ್ವರೂಪ. "ಸದೇವ ಸೋಮ್ಯೇದಮಗ್ರ ಆಸೀತ್" ಎಂಬ ಶ್ರುತಿಯಂತೆ ಜಗತ್ತಿಗೆಲ್ಲ ಮೂಲಕಾರಣವಾದದ್ದು. ಚಿದ್ವ್ಯೋಮ– ಆಕಾಶದಂತೆ ವ್ಯಾಪಕವಾದ ಜ್ಞಾನ.

೫೯. ಖರಕಿರಣ ಮೊದಲಾದ– ಸೂರ್ಯನೇ ಮೊದಲಾದ. ಕರಣಗಿರಣಗಳೆಂಬ ತುಚ್ಛಗಳರಿಯದ–ಬ್ರಹ್ಮಕ್ಕೆ ಕಣ್ಣು ಕೈ ಮೊದಲಾದ ತುಚ್ಛವಾದ ಕರಣಗಳಿಲ್ಲವೆಂದೊಂದರ್ಥ ; ಬ್ರಹ್ಮದ ಅರಿವು ಯಾವ ಕರಣಗಳಿಗೂ ದಕ್ಕತಕ್ಕದ್ದಲ್ಲವೆಂದಿನ್ನೊಂದರ್ಥ.

೬೦. ನೀರ–ಸುಂದರನಾದ ಮಗನೆ. ತೋರದದರಿಂ ಮುನ್ನ– ಅದು ಸೃಷ್ಟಿಯಾಗುವದಕ್ಕೆ ಮೊದಲು ಕಾಣುತ್ತಿರಲಿಲ್ಲ. ತೋರುತಡಗಿದ ಬಳಿಕ––ಕಾಣುತ್ತಿದ್ದು ಇಲ್ಲದಂತಾದ ಮೇಲೆ ಕಾಣುವದಿಲ್ಲ. ತೋರದಡಗದೆ–– ಮೊದಲಿಲ್ಲದ್ದು ತೋರಿದಂತೆ ತೋರದೆ ಮತ್ತು ಇದ್ದದ್ದು ನಾಶವಾದಂತೆ ನಾಶವಾಗದೆ. ತೋರಿ ತೋರುವ–– (ಸ್ವಭಾವವಾಗಿ) ಹಿಂದಿನಿಂದಲೂ ಕಾಣುತ್ತಿದ್ದು ಮುಂದೆಯೂ ಕಾಣುತ್ತಲೇ ಇರುವಂಥ. ಆವಾಗ––ಯಾವಾಗಲೂ.

ಪಸರಿಸಿರುತಿಹ ನಾಮರೂಪಿನ । ವಿಷಮುವಹ ಮಾಯಾಂಶವಳಿಯ ।
ಲ್ಕೈಸವ ಸಚ್ಚಿತ್ಸುಖವದೇ ಕೇಳೈ ಪರಬ್ರಹ್ಮ ॥ ೬೧ ॥

ನೇಣು ಸರ್ಪಾಕಾರದಂದದಿ । ಕಾಣಿಸುತ್ತಿಹೆ ನೋಡಿ ತಿಳಿಯಲು ।
ನೇಣು ನೇಣಾದಂತೆ ನಿಜವಹ ವಸ್ತುವೇ ಭ್ರಮೆಗೆ ॥
ಕೇಣವಿಲ್ಲದೆ ಸಕಲಭುವನ । ಶ್ರೇಣಿಯಂತಿರೆ, ತೋರ್ಪ ಭ್ರಮೆ ಕಿಡೆ ।
ತಾನೇ ತಾನಾಗಿರ್ಪ ಸಹಜವದೇ ಪರಬ್ರಹ್ಮ ॥ ೬೨ ॥

ಇಂದ್ರಜಾಲವನೊಡ್ಡಿ ತೋರಲು। ನಿಂದು ನೋಡುವ ನೋಟಕರು ದಿಟ।
ವೆಂದು ಮೋಹಿಸಿ ಬಗೆವರದನಾ ಐಂದ್ರಜಾಲಿಕನು ॥
ಹೊಂದದವ ಪುಸಿಯೆಂದರಿವನಾ । ಚಂದದಲಿ ಸಕಲವನು ಮೋಹಿಪ ।
ದಂದುಗದ ಮಾಯೆಯನು ಕಳೆದುಳಿದಿರ್ಪುದೇ ಬ್ರಹ್ಮ ॥ ೬೩ ॥

ಒಳಗೆ ಪಿಂಡಾಂಡಗಳನಾ ಹೊರ । ವಳಯದಲಿ ಬ್ರಹ್ಮಾಂಡತಂಡವ ।
ಬಳಸುತೊಳಹೊರಗಾವರಿಸಿಕೊಂಡಿರ್ಪ ಮಾಯೆಯಲಿ ॥
ಹೊಳೆವ ನಾನಾವಿಧದ ಭೇದವ । ತಳೆದು, ಸಗುಣಬ್ರಹ್ಮರೂಪಿನ ।
ಲಳವಿಗೊಂಡಿಹುದಾವುದದು ತಾನೇ ಪರಬ್ರಹ್ಮ ॥ ೬೪ ॥

ಪ್ರಕೃತಿಯೊಳು ಬೆರೆದಿರ್ದು ಬ್ರಹ್ಮವು । ಪ್ರಕೃತಿಧರ್ಮಗಳಾದ ದುಃಖವ ।
ನಖಿಳಸುಖವನು ಹೊದ್ದದೆಂತಿಹುದೆಂದೊಡದ ಕೇಳು ॥

---

೬೧. ವಿಷಮುವಹ--ಅನೇಕ ವಿಕಾರಸ್ವರೂಪವಾದಂಥ.

೬೨. ನೇಣು--ಹಗ್ಗ. ನಿಜವಸ್ತುವೇ . . . . ಶ್ರೇಣಿ— (ಹಗ್ಗವೇ ಹಾವು ಮೊದಲಾದ ಅನೇಕ ಕಲ್ಪನೆಗಳಿಗೆ ಆಧಾರವಾದಂತೆ) ಬ್ರಹ್ಮವೇ ಬಗೆಬಗೆಯ ಭ್ರಮೆಗೆ ವಾಸಸ್ಥಾನವಾದ ಸಮಸ್ತ ಜಗತ್ತಿನ ಸಾಲು.

೬೩. ಹೊಂದದೆ+ಅವ—ಆ ಮಾಯೆಯ ಪದಾರ್ಥಗಳನ್ನು ನಿಜವೆಂದು ನಂಬಿ ತನ್ನ ಸುಖಕ್ಕೆಂದು ಅವುಗಳನ್ನು ಪಡೆಯುವದಕ್ಕೆ ಹೋಗದೆ. ಮೋಹಿಪ—ಮೋಹವನ್ನುಂಟುಮಾಡುವ. ದಂದುಗದ—ದುಃಖಕಾರಕವಾದ.

೬೪. ತಳೆದು— ಹೊಂದಿ. ಸಗುಣಬ್ರಹ್ಮರೂಪದಲಳವಿಗೊಂಡಿಹುದು--- ತಾನು ಸ್ವಭಾವವಾಗಿ ಅಪರಿಚ್ಛಿನ್ನವಾಗಿದ್ದರೂ ಸಗುಣರೂಪವಾಗಿ ಪರಿಚ್ಛೇದವನ್ನು ಹೊಂದಿರುವದು.

ಸುಖಮಯಾತ್ಮಾಶ್ರಯದ ಬುದ್ಧಿಗೆ। ಸುಖವಿಮುಖತೆಯು ನೋಡೆ ನಿಜವಿದು ।
ವಿಕೃತಿಯಿಲ್ಲದ ಸಂಗವಿರಹಿತವದು ಪರಬ್ರಹ್ಮ || ೬೫ ||

ಒಂದುದುಂಬರತರುವು ತುದಿಮೊದ । ಲಿಂದ ಕಾತಿಹ ಫಲಗಳಂದದ ।
ಲೊಂದು ಮೂಲಪ್ರಕೃತಿಯಲಿ ಬ್ರಹ್ಮಾಂಡತಂಡಗಳು ||
ಸಂದು ಬಿಡದೇ ತುಂಬಿಕೊಡಿಹ । ವೆಂದು ಶ್ರುತಿಗಳು ಪೇಳುತಿಹವಾ ।
ಚಂದದಲಿ ಪ್ರಕೃತಿಯ ನಿಜಾಶ್ರಯವೇ ಪರಬ್ರಹ್ಮ || ೬೬ ||

ಇರುವ ಕಡೆಯಾ ಬ್ರಹ್ಮ ಮೊದಲಾ । ಗಿರುತಿಹ ಪ್ರಾಣಿಗಳ ಬುದ್ಧಿಗೆ ।
ಬೆರೆಯದೆಯೆ ತತ್ಸಾಕ್ಷಿಯಾಗಿಯೇ ಬೆಳಗುತಿಹನಾವ ||
ಕರಣವಾವನ ಸನ್ನಿಧಾನದಿ । ಪರಿಪರಿಯ ಚೇಷ್ಟೆಗಳ ಪಡೆದಿಹ ।
ವರಿಯಲವಕೆ ನಿಮಿತ್ತಕಾರಣವೇ ಪರಬ್ರಹ್ಮ || ೬೭ ||

ಹೋಲಿಕೆಗೆ ಹೊಗಳುವ ಶ್ರುತಿಶಿರ । ಕೇಳನಾದಿಯದಾಗಿ ನಿತ್ಯ ನಿ ।
ರಾಳ ನಿಜಪದವಾವುದದು ತಾವೆಂದು ಯೋಗಿಗಳು ||

---

೬೫. ಸುಖಮಯಾ. . . ಬುದ್ಧಿಗೆ---ಇಲ್ಲಿ ಬುದ್ಧಿಯೆಂದರೆ ಅದರ ಸೂಕ್ಷ್ಮರೂಪವಾದ ಮಹತ್ತತ್ತ್ವವನ್ನು ಎಂದರೆ ಪ್ರಕೃತಿಯನ್ನು ತೆಗೆದುಕೊಳ್ಳಬೇಕು. ಆ ಪ್ರಕೃತಿಯು ಸುಖಮಯವಾದಂಥ ಆತ್ಮನನ್ನು ಆಶ್ರಯಿಸಿಕೊಂಡೇ ಇರುವದಷ್ಟೆ. ಈ ಕಾರಣದಿಂದ ಪ್ರಕೃತಿಯಲ್ಲಿ ಯಾವಾಗಲೂ ಸುಖವೇ ತೋರಬೇಕು. ಆದರೆ ಅನುಭವದಲ್ಲಿ ಹಾಗಿಲ್ಲ. ಪ್ರಕೃತಿಯಿಂದ ದುಃಖವೂ ಆಗುತ್ತದೆ. ಇದಕ್ಕೆ ಕಾರಣವೇನೆಂದರೆ ಬ್ರಹ್ಮವು ಅಸಂಗವಾದದ್ದಾದ್ದರಿಂದ ಅದಕ್ಕೆ ಪ್ರಕೃತಿಯೊಡನೆ ಸಂಗವಿಲ್ಲ.

೬೬. ಉದುಂಬರತರುವು--- ಅತ್ತಿಯಮರವು. ಕಾತಿಹ--- ಕಾಯಿಬಿಟ್ಟಿರುವ ಶ್ರುತಿ--" ಏಷೋಽಣಿಮಾ ಐತದಾತ್ಮ್ಯಮಿದಂ ಸರ್ವಂ ".

೬೭. ತತ್ಸಾಕ್ಷಿಯಾಗಿಯೆ--- ಆ ಪ್ರಾಣಿಗಳ ಬುದ್ಧಿಗೆ ಸಾಕ್ಷಿಯಾಗಿಯೆ. ನಿಮಿತ್ತ ಕಾರಣವೇ---ತನ್ನ ಇರುವಿಕೆಯ ಪ್ರಭಾವದಿಂದಲೇ ಕರಣಗಳ ಶಕ್ತಿಗೆ ಕಾರಣನಾಗಿರುವಂಥ.

೬೮. ಹೋಲಿಕೆಗೆ---ಬ್ರಹ್ಮಸ್ವರೂಪವು ಇಂದ್ರಿಯಗಳಿಗೆ ಗೋಚರವಲ್ಲವೆಂಬುದಕ್ಕೆ ಹೋಲಿಕೆಯನ್ನು ಕೊಡುವದಕ್ಕಾಗಿ (ಯೋಗಿಗಳಿಗೆ ಬ್ರಹ್ಮಸ್ವರೂಪವು ತಿಳಿದಿದ್ದರೂ ಅವರು ಅದನ್ನು ಹೇಳಲಾರದೆ ಸುಮ್ಮನಿರುವರೆಂಬುದನ್ನು ಹೇಳಿದೆ). ಶ್ರುತಿಶಿರ--- " ಯತೋ ವಾಚೋ ನಿವರ್ತಂತೇ ಅಪ್ರಾಪ್ಯ ಮನಸಾ ಸಹ " (ಅದನ್ನು ಹೇಳುವ

ತಾಳಿ ಹೃದಯಾಂಬುಜದಿ, ವಚನದಿ । ಹೇಳಲಾರದೆ ಸುಷ್ಮ್ನಿಹುದನು ; ।
ಕೇಳತೀಂದ್ರಿಯವಾದ ಚಿದ್ಘನವೇ ಪರಬ್ರಹ್ಮ || ೬೮ ||

ದೇಶಕಾಲವ ಮೀರಿ, ಜನನ । ಕ್ಲೇಶಪಾಶವನುಳಿದು, ಹೊಳೆವಾ ।
ಕಾಶದಂದದಿ ಪೂರ್ಣನಾಗಿ, ನಿರಾವರಣವೆನಿಸಿ, ||
ಮೀಸಲಳಿಯದ ದಿವ್ಯತೇಜೋ । ರಾಶಿಯಾಗಿಹುದಾವುದದು ನಿ ।
ರ್ವಾಸನೆಯ ನಿಜ ನಿತ್ಯ ನಿರವಧಿಯೇ ಪರಬ್ರಹ್ಮ || ೬೯ ||

ನಿರುಪಮ, ನಿರಾಲಂಬ, ನಿರ್ಗುಣ, । ನಿರವಧಿ, ನಿರಾಂತಕ, ನಿರ್ಮಲ, ।
ನಿರತಿಶಯ, ನಿಷ್ಕಲ, ನಿರಂಜನ, ನಿರ್ವಿಕಾರ, ನಿಜ, ||
ಪರತರ, ಪರಾನಂದ, ಪಾವನ, । ಪರಮಪದ, ಪರಿಪೂರ್ಣ, ಪರ, ಚಿ ।
ತ್ಪರ, ಸದದ್ವಯವಾದ ಪರಮಾರ್ಥನೆ ಪರಬ್ರಹ್ಮ || ೭೦ ||

ಇಂತು ತತ್ವಪದಲಕ್ಷ್ಯವನು ದೃ । ಷ್ಟಾಂತಪೂರ್ವಕವಾಗಿ ನೆರೆ ತಿಳಿ ।
ವಂತೆ ಬೋಧಿಸಿ, ಸಕಲಮಾಯಾಭ್ರಾಂತಿಯನು ಬಿಡಿಸಿ, ||
ಅಂತವಿಲ್ಲದಪಾರವಸ್ತುವ । ಚಿಂತ್ಯವೇ ಪರಬೊಮ್ಮವೆಂದದ ।
ಸ್ವಾಂತದೊಳು ನಿಲಿಸಿದನು ಸಹಜಾನಂದಗುರುಪವನ || ೭೧ ||

---

ದಕ್ಕೆ ಹೊರಟರೆ ಸಾಗದೆ ಮಾತು ಹಿಂದಿರುಗುವದಲ್ಲದೆ ಮನಸ್ಸು ಕೂಡ ಅದನ್ನು ಮುಟ್ಟಲರಿಯದೆ ಹಿಮ್ಮೆಟ್ಟುವದು). ನಿಜಪದ---ಮತ್ತೊಂದರ ಆಧಾರವಿಲ್ಲದೆ ತನ್ನ ಮಹಿಮೆಯ ಆಧಾರದ ಮೇಲೆಯೇ ಇರುವದು.

೬೯. ದೇಶಕಾಲವ ಮೀರಿ---ಬ್ರಹ್ಮವು ಎಲ್ಲ ದೇಶವನ್ನೂ ಎಲ್ಲ ಕಾಲವನ್ನೂ ತುಂಬಿಕೊಂಡು ಇನ್ನೂ ಮೇಲೆ ಇರುವದರಿಂದ ಅದು ಅವೆರಡನ್ನೂ ಮೀರಿದಂತಾಯಿತು. ಜನನಕ್ಲೇಶಪಾಶವನುಳಿದು---ಬ್ರಹ್ಮಜ್ಞಾನವಾದರೆ ಹುಟ್ಟುಸಾವುಗಳು ತಪ್ಪುವದರಿಂದ ಹುಟ್ಟುವಿಕೆಯೆಂಬ ದುಃಖದ ಕಣ್ಣಿ ಕಳಚಿಕೊಂಡು ಹೋಗುವದು. ನಿರಾವರಣವೆನಿಸಿ---ಯಾವ ಮುಸುಕೂ ಇಲ್ಲದೆ. ಮೀಸಲಳಿಯದ---ಯಾವ ವಿಕಾರವನ್ನೂ ಪಡೆಯದ. ನಿರ್ವಾಸನೆಯ---ಯಾವ ವಾಸನೆಯೂ ಇಲ್ಲದಂಥ. ನಿರವಧಿ---ಅಪಾರವಾದದ್ದು.

೭೦. ಸದದ್ವಯವಾದ--- ಸದ್ರೂಪವೂ (ಇರುವಿಕೆಯ ಸ್ವಭಾವದ್ದು) ಅದ್ವಯರೂಪವೂ (ತನಗೆ ಭಿನ್ನವಾದ ಎರಡನೆಯದಿಲ್ಲದ್ದು). ಪರಮಾರ್ಥ---ನಿಜವಾಗಿರುವದು.

೭೧. ಅಂತವಿಲ್ಲದ+ಅಪಾರವಸ್ತು+ಅಚಿಂತ್ಯವೇ. ಸ್ವಾಂತದೊಳು---ಮನಸ್ಸಿನಲ್ಲಿ.

ಪ್ರಣವಮಯ, ಪರತತ್ತ್ವ, ಪರಶಿವ,। ತ್ರಿಣಯನ, ತ್ರಿಶೂಲಿ, ತ್ರಿವಿಷ್ಟಪ।
ಗಣವಿನುತ, ತ್ರಿದಶಾರಿಮರ್ದನ, ತ್ರಿವಿಧ, ಸರ್ವೇಶ, ॥
ಗುಣರಹಿತ, ತ್ರಿಗುಣಪ್ರವರ್ತಕ, । ಗಣಪದಪ್ರದ, ಪ್ರಣತರಕ್ಷಕ, ।
ರಣವಿಜಯ, ಶ್ರೀ ಮಲ್ಲಿಕಾರ್ಜುನ ಸಲಹು ಮೂಜಗವ ॥ ೭೨ ॥

ಶ್ರೀಮತ್ಪರಮಹಂಸ ಪರಿವ್ರಾಜಕಾಚಾರ್ಯ ಸಹಜಾನಂದ ಗುರುವರ್ಯ
ಪಾದಕಮಲಭೃಂಗಾಯಮಾಣ ಸಹವಾಸಿ ಮಹಲಿಂಗರಂಗ
ವಿರಚಿತವಾದ ಅನುಭವಾಮೃತವೆಂಬ ಗ್ರಂಥದಲ್ಲಿ
ತತ್ವಪದಾರ್ಥಶೋಧನೆಯೆಂಬ ನಾಲ್ಕನೆಯಧ್ಯಾಯವು
ಮುಗಿದುದು.

---

೭೨. ಪ್ರಣವ---ಓಂಕಾರ. ಪರತತ್ತ್ವ-ಭೂತತತ್ತ್ವ ಮೊದಲಾದವುಗಳಿಗೆಲ್ಲ ಆಧಾರವಾದತತ್ತ್ವಸ್ವರೂಪನು. ತ್ರಿವಿಧ---ಭೋಕ್ತೃ, ಭೋಗ್ಯ, ಭೋಗ ಎಂದು ಮೂರು ಬಗೆಯನ್ನು ತಾಳಿರುವವನು. ತ್ರಿಗುಣಪ್ರವರ್ತಕ---ಸತ್ತ್ವ, ರಜ, ತಮ ಎಂಬ ಗುಣಗಳನ್ನು ಪ್ರವರ್ತಿಸುವವನು. ಗಣಪದಪ್ರದ---ಪ್ರಮಥಗಣಗಳ ಸ್ಥಾನವನ್ನು ಕೊಡತಕ್ಕವನು.

## ಐದನೆಯ ಅಧ್ಯಾಯ

# ಅಸಿಪದಾರ್ಥನಿರ್ಣಯ

ಸೂ || ಅಸಿಪದದಖಂಡಾದ್ವಯಾಮೃತ | ರಸವ ಸಾತ್ಯವತೇಯ ಶುಕಮುನಿ |
ಗುಸುರಿದನು ವೇದಾಂತವಿವರಣೆಯಿಂದ ವಿಸ್ತರಿಸಿ ||

ಮೇರುವೇ ಧನುವಹಿಪತಿಯೆ ಹೆದೆ, | ವಾರಿಜಾಕ್ಷನೆ ಬಾಣ, ಪುರಗಳು |
ಮೂರು ಗುರಿ, ತ್ರಿಪುರಾರಿಯೇ ಬಲುವೀರ ಬಿಲುಗಾರ, ||
ಧಾರಿಣಿಯೆ ರಥ, ಸಾರಥಿಯೆ ವಿಧಿ, | ವಾರುವಂಗಳೆ ವೇದ, ಗಾಲಿಗ |
ಳಾ ರವೀಂದುಗಳಾಗೆ ಶ್ರೀಗಿರಿನಾಥಗಿದಿರಾರು ? || ೧ ||

ಪರರ ನಿಂದಿಸಿ ಜರಿದು, ತನ್ನನು | ಹಿರಿದು ಹೊಗಳಲು ಹಿಗ್ಗಿ, ಗುರುಹಿರಿ |
ಯರನು ದೂಷಿಸಿ, ಕುಲಚಲಂಗಳ ಗಾಢಗರ್ವದಲಿ ||
ಅರಿಗಳಾರರ ಬಲೆಗೆ ಬಿದ್ದಿಹ | ಪರಮಪಾತಕಿಯಾದ ಶಿಶ್ಯೋ |
ದರಪರಾಯಣಗರುಹಬೇಡೀ ಅನುಭವಾಮೃತವ || ೨ ||

---

ಸೂ || ಅಸಿಪದದ— ‘ಅಸಿ’ (ಆಗಿದ್ದಿ) ಎಂಬ ಸಂಸ್ಕೃತಶಬ್ದದ. ಅಖಂಡಾದ್ವಯಾಮೃತರಸವ- ಅಖಂಡವೂ ಅದ್ವಯವೂ ಅಮೃತವೂ ಆದ ರಸವನ್ನು. ಸಾತ್ಯವತೇಯ— ಸತ್ಯವತೀದೇವಿಯ ಮಗನಾದ ವ್ಯಾಸನು.

೧. ‘ಮೇರುವೇ ಧನು’ ಮೊದಲಾಗಿರುವ ಈ ಪದ್ಯವು ಮಹಿಮ್ನಸ್ತೋತ್ರದಲ್ಲಿರುವ ಈ ಕೆಳಗಿನ ಪದ್ಯದ ಅನುವಾದವಾಗಿದೆ- “ರಥಃ ಕ್ಷೋಣೀ, ಯಂತಾ ಶತಧೃತಿಗೇಂದ್ರೋ ಧನುರಥೋ, | ರಥಾಂಗೌ ಚಂದ್ರಾರ್ಕೌ, ರಥಚರಣಪಾಣಿಃ ಶರ ಇತಿ|| ದಿಧಕ್ಷೋಸ್ತೇ ಕೋಽಯಂ ತ್ರಿಪುರ ತೃಣಮಾಡಂಬರವಿಧಿ | ರ್ವಿಧೇಯೈಃ | ಕ್ರೀಡಂತ್ಯೋ ನ ಖಲು ಪರತಂತ್ರಾಃ ಪ್ರಭುಧಿಯಃ ||” ವಾರಿಜಾಕ್ಷನೆ— ವಿಷ್ಣುವೆ. ಪುರಗಳು ಮೂರು— ಆಯಸದ (ಕಬ್ಬಿಣದ) ಪುರ, ರಜತದ (ಬೆಳ್ಳಿಯ) ಪುರ, ಸ್ವರ್ಣದ (ಬಂಗಾರದ) ಪುರ. ವಾರುವಂಗಳೆ ವೇದ— ಋಕ್, ಯಜುಸ್, ಸಾಮ, ಅಥರ್ವ- ಎಂಬ ನಾಲ್ಕು ವೇದಗಳೇ ಕುದುರೆಗಳು.

೨. ಗಾಢಗರ್ವದಲಿ— ಹೆಚ್ಚಾದ ಅಹಂಕಾರದಿಂದ. ಅರಿಗಳ + ಆರರ— ಕಾಮ ಮೊದಲಾದ ಆರು ಶತ್ರುಗಳ (೧ ಅ. ೨೨ ಪ. ವನ್ನು ನೋಡಿ).

ಇತರಮತಗಳನುಳಿದು, ತತ್ತ್ವದೊ | ಳತಿಶಯಾಭ್ಯಾಸವನು ಮಾಡುವ |
ಮತಿಯುತರಿಗತಿಶಾಂತರಿಂಗಾಚಾರನಿರತರಿಗೆ ||
ಶ್ರುತಿಗುರುಗಳಲಿ ಭಕ್ತಿಯುಕ್ತರಿ | ಗತುಲಗತಿಕಾಂಕ್ಷಕರಿಗಾವಗ |
ಮಥಿಸಿ ತಿಳಿವರಿಗೊಲಿದು ಪೇಳೀ ಅನುಭವಾಮೃತವ || ೩ ||

ಹೇಳಿದೆನು ತತ್ತ್ವಂಗಳಿಗೆ ಸಲೆ | ಮೇಳವಹ ಲಕ್ಷ್ಯಾರ್ಥವನು ; ತಿಳಿ |
ಮೇಲೆ ವಾಚ್ಯಾರ್ಥವನವಿದ್ಯಾವಿದ್ಯೆಯಿಂದಾದ ||
ಕಾಳೆನಿಪ ಜೀವೇಶ್ವರತ್ವವ, | ತಾಳಿ ಕಿಂಚಿಜ್ಞತ್ವದಲಿ ಮೇಣ್ |
ಲೀಲೆಯಿಂ ಸರ್ವಜ್ಞತಾದಿಯಲೆಸೆವ ಪರಮಾತ್ಮ || ೪ ||

---

೩. ಇತರಮತಗಳನುಳಿದು—ಬೇರೆ ಬೇರೆ ಮತಗಳೆಲ್ಲ ಚೆನ್ನಾಗಿ ಕಾಣುವವೆಂಬ ಚಪಲವನ್ನು ಬಿಟ್ಟು. ತತ್ತ್ವದೊಳತಿಶಯಾಭ್ಯಾಸವನು ಮಾಡುವ—ತನ್ನ ಧರ್ಮದ ರಹಸ್ಯಗಳನ್ನು ತಿಳಿಯುವವರಲ್ಲಿ ಹೆಚ್ಚಾದ ಪ್ರಯತ್ನವನ್ನು ಮಾಡುವಂಥ- ಆಚಾರ ನಿರತರಿಗೆ--ತನ್ನ ವರ್ಣಾಶ್ರಮದ ನಡೆವಳಿಕೆಗಳಲ್ಲಿ ಆಸಕ್ತರಾದವರಿಗೆ (ಸದಾಚಾರಿಗಳ ಮನಸ್ಸು ಶುದ್ಧವಾಗಿರುವದರಿಂದ ಅವರಿಗೆ ಮಾಡಿದ ಉಪದೇಶವು ಮಾತ್ರ ಸಾರ್ಥಕ ವಾಗುವದು). ಅತುಲಗತಿಕಾಂಕ್ಷಕರಿಗೆ—ಎಲ್ಲಕ್ಕಿಂತಲೂ ಹೆಚ್ಚಿನ ಸದ್ಗತಿಯಾದ ಮೋಕ್ಷವನ್ನು ಬಯಸುವವರಿಗೆ. (ಪ್ರಾಪಂಚಿಕಸುಖವನ್ನಾಗಲಿ ದೇವಲೋಕದ ಸುಖವನ್ನಾಗಲಿ ಬಯಸುವವರಿಗೆ ವೇದಾಂತವಿಚಾರಗಳು ಹಿಡಿಯುವದಿಲ್ಲವೆಂದು ತಿಳಿಯಬೇಕು). ಮಥಿಸಿ ತಿಳಿವರಿಗೆ— ಚೆನ್ನಾಗಿ ವಿಚಾರಮಾಡಿ ನಿಶ್ಚಯವನ್ನು ಗೊತ್ತು ಮಾಡಿಕೊಳ್ಳುವವರಿಗೆ ( ತಾವು ವಿಚಾರಮಾಡದೆ ಮತ್ತೊಬ್ಬರು ಹೇಳಿದ್ದನ್ನು ಸುಮ್ಮನೆ ಒಪ್ಪಿಕೊಂಡದ್ದು ಜ್ಞಾನವೆನಿಸುವದಿಲ್ಲವಾದ್ದರಿಂದ ವೇದಾಂತಜ್ಞಾನದ ಉಪದೇಶವು ವಿಚಾರಸ್ವಭಾವದವರಿಗೆ ಚೆನ್ನಾಗಿ ಶೋಭಿಸುವದು). ಈ ಪದ್ಯದಲ್ಲಿ ‘ ಅಭ್ಯಾಸವನು ಮಾಡುವ ’ ಎಂಬುದರಿಂದ ವಿವೇಕ, ‘ಇತರಮತಗಳನುಳಿದು ’ ಎಂಬುದರಿಂದ ವೈರಾಗ್ಯ, ‘ ಅತಿಶಾಂತರಿಗೆ ’ ಎಂಬುದರಿಂದ ಶಮದಮಾದಿಗಳು, ‘ ಗತಿಕಾಂಕ್ಷಕರಿಗೆ’ ಎಂಬುದರಿಂದ ಮುಮುಕ್ಷುತ್ವ–ಹೀಗೆ ಸಾಧನಚತುಷ್ಟಯಗಳು ಸೂಚಿತವಾಗಿವೆ.

೪. ತತ್ತ್ವಂಗಳಿಗೆ—“ ತತ್ ” “ ತ್ವಂ ” ಎಂಬ ಶಬ್ದಗಳಿಗೆ. ಮೇಳವಹ--ಒಪ್ಪುವ ಹಾಗೆ ಕೂಡುವಂಥ. (ವಾಚ್ಯಾರ್ಥವನು +) ಅವಿದ್ಯಾವಿದ್ಯೆಯಿಂದ—ತಮ್ಮ ಮೂಲ ಸ್ವರೂಪದ ನಿಜಸ್ಥಿತಿಯ ಅರಿವು ಆಗದಂತೆ ರಜಸ್ತಮೋಗುಣಪ್ರಧಾನವಾಗಿ ಜೀವರನ್ನು ಮುಸುಕಿರುವ ಶಕ್ತಿಗೆ ಅವಿದ್ಯೆಯೆಂದು ಹೆಸರು ; ಜಗತ್ತಿನ ಸೃಷ್ಟಿ, ಸ್ಥಿತಿ, ಸಂಹಾರ ಮೊದಲಾದವುಗಳಿಗೆ ಸಾಧನವಾಗಿ ಸತ್ತ್ವಗುಣಪ್ರಧಾನವಾಗಿರುವ ಈಶ್ವರನ ಶಕ್ತಿಗೆ ವಿದ್ಯೆ

ಸತ್ತ್ವರಜತಮವೆಂಬ ಮಾಯಾ । ಶಕ್ತಿಯ ಗುಣಂಗಳಲಿ ಭೇದಾ ।
ಪತ್ತಿ ವಿದ್ಯಾವಿದ್ಯೆಯೆಂದೆರಡಾಗಿ ತೋರಿಹುದು ॥
ಕರ್ತೃರೂಪವವಿದ್ಯೆ, ವಿದ್ಯೆಯು । ಸತ್ತ್ವಗುಣಸಂಪತ್ತಿನಲಿ ಮೆರೆ ।
ಯುತ್ತಿಹುದು ಸರ್ವಜ್ಞತಾದಿಷಡಂಗರೂಪದಲಿ　　॥ ೫ ॥

ಶೈವವೈಷ್ಣವವೆಂಬ ಮತಗಳ । ವಾವೆನಲ್ಕೆ ಷಡಂಗಷಡ್ಗುಣ ।
ಭಾವಭೇದಗಳಾದವಲ್ಲದೆ ವಸ್ತುಭೇದವನು ॥
ಆವ ಶ್ರುತಿಗಳು ಪೇಳ್ದವೇಕೋ । ದೇವನೆಂದೊರಲುತ್ತಲಿರೆ ಮಾ ।
ಯಾವಿಲಾಸದಿ ಭೇದವಲ್ಲದೆ ವಸ್ತು ಬೇರಿಲ್ಲ　　॥ ೬ ॥

ಹೊಳೆವ ಶುದ್ಧಸ್ಫಟಿಕಸನ್ನಿಧಿ । ಯಲಿ ಜಪಾಕುಸುಮಾದಿಪುಷ್ಪಾ ।
ವಳಿಗಳಿರಲಾ ಸ್ಫಟಿಕ ತತ್ತತ್ಪುಷ್ಪವರ್ಣದಲಿ ॥
ಹೊಳೆವವೋಲ್ನಿಜವಸ್ತು ಗುಣಸಂ । ಕುಲದ ಬುದ್ಧಿಯ ವೃತ್ತಿ ತನ್ನೊಳು
ಹೊಳೆಯೆ ಬಹುವಿಧಭೇದವಾಗಿಯೆ ತೋರುತಿಹುದೆಂದ　　॥ ೭ ॥

---

ಯೆಂದು ಹೆಸರು. ಇವೆರಡೂ ತನ್ನನ್ನು ತಾನು ಅರಿಯದಿರುವದೆಂಬ ಅವಿದ್ಯೆಯಿಂದ ಕಲ್ಪಿತವಾದವುಗಳು. ಕಾಳೆಸಿಪ–ಕಾಡು (ಕೀಳು)+ಎನಿಪ. ಕಿಂಚಿಜ್ಞತಾದಿಯ––ಸ್ವಲ್ಪ ವಸ್ತು ತಿಳಿದಿರುವಿಕೆ, ಸ್ವಲ್ಪಶಕ್ತಿಯಿರುವಿಕೆ ಮೊದಲಾದವುಗಳನ್ನು ಸರ್ವಜ್ಞತಾದಿಯಲಿ–ಎಲ್ಲವನ್ನೂ ತಿಳಿದಿರುವಿಕೆ, ಎಲ್ಲ ಶಕ್ತಿಗಳೂ ಇರುವಿಕೆ ಮೊದಲಾದ ಗುಣಗಳಿಂದ ಕೂಡಿ

೫. ಮಾಯಾಶಕ್ತಿ––ಪರಮಾತ್ಮನ ಅಧೀನದಲ್ಲಿರುವ ತ್ರಿಗುಣಾತ್ಮಕವಾದ ಶಕ್ತಿ ಭೇದಾಪತ್ತಿ—ಭೇದವಾಗಿರುವಿಕೆಯು. ಸರ್ವಜ್ಞತಾದಿಷಡಂಗರೂಪದಲಿ––ಸರ್ವಜ್ಞತ್ವ, ಸರ್ವೇಶ್ವರತ್ವ, ಸರ್ವಾಂತರ್ಯಾಮಿತ್ವ, ಸರ್ವಸ್ರಷ್ಟೃತ್ವ, ಸರ್ವರಕ್ಷಕತ್ವ, ಸರ್ವಸಂಹಾರಕತ್ವ–ಈ ಆರು ರೂಪದಿಂದ.

೬. ಷಡಂಗ . . ವಲ್ಲದೆ—ಹಿಂದಿನ ಪದ್ಯದ ಟಿಪ್ಪಣಿಯಲ್ಲಿ ಕೊಟ್ಟಿರುವ ಷಡಂಗಗಳಿಂದ ಶೈವವೆಂದೂ ಜ್ಞಾನ, ಬಲ, ವೀರ್ಯ, ತೇಜ, ಐಶ್ವರ್ಯ, ಶಕ್ತಿ- ಎಂಬ ಆರು ಗುಣಗಳಿಂದ ವೈಷ್ಣವವೆಂದೂ ಭೇದವೇ ಹೊರತು ಆ ಮತಗಳಿಂದ ಪ್ರತಿಪಾದ್ಯವಾದ ವಸ್ತುವಿನಲ್ಲೇನೂ ಭೇದವಿಲ್ಲವೆಂದು ತಾತ್ಪರ್ಯ. ಏಕೋದೇವನೆಂದು—ದೇವರೊಬ್ಬನೇ ಎಂದು. ಶ್ರುತಿವಾಕ್ಯಕ್ಕೆ ಪರಿಶಿಷ್ಟವನ್ನು ನೋಡಿ.

೭. ಜಪಾಕುಸುಮಾದಿಪುಷ್ಪಾವಳಿಗಳು—ದಾಸವಾಳದ ಹೂವು ಮೊದಲಾದ ಬಗೆಬಗೆಯ ಹೂಗಳು. ಗುಣ. . ಹೊಳೆಯೆ––ಬೇರೆಬೇರೆ ವಿಷಯಗಳ ಆಕಾರವನ್ನು

ಅಂಬರದಲಿಹ ಚಂದ್ರನೊಬ್ಬನೆ, । ಕುಂಭಗಳ ಜಲಮಧ್ಯದಲಿ ಪ್ರತಿ ।
ಬಿಂಬಚಂದ್ರರು ಹಲಬರಾಗಿಯೆ ತೋರ್ಪ ತೆರನಂತೆ ॥
ಅಂಬುಜಾಸನ ಮೊದಲು ಕಡೆಗಾ । ಸ್ತಂಬಬುದ್ಧಿಗಳಲ್ಲಿ ಜೀವಕ ।
ದಂಬವಾಗಿಯೆ ಪೊಳೆವನೊಬ್ಬನೆ ಚೇತನಾತ್ಮಕನು ॥ ೮ ॥

ಕೇಳವಿದ್ಯೋಪಾಧಿಯಿಂದಲಿ । ಹೇಳಲೇನದ, ಕರ್ತೃಭಾವವ ।
ತಾಳಿ ತನುಕರಣಾದಿಗುಣಗಣಗಳಲಹಂಕರಿಸಿ ॥
ಸ್ಥೂಲ, ದೀರ್ಘನು, ಹ್ರಸ್ವ, ಕೃಶ, ನಾ । ಬಾಲ, ವೃದ್ಧನು, ಮರೆದೆನರಿದೆನು,।
ಕೇಳಿ, ಕಾಣೆನು, ದುಃಖಿ, ಸುಖಿ, ತಾನೆಂದು ಬಗೆದಿಹನು ॥ ೯ ॥

ಹೇಸಿಕೆಯ ಹೆಬ್ಬಡಿಕೆ, ಘನಸಂ । ಕ್ಲೇಶಕಾರಣವಾದ ತನುವಿನೊ ।
ಳಾಸೆಬಟ್ಟದರಲ್ಲಿ ಮಮತೆಯ ಮಾಡಿ ಮೋಹಿಸುತ, ॥
ಗಾಸಿಬಡುವೀ ದೇಹಧರ್ಮವ । ನ್ಯಸುವನು ತನ್ನಲ್ಲಿ ಕಲ್ಪಿಸಿ, ।
ದಾಸಣದ ಸನ್ನಿಧಿಯ ಮಣಿಯೊಲು ಜೀವನೆನಿಸುವನು ॥ ೧೦ ॥

---

ಪಡೆದ ತ್ರಿಗುಣಾತ್ಮಕವಾದ ಬುದ್ಧಿಯ ವೃತ್ತಿಗಳಿಂದ ಬೇರೆಬೇರೆ ವಸ್ತುಭೇದಗಳು ಕಾಣು ವವೇ ಹೊರತು ನಿಜವಾಗಿ ವಸ್ತುಭೇದವಿಲ್ಲವೆಂದು ತಾತ್ಪರ್ಯ.

೮. ಸ್ತಂಬ—ಮೋಟುಮರ ಅಥವಾ ಸಣ್ಣ ಕ್ರಿಮಿ ಅಥವಾ ಹುಲ್ಲು. ಇಲ್ಲಿ ಸ್ತಂಬವೆಂಬ ಮಾತಿಗೆ ಹುಲ್ಲುಕಡ್ಡಿಯೆಂಬರ್ಥವನಿಟ್ಟುಕೊಳ್ಳಬಹುದು. ೬ ಅ. ೬೦ ಪ. ನೋಡಿ. ಚತುರ್ಮುಖಬ್ರಹ್ಮನನ್ನು ಮೊದಲುಮಾಡಿಕೊಂಡು ಹುಲ್ಲುಕಡ್ಡಿಯವರೆಗೂ ಇರುವದರಲ್ಲಿ ಜ್ಞಾನಾದಿಗಳ ತಾರತಮ್ಯವೆಷ್ಟಿದ್ದರೂ ಅಂತರ್ಯಾಮಿಯೊಬ್ಬನೇ ಎಂದು ತಿಳಿಯಬೇಕು. ಜೀವಕದಂಬವು—ಜೀವರ ಸಮೂಹವು (ಒಬ್ಬನ ರೂಪಾಂತರವೆ ಎಂದು ತಾತ್ಪರ್ಯ).

೯. ಕೇಳು+ಅವಿದ್ಯೋಪಾಧಿಯಿಂದಲಿ. ಕರ್ತೃಭಾವವ—ನಾನು ಮಾಡುವವನೆಂಬ ಮುಂತಾದ ಅಹಂಕಾರವನ್ನು. ತನು . . ಲಹಂಕರಿಸಿ—ಶರೀರ, ಇಂದ್ರಿಯ ಮೊದಲಾ ದವುಗಳೇ ತಾನೆಂಬ ಅಭಿಮಾನವನ್ನು ವಹಿಸಿ. ನಾ—ನಾನು (ಸ್ಥೂಲನು ದೀರ್ಘನು ಎಂದು ಮುಂತಾಗಿ ತಿಳಿದುಕೊಂಡಿರುವನು).

೧೦. ಹೇಸಿಕೆಯ—ಹೊಲಸಿನ. ಹೆಬ್ಬಡಿಕೆ—ಕೆಟ್ಟ ನಾತ. ಘನಸಂಕ್ಲೇಶಕಾ ರಣವು—ಬಹು ಹೆಚ್ಚಿನ ದುಃಖಕ್ಕೆ ಕಾರಣವು ಈ ದೇಹಧರ್ಮವನ್ಯೆಸುವನು—ದೇಹ ಧರ್ಮಗಳಾದ ಸ್ಥೂಲ, ದೀರ್ಘ, ಹ್ರಸ್ವ ಮೊದಲಾದ ಎಲ್ಲವುಗಳನ್ನೂ. ತನ್ನಲ್ಲಿ—

ತನ್ನ ಸಹಜಾನಂದವಹ ಚೈ । ತನ್ಯವನು ತನುವಿನಲಿ ಬಗೆದ ।
ನ್ಯೋಽನ್ಯವಿನಿಮಯವಾಗಿ ಮಾಡುತ, ಕಾದ ಕಬ್ಬಿಣದ ॥
ನಿರ್ಣಯದಿ ಜರೆ, ಮರಣ, ಪುನರಪಿ । ಜನ್ಮಕರ್ಮಂಗಳಲಿ ಬಳಲುತ ।
ಬನ್ನಬಡುವವೊಲೆಸೆವುತಿಹಪರಗಳಲಿ ತೊಳಲುವನು ॥ ೧೧ ॥

ಈ ಪರಿಯ ಬಹುಜನ್ಮವಾಸನೆ । ಲೇಪವಡೆದಿರೆ, ಮರಳಿ ಸಂಸೃತಿ ।
ಕೂಪದೊಳು ಬಿದ್ದಾವಗಾಳುತ್ತೇಳುತಿಹನಾಗಿ, ॥
ಕಾಪಥದಲೇ ನಡೆದು ಕೆಡುವನು, । ದೀಪಿಸುವ ತತ್ಪದವ ಕಾಣದೆ, ।
ಭಾಪವಿದ್ಯೆಯ ಮಹಿಮೆಯೆಂತುಟೊ ! ಮಗನೆ, ಕೇಳೆಂದ ॥ ೧೨ ॥

---

ಆತ್ಮನಲ್ಲಿ (ನಾನು ಸ್ಥೂಲನು ಎಂಬ ಮಾತಿನಲ್ಲಿ ನಾನು ಎಂಬುದು ನಿಜವಾಗಿ ಅಂತರ್ಯಾಮಿಚೈತನ್ಯವನ್ನು ಸೂಚಿಸುತ್ತದೆ. ಸ್ಥೂಲತ್ವವು ಹೊರಗಣ ದೇಹಕ್ಕೆ ಸಂಬಂಧಿಸಿದ್ದು. ಇವೆರಡನ್ನೂ ಗಂಟುಹಾಕಿ ಮಾತಾಡುವದರಿಂದ ಆತ್ಮನಲಿ ದೇಹದ ಧರ್ಮಗಳನ್ನು ಆರೋಪಿಸಿದಂತಾಯಿತು). ದಾಸಣದ ಸನ್ನಿಧಿಯವೋಲ್–ಸ್ಫಟಿಕವು ತಾನು ಸ್ವಭಾವವಾಗಿ ಬೆಳ್ಳಗಿದ್ದು ಕೆಂಪು ದಾಸವಾಳದ ಹೂ ಹತ್ತಿರದಲ್ಲಿರುವದರಿಂದ ತಾನೂ ಕೆಂಪಾಗಿ ಕಾಣುವಂತೆ ಬ್ರಹ್ಮನು ತಾನು ಸ್ವಭಾವವಾಗಿ ಶುದ್ಧಸ್ವರೂಪದಲ್ಲಿದ್ದರೂ ಬಗೆಬಗೆಯ ಬುದ್ಧಿವೃತ್ತಿಗಳ ಕಲ್ಪಿತಸಂಬಂಧದಿಂದ ಜೀವನೆನಿಸುವನೆಂದು ತಾತ್ಪರ್ಯ.

೧೧. ತನ್ನ . . ತನುವಿನಲಿ ಬಗೆದು– ತನ್ನ ಸಹಜಾನಂದಸ್ವರೂಪಕ್ಕೆ ಒಪ್ಪುವ ನಾನು ಎಂಬುದನ್ನು ಶರೀರಕ್ಕೆ ಅನ್ವಯಿಸುತ್ತ. ಅನ್ಯೋನ್ಯವಿನಿಮಯವಾಗಿ ಮಾಡುತ– ಒಂದರ ಧರ್ಮಗಳನ್ನು ಇನ್ನೊಂದರಲ್ಲಿ ಹಾಕುತ್ತ (ಆತ್ಮನ ಧರ್ಮವನ್ನು ದೇಹಕ್ಕೂ ದೇಹದ ಧರ್ಮವನ್ನು ಆತ್ಮಕ್ಕೂ ಹಾಕುವದು. ನೀನು ಎಂದು ಶರೀರವನ್ನು ಕುರಿತು ಹೇಳಿದರೆ ಆತ್ಮನನ್ನು ದೇಹದಲ್ಲಿ ಆರೋಪಿಸಿದಂತಾಯಿತು. ನಾನು ಸ್ಥೂಲನು ಎಂದರೆ ನಾನು ಎಂಬುದು ನಿಜವಾಗಿ ಆತ್ಮನಿಗೆ ಅನ್ವಯಿಸುವದರಿಂದ ಇಲ್ಲಿ ದೇಹದ ಧರ್ಮವಾದ ಸ್ಥೂಲತ್ವವನ್ನು ಆತ್ಮನಲ್ಲಿ ಆರೋಪಿಸಿದಂತಾಯಿತು). ಕಾದ ಕಬ್ಬಿಣದ ನಿರ್ಣಯದಿ–ಕಾದ ಕಬ್ಬಿಣವು ನಿಗಿನಿಗಿ ಹೊಳೆಯುವದೆನ್ನುವಾಗ ಅಗ್ನಿಯ ಧರ್ಮವನ್ನು ಕಬ್ಬಿಣದಲ್ಲಿ ಆರೋಪಿಸುವಂತೆ. ಪುನರಪಿ–ಮತ್ತು. ಜನ್ಮಕರ್ಮಂಗಳಲಿ– ಹುಟ್ಟಿಸಾಯುವದರಲ್ಲಿ ಮತ್ತು ಕರ್ಮಗಳನ್ನು ಮಾಡುವದರಲ್ಲಿ. ಬನ್ನಬಡುವವೊಲ್–ಕಷ್ಟಪಡುವವನ ಹಾಗೆ ಎಂದಿರುವದರಿಂದ ಕಷ್ಟವು ಬರೀ ತೋರಿಕೆಯೇ ಹೊರತು ನಿಜವಾಗಿಲ್ಲವೆಂದರ್ಥ (ಒಬ್ಬನಿಗೆ ಕನಸಿನಲ್ಲಿ ಕಷ್ಟವು ತೋರಿದರೂ ಅವನಿಗೆ ಅದು ನಿಜವಾಗಿ ಹೇಗಿಲ್ಲವೊ ಹಾಗೆ).

೧೨. ಲೇಪವಡೆದಿರೆ—ಅಂಟಿಕೊಂಡಿರಲಾಗಿ. ಸಂಸೃತಿಕೂಪದೊಳು—ಸಂಸಾರವೆಂಬ ಬಾವಿಯಲ್ಲಿ. ಬಿದ್ದು+ಆವಗ (ಯಾವಾಗಲೂ) + ಆಳುತ್ತ (ಮುಳುಗುತ್ತ +

ವುಸಿ ಕಣಾ ಜೀವತ್ವ, ದುಃಖದ । ಘುಸಣಿಯಾತ್ಮಂಗಿಲ್ಲ, ಜಲದಲಿ ।
ವಿಸುವ ದಿನಕರಬಿಂಬ ಜಲಗುಣಕಂಪಕಲುಷಗಳ ॥
ಪಸರದಿಂದನುಭವಿಸುವಂದದ । ಲಸಮುಚಿಸುಮಯರೂಪನಿದರೊ
ಮಸಗುವನೆ ? ನಿಸ್ಸಂಗ, ನಿರ್ಮಲ, ನಿತ್ಯಸುಖಿ ತಾನು ೧೩ ॥

ಲಿಂಗದೇಹವ ಹೊದ್ದಿದಂತಿಹ, । ಸಂಗವದರೊಳಗಿಲ್ಲ, ಘಟನೊಳು ।
ಸಂಗಿಸಿದ ನಭ ಘಟದ ಕೂಡೆಡೆಯಾಡುವಂದದಲಿ ॥
ಲಿಂಗದೊಡನೆಡೆಯಾಡಿ, ಬಹುಜ । ನ್ಮಂಗಳಲಿ ತೊಳಲುವನು, ಲಿಂಗಕೆ
ಭಂಗವಾಗಲಖಂಡಚಿನುಮಯನೆನಿಸಿಕೊಂಡಿಹನು ॥ ೧೪ ।

ಜೋಹದಂದದ ಜನ್ಮಜನ್ಮದ । ದೇಹಗಳು ಸುಖದುಃಖಕರಗಳು ; ।
ದೇಹಿಗಳಿಗಾವಾಗ ಲಿಂಗಶರೀರಸಂಗದಲಿ; ॥
ಮೋಹಿಸುತ ಮಾಯಾಪ್ರಪಂಚ । ದೇಹಿಯೆನಿಸುತ ಮರೆದು ತನ್ನನು, ।
ರಾಹು ತುಡುಕಿದ ಚಂದ್ರಮಂಡಲದಂತೆ ತೋರುವನು ॥ ೧೫ ॥

---

ಏಳುತಿಹನಾಗಿ. ತತ್ಪದವ—ಪರಮಾತ್ಮಸ್ಥಿತಿಯನ್ನು. ಈ ಶಬ್ದದ ಸ್ಥಲದಲ್ಲಿ ಕೆಲವು ಕಡೆ 'ತತ್ಪಥವ' ಎಂದೂ ಇದೆ. 'ತತ್ಪಥ' ಎಂದರೆ ಆ ದಾರಿ. ಸ್ವಪ್ರ ಅವಿದ್ಯೆಯ

೧೩. ಘುಸಣಿ–ಶಿಕ್ಕಾಟ. ಜಲ . . ಕಲುಷಗಳ—ನೀರಿನ ಗುಣವಾದ ನಡುಗುವಿಕೆಯನ್ನೂ ಹೊಲಸನ್ನೂ. ಪಸರದಿಂದ—ಬಹಳವಾಗಿ. ಮಸಗುವನೆ–ಸೇರಿಕೊಂಡು ಒದ್ದಾಡುವನೆ ? (ನಿಸ್ಸಂಗತ್ವ ಮೊದಲಾದ ಗುಣಗಳುಳ್ಳ ಆತ್ಮನಿಗೆ ಸಂಸಾರದ ತಾಪತ್ರಯವಿಲ್ಲವೆಂದರ್ಥ).

೧೪. ಲಿಂಗದೇಹವ—ಮನಸ್ಸು ಮತ್ತು ಇಂದ್ರಿಯಗಳಿಂದ ಕೂಡಿದಂಥ ಸೂಕ್ಷ್ಮ ಶರೀರವನ್ನು. ಸಂಗಿಸಿದ—ಸಂಗವನ್ನು (ಸಂಬಂಧವನ್ನು) ಪಡೆದ. ನಭ—ಆಕಾಶವು ಎಡೆಯಾಡಿ—ಈ ಲೋಕಕ್ಕೂ ಪರಲೋಕಕ್ಕೂ ಸುತ್ತಾಡಿ. ಲಿಂಗಕೆ. .ಎನಿಸಿಕೊಂಡಿಹನು—ಸೂಕ್ಷ್ಮಶರೀರದ ಬಂಧವು ಹೋದರೆ ಅವನು ಬ್ರಹ್ಮನೆನಿಸುವನು. (ಸ್ಥೂಲ ಶರೀರವು ಬಿದ್ದುಹೋದರೂ ಜೀವನು ಸೂಕ್ಷ್ಮಶರೀರದಲ್ಲಿಯೇ ಇರುವನು. ಆ ಸೂಕ್ಷ್ಮ ಶರೀರವು ಜ್ಞಾನಾಗ್ನಿಯಿಂದ ಸುಟ್ಟುಹೋದರೆ ೩. ಅ. ೬೮ ಪ. ದಲ್ಲಿ ಹೇಳಿರುವಂತೆ ಅದಕ್ಕಿಂತ ಒಳಗಣ ಶರೀರವೆಂದು ಹೇಳಬೇಕಾದರೆ ಬ್ರಹ್ಮಕ್ಕೇ ಹೇಳಬೇಕಾಗುವದರಿಂದ ಅವನು ಬ್ರಹ್ಮವೇ ಆಗುವನು).

೧೫. ಜೋಹ-ವೇಷ. ದೇಹಿಗಳಿಗೆ—ಜೀವರಿಗೆ. ಆವಾಗ—ಯಾವಾಗಲು. ಮಾಯಾಪ್ರಪಂಚಕೆ–ಪ್ರಪಂಚವು ನಿಜವಾಗಿ ಇಲ್ಲವೇ ಇಲ್ಲ; ಆದರೂ ಇರುವಂತೆ

ಅಂಕೆಯಿಲ್ಲದ ರಾಜ್ಯವನು ನಿ । ಶ್ಯಂಕೆಯಿಂದಾಳುವ ನೃಪಾಲಗೆ ।
ಮಂಕು ಹಿಡಿಯಲು ತನ್ನನೇ ತಾ ರಂಕನೆಂಬಂತೆ ॥
ಕೊಂಕು ಕೊರತೆಗಳಿಲ್ಲದಿರ್ಪ ನಿ । ರಂಕುಶದ ಪರಬೊಮ್ಮ ತನ್ನನು ।
ಸಂಕಲೆಯ ನರನಂತೆ ಕಿಂಕರನೆಂಬನೆಲ್ಲರಿಗೆ ॥ ೧೬ ॥

ಲಿಂಗತನು ಚಿಚ್ಛಾಯೆಯೊಳು ತಾ । ಸಂಗಿಸಿ ಸಚೇತನವೆನಿಸಿ ಬಹು ।
ಭಂಗಬಡುವದು ದುಃಖಸುಖದಲಿ ಕರ್ಮಫಲದಿಂದ ; ॥
ಅಂಗರಹಿತನಖಂಡಚಿನುಮಯ, । ಸಂಗವಿಲ್ಲದ ನಿಜ, ನಿರಂಜನ, ।
ಮಂಗಳಾತ್ಮಗೆ ದುಃಖಸುಖಸಂಬಂಧವಿಲ್ಲೆಂದ ॥ ೧೭ ॥

ಸಂಗದೋಷದಲುತ್ತಮಗೆ 'ದು । ಸ್ಸಂಗಿ' ಯೆಂಬಭಿಧಾನ ಬಂದಂ ।
ತಂಗರಹಿತನು ಸಂಗದೂರನು ಜೀವನೆನಿಸುವನು; ॥
ಲಿಂಗಸಂಗವ ಪಡೆದು ದುಃಖತ । ರಂಗದೊಳಗಾಳುವನು; ಲಿಂಗಕೆ ।
ಭಂಗವಾಗಲಖಂಡನಾಗಿಹ ನಿಶ್ಚಲಾತ್ಮಕನು ॥ ೧೮ ॥

---

ಕಾಣುವದು. ಆದ್ದರಿಂದ ಇಂಥ ಮಾಯಾಪ್ರಪಂಚಕ್ಕೆ. ದೇಹಿಯೆನಿಸನು—ದೇಹವುಳ್ಳ ಜೀವನೆನಿಸುವನು. ತನ್ನನು—ತನ್ನ ಅಖಂಡಾನಂದಸ್ವರೂಪವನ್ನು. 'ರಾಹು ತುಡುಕಿದ ಚಂದ್ರಮಂಡಲದಂತೆ' ಎಂಬ ಹೋಲಿಕೆಯಿಂದ ರಾಹು ನಿಜವಾಗಿ ಚಂದ್ರನನ್ನು ತುಡುಕಿರದೆ ನಮಗೂ ಚಂದ್ರಮಂಡಲಕ್ಕೂ ಹೇಗೆ ಅಡ್ಡಲಾಗಿರುವದು ಮಾತ್ರವೋ ಹಾಗೆ ದೇಹಗಳು ಆತ್ಮನಿಗೆ ಹತ್ತಿಕೊಂಡಿರದೆ ನಮಗೂ ಆತ್ಮನಿಗೂ ನಡುವೆ ಅಡ್ಡಲಾಗಿ ಮಾತ್ರ ಇರುವವೆಂದು ತಿಳಿಯಬೇಕು.

೧೬. ಅಂಕೆಯಿಲ್ಲದ—ಇಷ್ಟೆಂದು ನೆಲೆಯಿಲ್ಲದ. ನಿಶ್ಯಂಕೆಯಿಂದ—ತನ್ನನ್ನು ಯಾರು ಗೆಲ್ಲುವರೋ ಎಂಬ ಅಳುಕು ಇಲ್ಲದೆ. ರಂಕ—ತಿರುಕ (ನೃಪಾಲನು ಭಾಗ್ಯದಲ್ಲಿ ಹೆಚ್ಚಿನವನು ಮತ್ತು ಇತರರ ಮೇಲೆ ಆಜ್ಞೆಯನ್ನು ನಡೆಸುವವನು. ತಿರುಕನು ಬಡವರಲ್ಲಿ ಹೆಚ್ಚಿನವನು ಇತರರ ಆಳಾಗಿರುವವನು. ಒಂದಕ್ಕೊಂದು ವಿರುದ್ಧವಾದ ಈ ಎರಡು ಭಾವನೆಗಳು ಒಬ್ಬನಲ್ಲಿಯೆ ಬಂದಪ್ಪನ್ನು ತೋರಿಸುವದಕ್ಕೆ ಈ ಹೋಲಿಕೆಯು ಉಪಯೋಗವಾಗಿದೆ). ಕೊಂಕು—ಕೆಟ್ಟಗುಣವಿರುವದು. ಕೊರತೆ—ಗುಣವು ಕಡಿಮೆಯಾಗಿರುವದು.

೧೭. ಚಿಚ್ಛಾಯೆಯೊಳು—ಜ್ಞಾನದ ಪ್ರಭಾವದೊಡನೆ. ಸಂಗಿಸಿ—ಸಂಬಂಧವನ್ನು ಪಡೆದು. ಅಂಗರಹಿತನು+ಅಖಂಡಚಿನುಮಯ.

ಮರೆದು ತನ್ನ ನಿಜಸ್ವರೂಪವ । ಗುರುಮುಖದಲದನರಿದೆನೆಂದೆನ ।
ಲರಿವುಮರವೆಗಳುಂಟೆ ? ಆತ್ಮಗೆ, ಮನದ ಮರವೆಯದು; ॥
ಅರಿವುಮಲ್ಲದು, ಮರೆವೆಯಲ್ಲದು, । ಬರಿಯ ಬೆಳಕಿನ ಬೆಳಕೆ ಪೊಳೆವುದು, ।
ಕರಣದೊಳಗರಿವೆನಿಸಿ ಮರವೆಯದೆನಿಸಿಕೊಳುತಿಹುದು ॥ ೧೯ ॥

ಅರಿದು ನೀ ಪರವಸ್ತುವಾದೊಡೆ । ಮರೆದು ನೀನೇನಾದೆ ? ಅಹಹಾ ! ।
ಅರಿವಿನಲಿ ಬೇರೊಬ್ಬ ಮರವೆಯಲೊಬ್ಬರೆರಡುಂಟೆ ? ॥
ಅರಿವುಮರವೆಗಳಲ್ಲಿ ನೀನೆಡೆ । ವರಿಯದರಿವಾಗಿಪ್ಪೆ, ಕೇಳಾ ।
ಅರಿವುಮರವೆಗಳೆಂಬುವೆಲ್ಲವು ಕರಣಧರ್ಮಗಳು ॥ ೨೦ ॥

ಮರುಳರಕಟಾ ! ಮೇಘಮಂಡಲ । ತರಣಿಮಂಡಲಕಡ್ಡವಾಗಲು ।
ತರಣಿ ನಿಷ್ಪ್ರಭನೆಂಬ ತೆರದಲಿ, ಕರಣಧರ್ಮಗಳು ॥
ಭರಿತನಪ್ಪಾತುಮಗೆ ಮರೆಯಾ । ಗಿರುತಿರಲ್ಕದನರಿಯದಜ್ಞರು ।
ಬರಿದೆ ಸಂಸೃತಿಬದ್ಧನೆಂಬರು ನಿತ್ಯಮುಕ್ತನನು ॥ ೨೧ ॥

---

೧೮. ಸಂಗದೋಷದಲಿ—ಕೆಟ್ಟದ್ದರ ಸಂಬಂಧದಿಂದ. ಅಭಿಧಾನ—ಹೆಸರು. ಸಂಗದೂರನು ಜೀವನೆನಿಸುವನು. ಅಖಂಡನಾಗಿಹ—ಅಖಂಡನಾಗಿರುವನು.

೧೯. ಅರಿವುಮಲ್ಲದು ಮರವೆಯುಲ್ಲದು—ಅರಿಯುವದೆಂದರೆ ಏನನ್ನಾದರೂ ಅರಿಯುವದು ; ಮರೆಯುವದೆಂದರೆ ಏನನ್ನಾದರೂ ಮರೆಯುವದು. ಹೀಗೆ ಅರಿವೂ ಮರವೂ ವಿಷಯಗಳ ಸಂಬಂಧವುಳ್ಳವುಗಳಾಗಿ ಮನಸ್ಸಿನ ಕೆಲಸವಾಗಿರುವವು. ಆತ್ಮಸ್ವರೂಪವು ಅರಿವೂ ಅಲ್ಲ ; ಮರವೂ ಅಲ್ಲ. ಬರಿಯ ಬೆಳಕಿನ ಬೆಳಕು—ಆತ್ಮಸ್ವರೂಪವನ್ನು ಬೆಳಕೆಂದು ಬಹಳ ಕಡೆ ಹೇಳುವದುಂಟು. ಇಂಥ ಸಂದರ್ಭದಲ್ಲಿ ಬೆಳಕೆಂದರೆ ಸೂರ್ಯಚಂದ್ರರ ಬೆಳಕಿನಂತೆ ಇಂದ್ರಿಯಕ್ಕೆ ವಿಷಯವಾಗುವಂಥ ಬೆಳಕೆಂದು ತಿಳಿಯಬಾರದು. 'ನನ್ನ ಮನಸ್ಸಿಗೆ ಅದು ಹೊಳೆಯಿತೆಂದು' ನುವು ಹೇಳುವೆವಷ್ಟೆ ! ಅಲ್ಲಿ ಹೊಳೆಯಿತೆಂದರೇನು ? ತಿಳಿಯಿತೆಂದರ್ಥ. ಅದರಂತೆ ಬೆಳಕೆಂದರೆ ಜ್ಞಾನ. ಕರಣ—ಮನಸ್ಸು (ವಿಷಯಗಳನ್ನು ಅರಿಯುವ ಸಾಧನ). ನಿಜವಾದ ಜ್ಞಾನವೆ ಉಪಾಧಿಯಾದ ಮನಸ್ಸಿನಿಂದ ಅರಿವು, ಮರವು ಎನಿಸಿಕೊಳ್ಳುವದು.

೨೦. (ನೀನು+) ಎಡೆವರಿಯದ—ಎಡೆಬಿಡದ. ಕರಣಧರ್ಮಗಳು— ಮನಸ್ಸಿನ ಧರ್ಮಗಳು.

೨೧. ಈ ಶ್ಲೋಕದ ತಾತ್ಪರ್ಯವು ಹಸ್ತಾಮಲಕರು ಹೇಳಿರುವ ಈ ಕೆಳಗಿನ ಶ್ಲೋಕದ ಭಾವವನ್ನು ನೆನಪುಗೊಡುತ್ತದೆ.—" ಘನಚ್ಛನ್ನದೃಷ್ಟಿರ್ಘನಚ್ಛನ್ನಮರ್ಕಂ।

ಕರವ ಕಣ್ಣಿಗೆ ಮರೆಯ ಮಾಡಲು । ತರಣಿಮಂಡಲವಡಗಿತೆಂಬಂ ।
ತರರೆ ! ಕರಣಂಗಳಿಗೆ ಮರೆಯಾಗಿದ್ದೊಡಾ ಜ್ಞಾನ ॥
ಭರಿತನಪ್ಪಾತುಮನ ನಿಲ್ಲೆಂ । ಬರೆ ? ಮರುಳರವರೆಲೆಲೆ, ತುಚ್ಛದ ।
ಕರಣವೆತ್ತಲು ! ಸಚ್ಚಿದಾನಂದೈಕರಸವೆತ್ತ ! ॥ ೨೨ ॥

ವಿದ್ಯೆಯಾತ್ಮಗುಪಾಧಿಯಾಗಲು । ಸಿದ್ಧಿಸುವವಣಿಮಾದಿಗಳು, ಸಂ ।
ಬದ್ಧವಹೆ ಸರ್ವಜ್ಞತಾದಿಷಡಂಗಚಿತ್ರಗಳು, ॥
ನಿರ್ಧರಿಸಿ ಸೃಷ್ಟ್ಯಾದಿಗಳನ । ತ್ಯದ್ಭುತದ ಸಾಹಸದಿ ಶಿಷ್ಟರ ।
ನುದ್ಧರಿಸಿ ದುಷ್ಟರನು ಶಿಕ್ಷಿಸುತಿರ್ಪ ಕರ್ಮಗಳು ॥ ೨೩ ॥

ವಿಶ್ವರೂಪ, ಹಿರಣ್ಯಗರ್ಭನು, । ವಿಶ್ವಮುಖನೀಶ್ವರನು, ನಿಜ, ವಿ ।
ಶ್ವಾಶ್ರಯನು, ವಿಶ್ವಾಧಿವಾಸನು, ವಿಶ್ವಸಂಹರ್ತ, ॥
ವಿಶ್ವನಾಟಕಸೂತ್ರಧಾರನು, । ವಿಶ್ವಗ, ವಿರಾಟೆನಿಸಿ ಮೆರೆವನು, ।
ವಿಶ್ವದಂತರ್ಯಾಮಿ, ವಿಶ್ವನಿಯಂತೃ, ವಿಶ್ವಾತ್ಮ ॥ ೨೪ ॥

---

ಯಥಾ ನಿಷ್ಪ್ರಭಂ ಮನ್ಯತೇ ಚಾತಿಮೂಢಃ ॥ ತಥಾ ಬದ್ಧವದ್ಭಾತಿ ಯೋ ಮೂಢ ದೃಷ್ಟೇಃ । ಸ ನಿತ್ಯೋಪಲಬ್ಧಿಸ್ವರೂಪೋಽಹಮಾತ್ಮಾ ॥" ನಿಷ್ಪ್ರಭನು—ತೇಜಸ್ಸಿಲ್ಲದವನು ಭರಿತನಪ್ಪಾತುಮಗೆ—ಪೂರ್ಣನಾದ ಆತ್ಮನಿಗೆ. ಅದನರಿಯದ— ಮನಸ್ಸು ಮೊದಲಾದ ಕರಣಗಳು ಆತ್ಮನನ್ನು ಮರೆಮಾಡಿರುವವೆಂದು ತಿಳಿಯದ. ಸಂಸೃತಿಬದ್ಧನು—ಸಂಸಾರದ ಕಟ್ಟಿಗೆ ಸಿಕ್ಕಿದವನು.

೨೨. ಕರಣವೆತ್ತಲು—ಮನಸ್ಸು ಮೊದಲಾದ ಕರಣಗಳಿಂದ ಏನಾದೀತು ! (ಅಖಂಡನಾದ ಆತ್ಮನನ್ನು ಮನಸ್ಸು ಮೊದಲಾದ ಪರಿಚ್ಛಿನ್ನವಾದ ಕರಣಗಳು ನಿಜವಾಗಿ ಮರೆಮಾಡಲಾರವೆಂದು ತಾತ್ಪರ್ಯ.)

೨೩. ಅಣಿಮಾದಿಗಳು—೪ ಅ. ೩೮ ಪ. ದಲ್ಲಿ ಹೇಳಿದೆ. ಸರ್ವಜ್ಞತಾದಿ—೫ ಅ ೬ ಪ. ದಲ್ಲಿ ಹೇಳಿದೆ. ಅತ್ಯದ್ಭುತದ—ಬಹಳ ಹೆಚ್ಚಿನ.

೨೪. ವಿಶ್ವರೂಪ—ಜಗತ್ತಿನ ರೂಪವನ್ನು ಪಡೆದಿರುವವನು. ಹಿರಣ್ಯಗರ್ಭನು—ಹಿರಣ್ಯಗರ್ಭನೆಂಬ ಹೆಸರಿನ ಸೂಕ್ಷ್ಮಶರೀರಗಳ ಸಮಷ್ಟಿಯ ಅಭಿಮಾನಿಯು. ವಿಶ್ವಮುಖ—ಜಗತ್ತನ್ನೇ ಮುಖವಾಗಿ ಉಳ್ಳವನು ಅಥವಾ ಸರ್ವದಿಕ್ಕುಗಳ ಕಡೆಗೂ ಮುಖವುಳ್ಳವನು ಅಥವಾ ಬಹು ಮುಖನು. ನಿಜ—ನಿಜವಾಗಿ ಇರುವವನು. ವಿಶ್ವಾಶ್ರಯನು—ಜಗತ್ತಿಗೆ ಆಧಾರವಾದವನು. ವಿಶ್ವಾಧಿವಾಸನು—ಜಗತ್ತಿಗೆ ಆವಾಸಸ್ಥಾನನಾ

ಆತನಾ ಶ್ವಾಸಗಳೆ ವೇದಗ। ಳಾತನಕ್ಷಿಯೆ ಸೂರ್ಯಚಂದ್ರಮ।
ರಾತನವಯವವೆಲ್ಲವೀ ಸತ್ಯಾದಿಲೋಕಗಳು; ॥
ಆತನಿಂದಾ್ರದ್ಯಖಿಲದೇವ। ವ್ರಾತಮುಯನೀ ವಿಶ್ವದೊಳಹೊರ।
ಗಾತನೇ ಪರಿಪೂರ್ಣ ವಿಶ್ವಾತೀತನೆನಿಸುವನು ॥ ೨೫ ॥

ಈ ಪರಿಯ ಬಹುಗುಣಗಳಲಿ ಬಹು। ರೂಪವೆನಿಸಲನಂತನಾಮಗ।
ಳಾ ಪರಮಪುರುಷಂಗೆ ಶ್ರುತಿಸಮ್ಮತಗಳಾಗಿಹವು; ॥
ತಾಪಕಾರಣವಾದ ಸಂಸೃತಿ। ಲೇಪವಾತಂಗಿಲ್ಲವೊಬ್ಬನೆ।
ಭಾಪು! ವಿದ್ಯಾಭಾಸದಿಂ ಬಹುರೂಪನಾಗಿಹೆನು ॥ ೨೬ ॥

ಎಲೆ, ಅವಿದ್ಯಾವಿದ್ಯೆಯೆಂಬೀ। ಬಲುಹುರಿಯ ಹೆಗ್ಗದಲಿ ಬಿಗಿವಡೆ।
ದಳಲುತಿಹ ಜೀವೇಶರೆಂಬಿವು ವಾಚ್ಯವೆನಿಸುವವು; ॥

---

ದವನು. ವಿಶ್ವಸಂಹರ್ತ– ಜಗತ್ತನ್ನು ಲಯಮಾಡುವವನು. ವಿಶ್ವನಾಟಕಸೂತ್ರಧಾರನು—ಜಗತ್ತೆಂಬ ನಾಟಕದ ಸೂತ್ರಧಾರನು. ವಿಶ್ವಗ—ಜಗತ್ತಿನಲ್ಲೆಲ್ಲ ವ್ಯಾಪಿಸಿರುವವನು. ವಿರಾಟ್–ಸಮಷ್ಟಿಸ್ಥೂಲಶರೀರಾಭಿಮಾನಿ. ವಿಶ್ವದಂತರ್ಯಾಮಿ—ಜಗತ್ತಿನೊಳಗೆ ವ್ಯಾಪಿಸಿಕೊಂಡಿರುವವನು. ವಿಶ್ವನಿಯಂತೃ—ಜಗತ್ತಿನ ಮೇಲೆಲ್ಲ ಅಧಿಕಾರವನ್ನು ನಡೆಸುವವನು. ವಿಶ್ವಾತ್ಮ–ಜಗತ್ತಿನ ಜೀವಸ್ವರೂಪನಾಗಿರುವವನು.

೨೫. ಆತ . . . ವೇದಗಳು—"ಅಸ್ಯ ಮಹತೋ ಭೂತಸ್ಯ ನಿಃಶ್ವಸಿತಮೇತದ್ಯದೃಗ್ವೇದ . . ." ಎಂಬ ಶ್ರುತಿಯಂತೆ ವೇದಗಳೆಲ್ಲ ಬ್ರಹ್ಮದ ನಿಃಶ್ವಾಸ. ಆತನವಯವವೆಲ್ಲ—"ವಿಷ್ಟಭ್ಯಾಹಮಿದಂ ಕೃತ್ಸ್ನಮೇಕಾಂಶೇನ ಸ್ಥಿತೋ ಜಗತ್" ಎಂಬ ಗೀತೋಕ್ತಿಯಂತೆ ಜಗತ್ತೆಲ್ಲ ಬ್ರಹ್ಮದ ಅವಯವ. ಸತ್ಯಾದಿಲೋಕಗಳು—ಇದು ಮೇಲಿನ ಲೋಕದಿಂದ ಮೊದಲು ಮಾಡಿಕೊಂಡು ಹೇಳಿದ ಮಾತು. ಲೋಕಗಳು ೧೪ ಇವೆ ಅತಲ, ವಿತಲ, ಸುತಲ, ತಲಾತಲ, ಮಹಾತಲ, ರಸಾತಲ, ಪಾತಾಲ ಈ ಏಳು ಕೆಳಗಿನ ಲೋಕಗಳು. ಭೂಲೋಕ, ಭುವರ್ಲೋಕ, ಸುವರ್ಲೋಕ, ಮಹರ್ಲೋಕ, ಜನೋಲೋಕ ತಪೋಲೋಕ, ಸತ್ಯಲೋಕ, ಈ ಏಳು ಮೇಲಿನ ಲೋಕಗಳು. ವಿಶ್ವಾತೀತನು—"ಸ ಭೂಮಿಂ ವಿಶ್ವತೋ ವೃತ್ವಾ ಅತ್ಯತಿಷ್ಠದ್ದಶಾಙ್ಗುಲಂ" ಎಂಬ ಪುರುಷಸೂಕ್ತದಂತೆ ಬ್ರಹ್ಮವು ಜಗತ್ತನ್ನೆಲ್ಲ ವ್ಯಾಪಿಸಿ ಮೇಲೆಯೂ ಇರುವದು.

೨೬. ವಿದ್ಯಾಭ್ಯಾಸದಿಂ—(ಈಶ್ವರನು) ತನ್ನ ಅಧೀನದಲ್ಲಿರುವ ಮಾಯಾಶಕ್ತಿಯ ತೋರಿಕೆಯಿಂದ.

ಕಳೆದುಪಾಧಿದ್ವಯುವ, ನಿಜವಾ । ಗುಳಿದಖಂಡಾದ್ವೈತಚಿದ್ಘನ ।
ದುಳಿಮೆಯಸಿಪದದೈಕ್ಯದರ್ಥವು ಮಗನೆ ಕೇಳೆಂದ ॥ ೨೭ ॥

ಎಂದೊಡೆಂದನು ಗುರುವೆ, ಅಸಿಪದ । ದಂದವಾವುದಖಂಡವಸ್ತುವ ।
ದೆಂದೊಡೆಂತಿಹುದೈಕ್ಯವೆಂತಹುದುಭಯಪದಗಳಿಗೆ ? ॥ ।
ಸಂದ ಲಕ್ಷಣೆಯಾವುದದ ತಿಳಿ । ವಂದದಿಂ ಕೃಪೆಮಾಡಬೇಕೆನ ।
ಗೆಂದು ಬಿನ್ನಹಮಾಡಿದನು ಶುಕ ತಂದೆಯಡಿಗೆರಗಿ ॥ ೨೮ ॥

ದೇವಜೀವರ ಭೇದವೆಂಬುದ । ಭಾವಿಸುತ್ತಿರೆ ಚಿನ್ನಕಬ್ಬಿಣ ।
ವಾವುದಾದೊಡದೇನು ! ಸಂಕಲೆ ತಪ್ಪದೆಲೆ ಮಗನೆ ॥
ಈ ವಿಧದ ಪ್ರತಿಬಂಧವಳಿಯದೆ । ದೇವನಾಗಲಿ ಜೀವನಾಗಲಿ ।
ಕೇವಲಾನಂದೈಕರಸವುಯವಸ್ತುವೆಂತಹನು ? ॥ ೨೯ ॥

ತನಯ ತ್ವಂಪದದರ್ಥವಹ ಜೀ । ವನ ಪರಿಚ್ಛಿನ್ನತ್ವವಜ್ಞತೆ ।
ಯೆಣಿಸೆ ದುಃಖಿತ್ವವುಮನೀಶ್ವರಪ್ರತ್ಯಗಾದಿಗಳು ॥
ಅನಘ, ತತ್ಪದದರ್ಥವಾದೀ । ಶನ ಪರೋಕ್ಷಾನಂತಸುಖ ವೊ।
ಬ್ಬನಲಿ ದೊರೆಕೊಳದಾಗಿ ಮಾಳ್ಪವು ಭಾಗಲಕ್ಷಣೆಯ ॥ ೩೦ ॥

---

೨೭. ಉಪಾಧಿದ್ವಯುವ—ಅವಿದ್ಯೆ ಮತ್ತು ವಿದ್ಯೆ ಎಂಬ ಎರಡು ಉಪಾಧಿಗಳನ್ನೂ. ಉಳಿದ+ಅಖಂಡಾದ್ವೈತಚಿದ್ಘನದ+ಉಳಿಮೆಯು. ಉಪಾಧಿಗಳನ್ನು ಕಳೆದ ಅರ್ಥವು ಲಕ್ಷ್ಯಾರ್ಥವೆನಿಸಿ ಅಖಂಡವೆನಿಸಿಕೊಳ್ಳುವದು. ಉಪಾಧಿಯಿಂದ ಕೂಡಿದ ಅರ್ಥವು ಮಾತ್ರ ವಾಚ್ಯಾರ್ಥವೆನಿಸಿ ಖಂಡವೆನಿಸಿಕೊಳ್ಳುವದು.

೨೯. ದೇವಜೀವರ—ಈಶ್ವರನ ಮತ್ತು ಜೀವನ. ಬಂಧಕ—ಈಶ್ವರನಿಗೆ ತಾನು ಜೀವರಿಗೆಲ್ಲ ಈಶ್ವರನೆಂಬ ಭೇದಭಾವವೂ ಬಂಧಕವು; ಜೀವನಿಗೆ ತಾನು ಈಶ್ವರಾಧೀನನಾದ ಜೀವನೆಂಬ ಭೇದಭಾವವೂ ಬಂಧಕವು. ಚಿನ್ನಕಬ್ಬಿಣ . . . . ತಪ್ಪದು—ಈಶ್ವರನೆಂಬ ಭೇದಭಾವನೆಯು ಚಿನ್ನದ ಬೇಡಿಯಂತೆ; ಜೀವನೆಂಬ ಭೇದಭಾವನೆಯು ಕಬ್ಬಿಣದ ಬೇಡಿಯಂತೆ; ಎರಡೂ ಬಂಧಕವೆ.

೩೦. ಪರಿಚ್ಛಿನ್ನತ್ವ—ಪರಿಮಿತಿಯನ್ನು ಹೊಂದಿರುವದು. ಅಜ್ಞತೆ—ತಿಳಿಯದಿರುವದು. ಅನೀಶ್ವರ—ಪ್ರಭುಶಕ್ತಿಯಿಲ್ಲದಿರುವದು. ಪ್ರತ್ಯಕ್—ಒಳಗಡೆ ಕಾಣುತ್ತಿರುವದು. ಪರೋಕ್ಷ—ಕಾಣದೆ ಹೊರಗಿರುವದು. ಅನಂತಸುಖ—ಬಹಳ ಸುಖವಿರುವದು. ಒಬ್ಬನಲಿ ದೊರೆಕೊಳದು—ಪರಿಮಿತಿಯನ್ನು ಹೊಂದಿರುವದು ಮತ್ತು

ವಿಹಿತವಹ ಲಕ್ಷಣೆಯು ತಿಳಿ ನೀ । ಜಹದಜಹದೆನಿಸಿರ್ಪುದದ ನಿ ।
ರ್ವಹಿಸಿ 'ಸೋಽಯಂ ದೇವದತ್ತ' ಯೆನಿಪ್ಪ ವಾಕ್ಯದಲಿ ॥
ಬಹುವಿರೋಧದ ಸೋಯಮಂಶವ । ಸಹಜವಿಂವಲಿ ಕಳೆದುಳಿದು ಸ ।
ನ್ನಿಹಿತನಾಗಿಹ ದೇವದತ್ತನದೊಬ್ಬನಾಗಿಹನು ॥ ೩೧ ॥

ತತ್ತೆನಿಪ ಶಬ್ದಕೆ ಪರೋಕ್ಷವ । ದರ್ಥ; 'ತ್ವಂ' ಎನಲಭಿಮುಖಾರ್ಥವ ॥
ದಿತ್ತೆರದ ಪದಗಳ ವಿರೋಧಾಂಶಗಳ ಕಳೆದುಳಿದ ॥
ತಥ್ಯವೈಕ್ಯವಖಂಡವದ್ವಯ । ಸತ್ಯಸಹಜಾನಂದ ನಿಜಸಂ ।
ವಿತ್ತದೇ ಕೇಳಸಿಪದಾರ್ಥದ ಸಾಮರಸ್ಯರಸ ॥ ೩೨ ॥

---

ಅನಂತನಾಗಿರುವದು; ನಿಜವಾದ ಏನೂ ತಿಳಿಯದಿರುವದು ಮತ್ತು ಎಲ್ಲವನ್ನೂ ತಿಳಿದಿರುವದು; ದುಃಖರೂಪವಾಗಿರುವದು ಮತ್ತು ಸುಖರೂಪವಾಗಿರುವದು; ದಾಸನಾಗಿರುವದು ಮತ್ತು ಪ್ರಭುವಾಗಿರುವದು; ಒಳಗಿರುವದು ಮತ್ತು ಹೊರಗಿರುವದು—ಈ ಬಗೆಯ ವಿರುದ್ಧಗುಣಗಳು ಒಬ್ಬನಲ್ಲಿಯೇ ಸಂಭವಿಸುವದಿಲ್ಲ. ಭಾಗಲಕ್ಷಣೆ—ವಿರೋಧವಾದ ಭಾಗಗಳನ್ನು ಬಿಟ್ಟು ಉಳಿದ ಲಕ್ಷ್ಯಾರ್ಥವನ್ನು ತೆಗೆದುಕೊಳ್ಳುವದು.

೩೧. ಜಹದಜಹತ್—(ಜಹತ್+ಅಜಹತ್) ಬಿಟ್ಟೂ ಬಿಡದ ಲಕ್ಷಣೆ ಉದಾಹರಣೆ—ಗಂಗೆಯಲ್ಲಿ ಹಳ್ಳಿಯೆಂದರೆ ತೀರದಲ್ಲಿ ಎಂದರ್ಥವಾಗುವದರಿಂದ ಗಂಗೆ ಎಂಬ ಪದಕ್ಕೆ ಜಹಲ್ಲಕ್ಷಣೆ. ಏಕೆಂದರೆ ಇಲ್ಲಿ ಗಂಗೆ ಎಂಬದರರ್ಥವು ಬಿಟ್ಟುಹೋಗಿದೆ. 'ಕಟ್ಟಿಗೆಗಳು ಒಳಕ್ಕೆ ಬರಲಿ' ಏಕೆಂದರೆ 'ಕಟ್ಟಿಗೆಯುಳ್ಳವರು ಬರಲಿ' ಎಂದರ್ಥವಾಗುವದರಿಂದ ಅದು ಅಜಹಲ್ಲಕ್ಷಣೆ. ಏಂದರೆ ಕಟ್ಟಿಗೆಯ ಅರ್ಥವು ಇಲ್ಲಿ ಬಿಟ್ಟುಹೋಗಿಲ್ಲ 'ಅವನೇ ಇವನು' ಎಂಬಲ್ಲಿ ಆಗಿನ ಕಾಲ, ಈಗಿನ ಕಾಲ, ಆಗಿನ ದೇಶ, ಈಗಿನದೇಶ, ಇವುಗಳನ್ನು ಬಿಟ್ಟು ಮನುಷ್ಯನನ್ನೊಬ್ಬನನ್ನು ಇಟ್ಟುಕೊಂಡದ್ದರಿಂದ ಜಹದಜಹಲ್ಲಕ್ಷಣೆ. ಇದೇ ತತ್ತ್ವಮಸಿ ಎಂಬ ದಾಷ್ಟಾರ್ಂತಿಕಕ್ಕೆ ಬೇಕಾದದ್ದು. ಸೋಽಯಂ ದೇವದತ್ತ—ಆ ದೇವದತ್ತನೇ ಇವನು. ಸೋಯಮಂಶವ—ಅವನು, ಇವನು ಎಂಬ ಅಂಶಗಳನ್ನು. ಸನ್ನಿಹಿತನಾಗಿಹ—ಹತ್ತಿರ ಇರುವ.

೩೨. ತತ್ . . . . ದರ್ಥ—ಅದು ಎಂಬ ಮಾತಿಗೆ ದೂರದಲ್ಲಿರುವ ಈಶ್ವರನೆಂದರ್ಥ. ತ್ವಂ . . . ಖಾರ್ಥ—ನೀನು ಎಂಬ ಮಾತಿಗೆ (ಎದುರಿಗೆ) ಸಮೀಪದಲ್ಲಿ ಇರುವನೆಂದರ್ಥ. ವಿರೋಧಾಂಶಗಳ—ದೂರ ಮತ್ತು ಎದುರಿಗೆ ಎಂಬ ವಿರೋಧವಾದ ಅಂಶಗಳನ್ನು. ತಥ್ಯವು (ಸತ್ಯವಾದದ್ದು) + ಐಕ್ಯವು (ಒಂದೇ ಆಗಿ ಕೂಡಿಹೋಗಿರುವದು) + ಅಖಂಡವು (ವ್ಯಾಪಕವು) + ಅದ್ವಯ (ತನಗೆರಡನೆಯದಿಲ್ಲದ್ದು) ನಿಜಸಂವಿತ್ತು—ತನ್ನ ಜ್ಞಾನ. ಸಾಮರಸ್ಯರಸ—ಎರಡೂ ಕೂಡಿ ಒಂದೇ ಆಗಿರುವಂಥದ್ದು.

ಅಂಮು ಕಾವ್ಯವನೋದಿದಾ ವಟು । ವಿಂದು ಕವಿತಾಪ್ರೌಢನಾಗಿಹೆ ।
ನೆಂದದೊಬ್ಬನಲಹ ಪರೋಕ್ಷವನಭಿಮುಖತ್ವವನು ॥
ಹಿಂದುಗಳೆದಂದಿಂದೆನಿಸುವೀ । ಸಂದಳಿದ ವಟುದೇಹದಂದದಿ ।
ಚಂದದಸಿಪದದದ್ವಯಾನಂದಾರ್ಥ ಕೇಳೆಂದ　　॥ ೩೩ ॥

ಈಸುದಿನವಾ ದೇಶದಲಿ ಮನು । ಜೇಶನೆನಿಸಿರ್ದಾತ ಘನಸಂ ।
ಕ್ಲೇಶದಿಂ ಬಡತನದೊಳಿಹನೀ ದೇಶದೊಳಗೆಂದು ॥
ಘೋಷಿಸುವರೀ ಭಾಗ್ಯ, ಬಡತನ, । ದೇಶಭೇದಗಳೆಲ್ಲವೊಬ್ಬನೊ ।
ಳಾ ಸಮಾನದಲಸಿಪದಾರ್ಥವದದ್ವಯಾನಂದ　　॥ ೩೪ ॥

ಕುರುಹಿನಾಕಳ ಹಾಲ ಕರತಂ । ದಿರಿಸೆ ಭೇದವ ಕಾಣಲರಿಯದು; ।
ನಿರುತವಾಯಿಈ ಎಂಬ ಶಬ್ದದ ಭೇದವಿಂತೈಸೆ ! ।
ತರಳ ತಿಳಿಯಾ ಕ್ಷೀರವೊಂದೇ ! ಪರಿಯೊಳಗೆ ತೋರ್ಪಂತೆ ನಿಜಸುಖ ।
ದೆರಕವಹ ನಿರ್ದ್ವಂದ್ವವಸಿಪದದರ್ಥ ಕೇಳೆಂದ　　॥ ೩೫ ॥

ಕುಂಭದೊಳಗವಕಾಶವಾಗಿ । ರ್ದಂಬರನೆ ಒಳಹೊರಗನೆಲ್ಲವ ।
ತುಂಬಿಕೊಂಡಿಹುದೆಂದು ಬಯಲನು ಬಗೆದು ತಿಳಿವಂತೆ ॥
ಅಂಬುಜಾಸನ, ವಿಷ್ಣು, ಶತಮುಖ, । ಶಂಭು ಮೊದಲಾದಖಿಳಸುರನರ ।
ರೆಂಬ ಸರ್ವರೊಳೊಬ್ಬನಸಿಪದದರ್ಥ ಕೇಳೆಂದ　　॥ ೩೬ ॥

---

೩೩. ಪರೋಕ್ಷವನಭಿಮುಖತ್ವವನು—ಆ ಕಾಲದಲ್ಲಿ ಆ ದೇಶದಲ್ಲಿದ್ದವನೆಂಬ ದೂರದರ್ಥವನ್ನೂ ಈ ಕಾಲದಲ್ಲಿ ಈ ದೇಶದಲ್ಲಿರುವನೆಂಬ ಸಮೀಪದ ಅರ್ಥವನ್ನೂ. ಸಂದಳಿದ—ನಡುವಣ ಕಾಲವನ್ನು ಕಳೆದಂಥ.

೩೪. ಭಾಷಿಸುವರು—ಹೇಳುವರು. ಆ ಸಮಾನದಲಿ—ಅದರಂತೆ.

೩೫. ಕುರುಹಿನ—ಯಾವದಾದರೊಂದು ಹೆಗ್ಗುರುತುಳ್ಳ. ಇರಿಸೆ—ಉಳಿದ ಆಕಳುಗಳ ಹಾಲಿನ ಸಾಲಿನಲ್ಲಿ ಇರಿಸಿದರೆ. ಆ, ಈ ಎಂಬ ಶಬ್ದವೆ—ಆ ಹಾಲು, ಈ ಹಾಲು ಎಂಬ ಮಾತು ಮಾತ್ರವೇ (ಭೇದವು). (ಆ, ಈ ಎಂಬ ಶಬ್ದಗಳನ್ನು ಬಿಟ್ಟರೆ ಹಾಲಿನಲ್ಲಿ ಯಾವ ಭೇದವೂ ಕಾಣುವದಿಲ್ಲ).

೩೬. ಶತಮುಖ-ಇಂದ್ರ (ನೂರು ಯಜ್ಞಗಳನ್ನು ಮಾಡಿದವನು).

ಸತ್ತು ಚಿತ್ತಾನಂದರೂಪಿನ । ಪ್ರತ್ಯಗಾತ್ಮನ ತಿಳಿದು ನೋಡಲು ।
ನಿತ್ಯ ನಿಜಸುಖ ಸಂವಿದದ್ವಯನೆನಿಪ ಪರಮಾತ್ಮ ; ॥
ಪ್ರತ್ಯಗಾತ್ಮಪರಾತ್ಮಭೇದಗ । ಳೆತ್ತಣದು ? ವಾಚಾವಿಡಂಬನ ! ।
ವೃತ್ತಿಕೆಯೆ ಮಣ್ಣೆಂಬೊಲಸಿಪದದರ್ಥ ಕೇಳೆಂದ ॥ ೩೭ ॥

ಮಾಯೆಯೆಂಬುದೆ ಮಿಥ್ಯ ; ಜೀವನಿ । ಕಾಯವದರಿಂ ಮುನ್ನಲಿಲ್ಲವು; ॥
ಬಾಯ ಬನ್ನಣೆಯಿಂದ ಬೋಧಿಸೆ ಭೇದವೆಂದಾಯ್ತು ; ॥
ರಾಯ ರಂಕನು ; ರಂಕನೇ ತಿಳಿ । ರಾಯನೆಂಬಂದದಲಿ ಬ್ರಹ್ಮದ ।
ಮಾಯೆಯಿಂದಲಿ ಜೀವ ; ಜೀವನೆ ತಿಳಿದೊಡಾ ಬ್ರಹ್ಮ ॥ ೩೮ ॥

ತತ್ತ್ವಮಸಿಯೊಂದೊಲಿದು ಶ್ರುತಿ ಪೇ । ಳುತ್ತಲಿಹುದೆಂತೆನಲವಿದ್ಯಾ ।
ಪತ್ತಿಯಾತ್ಮಂಗಿಲ್ಲವೆಂದದ ಪರಿಹರಿಸಿತ್ತೈಸೆ; ॥
ವಸ್ತುವೆರಡಾಗಿಹುದರೊಳಗೇ । ಕತ್ವದೋರುತ ಲಕ್ಷಣಾಖ್ಯೆಯ ।
ವೃತ್ತಿಯಿಂ ಲಕ್ಷಿತವೆ ಬ್ರಹ್ಮವದೆಂದು ಸಾರಿಹುದು ॥ ೩೯ ॥

---

೩೭. ಪ್ರತ್ಯ . . ಣದು ?—ಒಳಗಿರುವ ಆತ್ಮನಿಗೂ ಸರ್ವವ್ಯಾಪಿಯಾದ ಆತ್ಮನಿಗೂ ಭೇದವಿಲ್ಲವೆಂದರ್ಥ. ವಾಚಾವಿಡಂಬನ—ಬಾಯ ಬೂಟಾಟಿಕೆ. ವೃತ್ತಿಕೆಯೆ ಮಣ್ಣು—ವೃತ್ತಿಕೆಯೆಂಬುದೂ ಮಣ್ಣೆಂಬುದೂ ಮಾತಿನ ಭೇದವೇ ಹೊರತು ವಸ್ತುವಿನಲ್ಲೇನೂ ಭೇದವಿಲ್ಲದೆ ಇರುವ ಹಾಗೆ (ಜೀವನೆಂಬುದೂ ಈಶ್ವರನೆಂಬುದೂ ಮಾತಿನ ಭೇದವೇ ಹೊರತು ಲಕ್ಷ್ಯವಸ್ತುಸ್ವರೂಪದಲ್ಲಿ ಭೇದವಿಲ್ಲ).

೩೮. ಜೀವ . . ಲಿಲ್ಲವು—ಮಾಯೆಯೆಂಬುದೇ ಇಲ್ಲದ್ದೆಂದಾದ ಮೇಲೆ ಅದರಿಂದ ಸೃಷ್ಟಿಯಾಗಿರುವ ಪ್ರಾಣಿಗಳ ಸಮೂಹದ ಇರುವಿಕೆಯಂತು ಇಲ್ಲವೇ ಇಲ್ಲ. ಬಾಯ . . ದಾಯ್ತು–ಭೇದವನ್ನು ಬಾಯಲ್ಲಿ ಆಡುತ್ತ ಆಡುತ್ತ ಬಂದದ್ದರಿಂದ ಆ ಸಂಸ್ಕಾರವೇ ಮನಸ್ಸಿನಲ್ಲಿ ಬೇರುಬಿಟ್ಟುಕೊಂಡಿದೆ. (ತಾಯಿಯು ಮಕ್ಕಳ ಮುಂದೆ ದೇಹಾತ್ಮಬುದ್ಧಿಯ ಮಾತನ್ನೇ ಆಡುತ್ತ ಮರುಳುಮಾಡುವಳೆಂದೂ ನಾವು ಆ ಮಂಕನ್ನು ಕಳೆದುಕೊಳ್ಳಬೇಕೆಂದೂ ಸ್ವಾಮಿರಾಮತೀರ್ಥರು ಹೇಳಿರುವದೂ ಇದೇ ಅಭಿಪ್ರಾಯ).

೩೯. ತತ್ತ್ವಮಸಿ–(" ನಾನು ಜೀವ " ಎಂದು ತಿಳಿದುಕೊಂಡಿರುವವನೆ,) ನೀನು ಬ್ರಹ್ಮನಾಗಿದ್ದಿ. (ಶ್ರುತಿವಾಕ್ಯಕ್ಕೆ ಪರಿಶಿಷ್ಟವನ್ನು ನೋಡಿ.) ಅದ–ಅವಿದ್ಯಾದೋಷದಿಂದ ಆಗಿರುವ ಭೇದಬುದ್ಧಿಯನ್ನು (ಪ್ರಪಂಚಸತ್ಯತ್ವವನ್ನು).

ಅನಲನೆಂತುಷ್ಣಸ್ವರೂಪನೊ । ಚಿನುಮಯಾತ್ಮಕನಾ ಪರಿಯಲೀ ।
ತನಯ, ನಿತ್ಯಜ್ಞಾನರೂಪನು ; ತತ್ಪ್ರಕಾಶದಲಿ ॥
ಘನತಮಸ್ಸತ್ತ್ವಪ್ರಧಾನಗ । ಳೆನಿಸಿ ಧೂಮಜ್ವಾಲೆಗಳವೊಲ್ ।
ಜನಿಸಿ ಮಾಯಾಶಕ್ತಿಚಿಚ್ಛಕ್ತಿಗಳಿವೆನಿಸಿಹವು ॥ ೪೦ ॥

ಕಾರ್ಯಕಾರಣವೆಂಬುಪಾಧಿಗ । ಳಾರ್ಯ, ವಿದ್ಯಾವಿದ್ಯೆಯವರೊಳು ।
ಕಾರ್ಯವೇ ಮಲಿನಪ್ರಧಾನವು, ಕಾರಣವೆ ತಿಳಿಯೆ ॥
ಸಾರವಹ ಸತ್ತ್ವಪ್ರಧಾನವು ; । ತಾರತಮ್ಯದೊಳಿರ್ಪ ಗುಣದಿಂ ।
ತೋರುವದು ಜೀವೇಶ್ವರತ್ವವು ನಿತ್ಯಮುಕ್ತಂಗೆ ॥ ೪೧ ॥

ನೀರಧಿಕವಾಗಿರಲು ನಿರ್ಮಲ । ತೋರುವದು ; ನೀರಲ್ಪವಾದೊಡೆ ।
ನೀರು ಕಲಕಾಗಿರ್ಪುದಾ ಪರಿ ಕಾರ್ಯಕಾರಣವು ; ॥
ನೀರ ಗುಣದೋಷಗಳು ತಿಳಿಯಲು । ಸೂರ್ಯನ ಪ್ರತಿಬಿಂಬಕೆಂತು ವಿ ।
ಚಾರಿಸಲು ಜೀವೇಶ್ವರತ್ವವುಪಾಧಿಕೃತವೆಂದ ॥ ೪೨ ॥

---

೪೦. ಅನಲನು–ಅಗ್ನಿಯು. ತನಯು–ಮಗನೆ, ತತ್ಪ್ರಕಾಶದಲಿ–ಆ ಜ್ಞಾನಸ್ವರೂಪದ ಪ್ರಭಾವದಿಂದ. ಧೂಮಜ್ವಾಲೆಗಳವೊಲ್–ಹೊಗೆಯ ಹಾಗೆ ತಮಃಪ್ರಧಾನವಾಗಿ ಮಾಯಾಶಕ್ತಿ; ಜ್ವಾಲೆಯ ಹಾಗೆ ಸತ್ತ್ವಪ್ರಧಾನವಾಗಿ ಚಿಚ್ಛಕ್ತಿ.

೪೧. ಕಾರ್ಯಕಾರಣಕೆ–ಕಾರ್ಯೋಪಾಧಿಯ ಜೀವನಿಗೆ ಮತ್ತು ಕಾರಣೋಪಾಧಿಯ ಈಶ್ವರನಿಗೆ. ಆರ್ಯ---ಪೂಜ್ಯನೆ. ವಿದ್ಯಾವಿದ್ಯೆ---ವಿದ್ಯೆ (ಈಶ್ವರನಿಗೆ) ಮತ್ತು ಅವಿದ್ಯೆ (ಜೀವನಿಗೆ). ತಾರತಮ್ಯದೊಳಿರ್ಪಗುಣದಿಂ---ಸತ್ತ್ವಗುಣವು ಶ್ರೇಷ್ಠವಾದ್ದರಿಂದ ಆ ಗುಣದ ಉಪಾಧಿಯಿಂದ ಈಶ್ವರತ್ವವುಂಟಾಯಿತು. ರಜಸ್ತಮೋಗುಣಗಳು ಕನಿಷ್ಠವಾದ್ದರಿಂದ ಅವುಗಳ ಉಪಾಧಿಯಿಂದ ಜೀವತ್ವವುಂಟಾಯಿತು.

೪೨. ನೀರು + ಅಧಿಕವಾಗಿರಲು. ಆ ಪರಿ ಕಾರ್ಯಕಾರಣವು—ಜೀವನೂ ಈಶ್ವರನೂ ಅದರಂತೆಯೆ. ಜೀವನು ವ್ಯಷ್ಟಿ (ಬಿಡಿ) ಬುದ್ಧಿಯುವನಾದ್ದರಿಂದ ಸ್ವಲ್ಪ ನೀರಿರುವ ಕಡೆ ನೀರು ಕಲಕಾಗಿರುವಂತೆ ಮಲಿನನಾಗಿರುವನು. ಈಶ್ವರನು ಸಮಷ್ಟಿ (ಒಟ್ಟು) ಬುದ್ಧಿಯುವನಾದ್ದರಿಂದ ಬಹಳ ನೀರಿರುವ ಕಡೆ ನೀರು ನಿರ್ಮಲವಾಗಿರುವಂತೆ ಶುದ್ಧನಾಗಿರುವನು. ನೀರ–ನೀರಿನ. ಪ್ರತಿಬಿಂಬಕೆಂತು---ನೀರಿನ ಗುಣದೋಷವು ಪ್ರತಿಬಿಂಬಕ್ಕೆ ಹೇಗೆ ಅಂಟುವದಿಲ್ಲವೊ ಹಾಗೆ (ಬುದ್ಧಿಯ ದೋಷವು ಜೀವೇಶ್ವರರಿಗೆ ಅಂಟುವದಿಲ್ಲವೆಂದರ್ಥ).

ಮಣ್ಣ ಮಡಕೆಗೆ ಸ್ವರ್ಣಕಲಶಕೆ । ಭಿನ್ನವಲ್ಲದೆ ಬಯಲು ಭಿನ್ನವೆ ? ।
ಸ್ವರ್ಣದಿಗೆ ಚಂಡಾಲಕೂಪಕೆ ಭೇದವುಂಟೈಸೆ ॥
ಭಿನ್ನವೇ ರವಿ ಹೊಳೆಯಲಾ ಪರಿ । ನಿರ್ಣಯಿಸೆ ಜೀವೇಶ್ವರತ್ವಕೆ ।
ಭಿನ್ನವೆಂಬುದುಪಾಧಿಕೃತವಾ ಪೂರ್ಣಬ್ರಹ್ಮದಲಿ ॥ ೪೩ ॥

ಉದಕಕೊಂದೇ ಸ್ವಾದ, ಭೂಭೇ । ದದಲಿ ನಾನಾಸ್ವಾದವೆನಿಸಿಹು ।
ದದು ಮಳೆಯಲುದಯಿಸುವ ಕಾಲದೊಳಾಯ್ತೆ ರಸಭೇದ ? ॥
ಸದಮಲಾನಂದೈಕರಸವೇ । ಪುದಿದು ಕಾರಣಕಾರ್ಯಭೇದದ ।
ಲೊದವಿ ಜೀವೇಶ್ವರತೆಯಲ್ಲದೆ ಭೇದವೆಲ್ಲಿಯದು ? ॥ ೪೪ ॥

ಶಬ್ದಸೂತಕದಿಂದ ಮನುಜನು । ಶುದ್ಧಸೂತಕಿಯೆನಿಸಿಕೊಂಬನು ; ।
ಶಬ್ದದಿಂದದ ಕಳೆಯೆ ಶುದ್ಧನೆನಿಪ್ಪ ತೆರಸಂತೆ ॥
ಶಬ್ದಮಾತ್ರದಿ ಜೀವ ಪರಮನು, । ಶಬ್ದವಡಗಲು ನಿತ್ಯಶುದ್ಧವಿ ।
ಬುದ್ಧಸಚ್ಚಿನ್ಮಾತ್ರನಾಗಿಹ ಮಗನೆ ಕೇಳೆಂದ ॥ ೪೫ ॥

---

೪೩. ಬಯಲು ಭಿನ್ನವೆ---(ಮಣ್ಣಿನ ಮಡಕೆಯೂ ಬಂಗಾರದ ಕೊಡವೂ ಒಂದಕ್ಕೊಂದು ಬೇರೆ ಆದರೂ) ಅದರೊಳಗಣ ಬಯಲು ಒಂದಕ್ಕೊಂದು ಬೇರೆ ಆದೀತೆ ? ಸ್ವರ್ಣದಿಗೆ—ದೇವ ಗಂಗಾನದಿಗೆ. ಚಂಡಾಲಕೂಪಕೆ---ಹೊಲೆಯರ ಬಾವಿಗೆ. ಶ್ರೀ ಶಂಕರಾಚಾರ್ಯರ ಮನೀಷಾಪಂಚಕದಲ್ಲಿರುವ ಈ ಕೆಳಗಣ ಶ್ಲೋಕದಲ್ಲಿಯೂ ಇದೇ ಅಭಿಪ್ರಾಯವೇ ಬಂದಿದೆ:-- "ಕಿಂ ಗಂಗಾಂಬುನಿ ಬಿಂಬಿತೇಽಂಬರಮಣೌ ಚಂಡಾಲವಾಪೀಪಯಃ । ಪೂರೇ ಚಾಂತರಮಸ್ತಿ ಕಾಂಚನಘಟೀ ಮೃತ್ಕುಂಭಯೋರ್ವಾಂಬರೇ ॥ ಪ್ರತ್ಯಗ್ವಸ್ತುನಿ ನಿಸ್ತರಂಗಸಹಜಾನಂದಾವಬೋಧಾಂಬುಧೌ । ವಿಪ್ರೋಽಯಂ ಶ್ವಪಚೋಽಯಮಿತ್ಯಪಿ ಮಹಾನ್ಕೋಽಯಂ ವಿಭೇದಭ್ರಮಃ ॥"

೪೪. ಸ್ವಾದ---ರುಚಿ. ಪುದಿದು---ತುಂಬಿಕೊಂಡು. ಒದವಿ--(ಒದಗಿ) ಎರಡಾಗಿ.

೪೫. ಶಬ್ದಸೂತಕದಿಂಡ---ಇಂಥವರು ಹುಟ್ಟಿದ್ದದಿಂದ ಅಥವಾ ಸತ್ತದ್ದರಿಂದ ನಿನಗೆ ಮೈಲಿಗೆಯು ಬಂದಿರುವದೆಂಬ ಮಾತಿನ ಮಾತ್ರದಿಂದ (ಹುಟ್ಟಿದ್ದನ್ನೂ ಸತ್ತದ್ದನ್ನೂ ತಾನು ಕಾಣದಿದ್ದರೂ). ಶುದ್ಧಸೂತಕಿ---ನಿಜವಾಗಿ ಮೈಲಿಗೆಯುಳ್ಳವನು. ಶಬ್ದದಿಂದದ ಕಳೆಯೆ---ನಿನಗೆ ಬಂದಿದ್ದ ಮೈಲಿಗೆ ಇಂದಿಗೆ ಹೋಯಿತೆಂದು ಹೇಳುವ ಮಾತಿನ ಮಾತ್ರದಿಂದ. ಶಬ್ದಮಾತ್ರದಿ ಜೀವ ಪರಮನು---ಜೀವಾತ್ಮ ಪರಮಾತ್ಮ ಎಂಬುದು ಶಬ್ದಮಾತ್ರದಿಂದ ಭೇದವೇ ಹೊರತು ನಿಜವಾಗಿರುವ ವಸ್ತು ಒಂದೇ.

ಈ ವಿಧದಲಸಿಪದದಖಂಡದ । ವ್ಯಾವಹಾರವ ತಿಳುಹಿ, ತನಯಗೆ ।
ಜೀವಭೇದವ ಬಿಡಿಸಿ, ನಿಜಪರಮಾತ್ಮಪದವಾದ ॥
ಕೇವಲಜ್ಞಾನಸ್ವರೂಪವೆ । ಭಾವಿಸಲು ತಾನೆನಿಸುವನುಭವ ।
ಸಾವಧಾನದಿ ನಿಲುವವೋಲ್ನಿರ್ಣಯಿಸಿದನು ಮುನಿಪ ॥ ೪೬ ॥

ಅಮಮ ! ಸಹಜಾನಂದವೆಂತೈ । ಭ್ರಮಿಸಿತೀ ಮಾಯಾಪ್ರಬಂಧಕೆ? ।
ಮಮತೆಯಿಂ ಜೀವತ್ವದಾರೋಪಣವದೆಂತಾಯ್ತು ? ॥
ಸಮನಿಸಿದ ಸಂಸಾರದಳಿವಿದು । ವಿಮಲಮತಿ ಯಾರಿಂದಲಾದುದು ? ।
ಸಮತೆಯಹ ಚಿನ್ಮಾತ್ರ ಮರಳಿದು ಸಿದ್ಧಿಸುವದೆಂತು ; ॥ ೪೭ ॥

ಹೇಳು ಮುನಿಪತಿ, ಮನದ ಸಂಶಯ। ಜಾಲ ಕಳೆವಂತೆನಲು ಶುಕಮುನಿ।
ಕೇಳು, ಕೆಲರೀಶ್ವರನ ಲೀಲೆಯಿದೆಂದು ಹೇಳುವರು ॥
ಮೂಲಭೂತವೆನಿಪ್ಪವಿದ್ಯೆಯ । ಕಾಲ ಕಣ್ಣಿಯಿದೆಂದು ಕೆಲಬರು ।
ಹೇಳುವರು ; ಕೆಲರಿದನು ದೃಷ್ಟಿಸೆ ಸೃಷ್ಟಿಯೆಂದೆನುತ ॥ ೪೮ ॥

---

೪೬. ಅಖಂಡದ---ಐಕ್ಯದ. ಜೀವಭೇದವ ಬಿಡಿಸಿ.---ನಾನು ಜೀವನೆಂಬ ಭೇದಬುದ್ಧಿಯನ್ನು ಬಿಡಿಸಿ. ಸಾವಧಾನದಿ---ವಿಚಾರಪೂರ್ವಕವಾಗಿ ಅಥವಾ ಗಟ್ಟಿಯಾಗಿ.

೪೭. ಮಾಯಾಪ್ರಬಂಧಕೆ--- ಮಾಯೆಯೆಂಬ ಕಟ್ಟುವಿಕೆಗೆ. ಮಮತೆಯಿಂ. ನನ್ನದು ಮತ್ತು ನಾನು ಎಂಬ ಬುದ್ಧಿಗಳಿಂದ. ಸಂಸಾರದ + ಅಳಿವು (ನಾಶವು) ಇದು. ಯಾರಿಂದಲಾದುದು ? ಯಾರು ಸಂಸಾರವೆಂಬ ಕಟ್ಟನ್ನು ಕಳಚಿಕೊಂಡಿದ್ದಾರೆ ?

೪೮. ಜಾಲ---ಗುಂಪು. ಈಶ್ವರನ ಲೀಲೆ---ಹೀಗೆಂದು ಮೊದಲಾಗಿ ಅನೇಕರು ಅನೇಕ ಬಗೆಯಾಗಿ ಹೇಳುತ್ತಾರೆ. ಈ ಬೇರೆ ಬೇರೆ ಬಗೆಗಳನ್ನು "ವಿಭೂತಿಂ ಪ್ರಸವಂತ್ವನ್ಯೇ ಮನ್ಯಂತೇ ಸೃಷ್ಟಿಚಿಂತಕಾಃ" ಎಂಬ ಮೊದಲಾದ ಮಾಂಡೂಕ್ಯಕಾರಿಕಾ ವಾಕ್ಯಗಳಿಂದ ತಿಳಿಯಬಹುದು. "ಕಾಲಃ ಸ್ವಭಾವೋ ನಿಯತಿರ್ಯದೃಚ್ಛಾ ಭೂತಾನಿ ಯೋನಿಃ ಪುರುಷ ಇತಿ ಚಿಂತ್ಯಾ" ಎಂಬ ಶ್ವೇತಾಶ್ವತರ ಶ್ರುತಿಯೂ ಈ ಅಭಿಪ್ರಾಯವನ್ನು ಹೇಳುವದು. ಮೂಲಭೂತವೆನಿಪ್ಪ+ಅವಿದ್ಯೆಯ. ದೃಷ್ಟಿಸೆ ಸೃಷ್ಟಿ—ನಾವು ನೋಡಿದರೆ ಮಾತ್ರ ಆಗಲೆ ಜಗತ್ತಿನ ಸೃಷ್ಟಿಯಾಗುವದೆಂದೂ ನೋಡದೆ ಇದ್ದರೆ ಜಗತ್ತೇ ಇಲ್ಲವೆಂದೂ ಕೆಲವರು ಹೇಳುವರು. ಇದಕ್ಕೆ ದೃಷ್ಟಿಸೃಷ್ಟಿವಾದವೆಂದು ಹೆಸರು.

ಮತವಿಭೇದಗಳಾದ ಬಹುವಿಧ । ಗತಿಗಳನು ಪೇಳುವರು ಕೆಲಕೆಲ ।
ರತಿಶಯೋಕ್ತಿಗಳಿಂದ ತಿಳಿ ದೃಷ್ಟಾಂತಪೂರ್ವಕದಿ ॥
ಶ್ರುತಿವಿದಿತಸತ್ಯಾತ್ಮಗೀ ಸಂ । ಸೃತಿಯ ಸಂಕಲೆಯಿಲ್ಲವೆಲ್ಲವು ।
ಮತಿಗೆ ಹೊರತೆಲಿ ಮಗನೆ ಮಿಥ್ಯಾರೋಪ ಕೇಳೆಂದ ॥ ೪೯ ॥

ನರನು ತಾನೆಂದೀಶ್ವರತ್ವವ । ಮರೆದು ರಘುಪತಿ ಬ್ರಹ್ಮನಾರದ ।
ರರುಹಿಸಲ್ಕರಿದಂತೆ ತನ್ನನೆ ವಿಷ್ಣುವೆಂದಾಗ ॥
ಗುರುವಿನುಪದೇಶದಲಿ ಮಾಯಾ । ವರಣವಳಿದೇಕತ್ವದಿಂದೀ ।
ಶ್ವರನೆನಿಪ ಪರವಸ್ತುವೇ ನೀನೆಂದು ತಿಳಿಯೆಂದ ॥ ೫೦ ॥

ತನ್ನ ಜನನದ ಪರಿಯನರಿಯದೆ । ಕರ್ಣ ರಾಧೆಯ ಮಗನೆನುತ್ತಿರೆ, ।
ನಿನ್ನ ತಾಯಿಯು ಕುಂತಿಯೆನೆ ಹರಿಯಾಗ ತಿಳಿದಂತೆ ॥
ನಿನ್ನನರಿಯದೆ ಜೀವನೆಂದೇ । ಬನ್ನಬಡಲೇಂ? ಗುರುಕರುಣದಿಂ ।
ನಿನ್ನ ನಿಜವನು ತಿಳಿದು ನೀ ಚಿತ್ತೆಂದು ನಿಶ್ಚಯಿಸು ॥ ೫೧ ॥

ಹತ್ತರೊಳು ತಾ ತನ್ನನುಳಿದೊಂ । ಬತ್ತ ಗಣಿಸಲು, ಕಡೆಯಣವನಿಂ ।
ಹತ್ತು ಮಂದಿಯ ತೋರೆ, ಭ್ರಮೆಯಳಿದರಿದ ತೆರನಂತೆ ॥
ಸತ್ಯವಹ ಗುರುವಾಕ್ಯದಿಂದಲಿ । ಚಿತ್ತದ ಭ್ರಮೆಯಳಿಯೆ ನೀನೇ ।
ನಿತ್ಯಮುಕ್ತನೆನುತ್ತ ನಿನ್ನನು ತಿಳಿದು ನಿಶ್ಚಯಿಸು ॥ ೫೨ ॥

---

೪೯. ಮತ . . . ಗತಿಗಳನು—ತಮ್ಮ ತಮ್ಮ ಮತದ ಪ್ರಕ್ರಿಯೆಯ ವಿಶೇಷಗಳನ್ನು. ಮತಿಗೆ ಹೊರತು—ಸಂಸಾರದ ಸಂಬಂಧವಾದ ಬಂಧವೆಲ್ಲ ಬುದ್ಧಿಗೇ ಹೊರತು ಆತ್ಮನಿಗಿಲ್ಲವೆಂದರ್ಥ. ಮಿಥ್ಯದಾರೋಪ—ಬುದ್ಧಿಗಿರುವ ಬಂಧಗಳನ್ನು ತಿಳಿಯದೆ ಆತ್ಮನ ಮೇಲೆ ಇಲ್ಲದ್ದನ್ನು ಆರೋಪಿಸುವದು.

೫೦. ಬ್ರಹ್ಮನಾರದರು—ಬ್ರಹ್ಮನೂ ನಾರದರೂ. ತನ್ನನೆ ವಿಷ್ಣುವೆಂದಾಗ—ಕಥೆಯ ವಿಷಯಕ್ಕೆ ಪರಿಶಿಷ್ಟವನ್ನು ನೋಡಿ.

೫೧. ತನ್ನ . . . ಯದೆ—ಕರ್ಣನು ತನ್ನ ಜನ್ಮವನ್ನರಿತ ಕಥೆಯ ವಿಷಯಕ್ಕೆ ಪರಿಶಿಷ್ಟವನ್ನು ನೋಡಿ.

೫೨. ಹತ್ತರೊಳು . . . ಗಣಿಸಲು—ಹತ್ತು ಜನರಲ್ಲಿ ಒಬ್ಬನು ತನ್ನನ್ನು ಬಿಟ್ಟುಕೊಂಡು ಉಳಿದವರನ್ನು ಎಣಿಸಲು ಒಂಬತ್ತೇ ಆಯಿತು. ಕಡೆಯಣವನಿಂ—ಕೊನೆಯವನಿಂದ ಎಣಿಸಿಕೊಂಡು ಬಂದಾಗ ಎಣಿಸಿದವನು ತಾನೇ ಹತ್ತನೆಯನಾಗುವನು.

ಗರ ಹಿಡಿದ ಮಾನವನು ತನ್ನನು । ಮರೆದಿರಲು, ಮಿಗೆ ಮಂತ್ರವಾದಿಯ ।
ಕಳೆದು ಮಂತ್ರಿಸೆ, ತನ್ನ ತಾನೆಂದರಿವ ಪರಿಯಂತೆ ॥
ಪರಮಗುರುವಿನ ಕರುಣದಲಿ ಹರ।ವರಿಯ ಮಾಯಾಭ್ರಾಂತಿಯಳಿಯಲು,।
ನಿರುಪಮ ನಿರಾಲಂಬ ನಿಜ ನೀನೆಂದು ನಿಶ್ಚಯಿಸು ॥ ೫೩ ॥

ಬಲುಭುಜಗ ಕನಸಿನಲಿ ಕಚ್ಚಲು, । ಕಳವಳಿಸಿ ಗಡಗಡನೆ ನಡುಗಲು, ।
ಕೆಲದಲಿದ್ದವರಂಜಬೇಡೆಂದಂಜಿಕೆಯ ಬಿಡಿಸೆ, ॥
ತಿಳಿದು ಸ್ವಸ್ಥದಲಿದ್ದವೋಲ್ಗುರು । ತಿಳುಹೆ ಮಾಯಾಭ್ರಮೆಯಡಗಿ ನಿ ।
ಶ್ಚಲತೆಯಾಗಿಹ ನಿತ್ಯಸುಖ ನೀನೆಂದು ನಿಶ್ಚಯಿಸು ॥ ೫೪ ॥

ಹೊಳೆಯುತಿಹ ಮಣಿಮಯದ ಮಂಟಪ।ದೊಳಗೆ ಪ್ರತಿಬಿಂಬಿಸುವಶುನಕಾ।
ವಳಿಯ ಕಂಡದರೊಡನೆ ಕಲಹಿಪ ಶುನಕನಂದದಲಿ ॥
ಬಲಿದವಿದ್ಯೋಪಾಧಿಯೊಳಿ ತಾ । ಹೊಳೆದು ಬಹುರೂಪಾಗಿ ತೋರ್ಪುದ ।
ತಿಳಿದು ಗುರುಕೃಪೆಯಿಂದಲದ್ವಯನೆಂದು ನಿಶ್ಚಯಿಸು ॥

ಪಿತ್ಥ ತಲೆಗೇರಿದರೆ ಲೋಚನ । ಕತ್ತಲಿಸಿ ಹಗಲೆಂದರಿಯದಿರ ।
ಲುತ್ತಮದ ವೈದ್ಯರು ಚಿಕಿತ್ಸೆಯ ಮಾಡೆ ತಿಳಿದಂತೆ ॥
ಅತ್ಯಧಿಕಗುರುಬೋಧೆಯಿಂದಲಿ । ಚಿತ್ತದ ಭ್ರಮೆಯಡಗಿ ನೀನೇ ।
ನಿತ್ಯಮುಕ್ತನೆನುತ್ತ ನಿನ್ನನು ತಿಳಿದು ನಿಶ್ಚಯಿಸು ॥ ೫೬ ॥

---

(ಈ ದಶಮನ ಕಥೆಯು ಬಹು ಅನಾದಿಯಾದದ್ದು ; ಶ್ರೀ ಶಂಕರಾಚಾರ್ಯರ ಭಾಷ್ಯದಲ್ಲಿ ಯೂ ಇದೆ).

೫೩. ಗರ ಹಿಡಿದ—ಪಿಶಾಚವು ಹಿಡಿದ. ಹರವರಿಯ—ಪ್ರಕಟವಾದ.

೫೪. ಸ್ವಸ್ಥದಲ್ಲಿದ್ದವೋಲ್—ತನ್ನ ಸ್ವಾಭಾವಿಕಸ್ಥಿತಿಯಲ್ಲಿದ್ದ ಹಾಗೆ.

೫೫. ಶುನಕನಂದದಲಿ—ಕನ್ನಡಿಯ ಗೋಡೆಯಲ್ಲಿ ಕಂಡ ತನ್ನ ಪ್ರತಿಬಿಂಬಗಳನ್ನೇ ಬೇರೆ ನಾಯಿಗಳೆಂದು ತಿಳಿದು ಅವುಗಳೊಡನೆ ಜಗಳಕ್ಕೆದ್ದ ಈ ನಾಯ ಕಥೆಯನ್ನು ಶ್ರೀ ಸ್ವಾಮಿ ರಾಮತೀರ್ಥರು ತಮ್ಮ ಉಪನ್ಯಾಸದಲ್ಲಿ ಉದಾಹರಿಸಿದ್ದಾರೆ. ಆದ್ದರಿಂದ ಈ ಕಥೆಯು ಉತ್ತರದೇಶದಲ್ಲಿಯೂ ಪ್ರಚಾರದಲ್ಲಿರಬೇಕೆಂದು ತೋರುತ್ತದೆ. ಬಲಿದ+ಅವಿದ್ಯೋಪಾಧಿಯಲಿ.

೫೬. ಲೋಚನ—ಕಣ್ಣು. ತಿಳಿದಂತೆ—ಹಗಲೆಂದು ತಿಳಿದ ಹಾಗೆ.

ಆವರಣವಿಕ್ಷೇಪಶಕ್ತಿಗ । ಳಾವರಿಗೆ ಪರವಸ್ತುವನು ಜಗ ।
ಜೀವರೂಪಾಗಿಹುದು ಸ್ವಾಪ್ನಪದಾರ್ಥದಂದದಲಿ ; ॥
ಪಾವನದ ಗುರುಪಾದಪದ್ಮದ । ಸೇವೆಯಲಿ ಸಂಸಾರವಳಿಯೆ ನಿ ।
ರಾವರಣ ನಿಸ್ಸೀಮ ನಿಜ ನೀನೆಂದು ನಿಶ್ಚಯಿಸು ॥ ೫೭ ॥

ಅಸಿಪದದಖಂಡಾದ್ವಯಾಮೃತ । ರಸಭರಿತನಿಸ್ಸೀಮಸಾಗರ ।
ವೆಸೆಯಲದರೊಳು ತೋರ್ಪ ತುಂಗತರಂಗದಿಂದೊಗೆದು ॥
ಪಸರಿಸಿದ ಬ್ರಹ್ಮಾಂಡಬುದ್ಬುದ । ದಸಮಸಚ್ಚಿತ್ಸುಖಮಯದಿ ರಂ ।
ಜಿಸುತಲಿರ್ಪುದಪಾರವಂತಿಂತೆನಲಶಕ್ಯವಲಾ !

ಕ್ಷೀರಕ್ಷೀರವ ಬೆರೆಸಿದಂದದಿ, । ನೀರು ನೀರೊಳು ಸೇರಿದಂದದಿ, ।
ಸಾರಿ ಸಕ್ಕರೆಯೊಳಗೆ ಸಕ್ಕರೆ ಕೂಡಿದಂದದಲಿ, ॥
ಧೀರಗುರುವಿನ ಕರುಣದಲಿ ಸಂ । ಸಾರಶರಧಿಯ ದಾಂಟಿ ಸುಖಸಾ ।
ಕಾರಸಹಜಾದ್ವೈತದೊಳಗೊಳಗೊಂಡಿ ಸುಖಿಯಾಗು ॥ ೫೯ ॥

ಇಂತು ಜೀವೇಶ್ವರತೆಯೆಂಬುದು । ಭ್ರಾಂತಿಕಲ್ಪಿತವೆಂದು ತಿಳುಪಿದ ।
ನಂತರದೊಳಸಿಪದದಖಂಡಾರ್ಥವನು ಬೋಧಿಸಲು ॥
ಅಂತರಂಗದೊಳೈಕ್ಯಪದನಿ । ಶ್ಚಿಂತಸುಖಮಯನಾಗಿ ಶುಕನ ।
ತ್ಯಂತ ಸಹಜಾನಂದಗುರುಪದಚಿಂತೆಯಲಿ ನಿಂದ ॥ ೬೦ ॥

---

೫೭. ಸ್ವಾಪ್ನಪದಾರ್ಥದಂದದಲಿ—ಕನಸಿನಲ್ಲಿ ನಿಜವಾಗಿರುವವನು ತಾನೊಬ್ಬನೇ ಆದರೂ ಹೊರಗೆ ಅನೇಕ ಜೀವರೂ ಜಗತ್ತೂ ಕಾಣುತ್ತಿರುವಂತೆ. ಸಂಸಾರವಳಿಯೆ—ಹುಟ್ಟುಸಾವುಗಳು ಹೋಗಲಾಗಿ.

೫೮. ಅಸಿಪದದ— ಐಕ್ಯಾರ್ಥಸೂಚಕವಾದ ' ಅಸಿ ' ಎಂಬ ಮಾತಿನಿಂದ ತಿಳಿಯಬರುವ.

೫೯. ಕ್ಷೀರಕ್ಷೀರವ ಬೆರೆಸಿದಂದದಿ—ಹಾಲುಹಾಲಿನಲ್ಲಿ ಸೇರಿದರೆ ಗುರುತಿಸುವದಕ್ಕೆ ಆಗದಂತೆ ತತ್ತ್ವಂಪದಾರ್ಥಗಳ ಐಕ್ಯವನ್ನು ತಿಳಿಯಲು ಅಖಂಡವಸ್ತುವೊಂದೇ ಆಗುವದೇ ಹೊರತು ಭೇದವೇನೂ ತೋರುವದಿಲ್ಲ. ನೀರು ನೀರೊಳು ಸೇರಿದಂದದಿ—ಈ ಅರ್ಥದಲ್ಲಿ ಕಠಶ್ರುತಿಯಲ್ಲಿರುವದೇನೆಂದರೆ—" ಯಥೋದಕಂ ಶುದ್ಧೇ ಶುದ್ಧಮಾಸಿಕ್ತಂ ತಾದೃಗೇವ ಭವತಿ । ಏವಂ ಮುನೇರ್ವಿಜಾನತ ಆತ್ಮಾ ಭವತಿ ಗೌತಮ ॥ " ಸುಖಸಾಕಾರ—ಸುಖವೇ ಮೂರ್ತಿಗೊಂಡಂಥ.

ಅಂಧಕಾಸುರಮಥನ, ಸಿಂಧುರ । ಬಂಧುರಾಜಿನವಸನ, ವನರುಹ ।
ಬಂಧುಶತಸಾಹಸ್ರಕೋಟಿದ್ಯುತಿವಿತತಿಚೈತ್ರ, ॥
ಇಂದುಧರ, ಶಿವ, ಶಂಭು, ಮೃಡ ಶಿತಿ । ಕಂಧರ, ಪರಂಜ್ಯೋತಿ, ಸಂಸೃತಿ।
ಬಂಧವಿರಹಿತ, ಮಲ್ಲಿಕಾರ್ಜುನ ಸಲಹು ಮೂಜಗವ　　॥ ೬೧ ॥

ಶ್ರೀಮತ್ಪರಮಹಂಸ ಪರಿವ್ರಾಜಕಾಚಾರ್ಯ ಸಹಜಾನಂದ ಗುರುವರ್ಯ
ಪಾದಕಮಲಭೃಂಗಾಯಮಾಣ ಸಹವಾಸಿ ಮಹಲಿಂಗರಂಗ
ವಿರಚಿತವಾದ ಅನುಭವಾಮೃತವೆಂಬ ಗ್ರಂಥದಲ್ಲಿ
ಅಸಿಪದಾರ್ಥನಿರ್ಣಯವೆಂಬ ಐದನೆಯಧ್ಯಾಯವು
ಮುಗಿದುದು

---

೬೦. ತಿಳುಪಿದ+ಅನಂತರದೊಳು. ಅಸಿಪದದ+ಅಖಂಡಾರ್ಥವನು.

೬೧. ಸಿಂಧುರಬಂಧುರಾಜಿನವಸನ—ಆನೆಯ ಸುಂದರವಾದ ಚರ್ಮವೇ ವಸವಾಗಿ ಉಳ್ಳವನು. ವನರುಹ . . ಚೈತ್ರ—ಕಮಲಪ್ರಿಯನಾದ ಸೂರ್ಯನ ನೂರು ಸಾವಿರ ಕೋಟಿ ಸಂಖ್ಯೆಯ ಪ್ರಕಾಶದ ಸಮೂಹಕ್ಕೆ ಚೈತ್ರಮಾಸದಂತಿರುವವನೆಂದರ್ಥ (ಚೈತ್ರದಲ್ಲಿ ಸೂರ್ಯನ ಕಾಂತಿಯು ಹೆಚ್ಚುತ್ತಿರುವದು). ಶಿತಿಕಂಧರ—ಕಪ್ಪಾದ ಕುತ್ತಿಗೆಯುಳ್ಳವನು. (ಈಶ್ವರನು ಕ್ಷೀರಸಮುದ್ರಮಥನದಲ್ಲಿ ಹುಟ್ಟಿದ ವಿಷವನ್ನು ಕುಡಿದದ್ದರಿಂದ ಅದು ಕುತ್ತಿಗೆಯಲ್ಲಿ ನಿಂತು ಕಪ್ಪಾಗಿರುವದು. ವಿಷವು ಕಪ್ಪಾಗಿರುವದೆಂಬುದು ಕವಿಸಮಯ).

## ಆರನೆಯ ಅಧ್ಯಾಯ

# ಸಪ್ತಭೂಮಿಕೆಗಳ ಅಭ್ಯಾಸ

**ಸೂ ॥ ಭೂಮಿಕೆಗಳಭ್ಯಾಸದಿರವನು ।
ಸಾಮರಸದ ಸಮಾಧಿಭೇದವ ।
ನೇಮಿಸಿದನಾ ಬಾದರಾಯಣ ಶುಕಮುನೀಶ್ವರಗೆ ॥**

ಭೂಷಣದ ಮಂಜೂಷ ಬಲಿಯ ನಿ । ವಾಸ ; ಸುರಪಥ ಪುಷ್ಪವಾಟ; ದಿ ।
ಗೀಶರಂಬರಪಾಲಕರು ; ಪಾಲ್ಗಡಲೆ ಬತ್ತಳಿಕೆ ; ॥
ಶ್ರೀಶನೇ ಶರ ; ಧರೆಯೆ ರಥ ; ವನ । ಜಾಸನನು ರಥಸೂತನಾ ಶೈ ।
ಲೇಶ ಧನಪತಿಮಿತ್ರ ಸುರಕುಲಸಾರ್ವಭೌಮಂಗೆ ॥ ೧ ॥

ಖೂಳರಿಗೆ, ಕುಹಕರಿಗೆ, ಕುತ್ಸಿತ । ಶೀಲರಿಗೆ, ಕುಟಿಲರಿಗೆ, ಹಿರಿಯರ ।
ನೇಳಿಲವ ಮಾಳ್ಪರಿಗೆ, ಕಾಮಾಂಧರಿಗೆ, ಕಠಿನರಿಗೆ, ॥

---

ಸೂ॥ ಭೂಮಿಕೆ—ಮನಸ್ಸನ್ನು ಆತ್ಮಸ್ಥಿತಿಗೆ ಹತ್ತಿಸುವ ಮೆಟ್ಟಿಲು. ಸಾಮರಸದ—ಸಮರಸವಾದ, ತನ್ಮಯವಾದ. ಸಮಾಧಿಭೇದವ—ಮನಸ್ಸಿನ ಏಕಾಗ್ರತೆಯ ಬಗೆಗಳನ್ನು.

೧. ಮಂಜೂಷ—ಪೆಟ್ಟಿಗೆ. ಬಲಿಯ ನಿವಾಸ—ಪಾತಾಲಲೋಕ. ಸುರಪಥ—ಆಕಾಶವು. ಪುಷ್ಪವಾಟ—ಹೂವಿನ ತೋಟ. ದಿಗೀಶರು—ಪೂರ್ವ, ಆಗ್ನೇಯ, ದಕ್ಷಿಣ, ನೈರುತ್ಯ, ಪಶ್ಚಿಮ, ವಾಯುವ್ಯ, ಉತ್ತರ, ಈಶಾನ್ಯ ಎಂಬ ಎಂಟು ದಿಕ್ಕುಗಳಿಗೆ ಅಧಿಪತಿಗಳಾದ ಇಂದ್ರ, ಅಗ್ನಿ, ಯಮ, ನಿರುರುತಿ, ವರುಣ, ವಾಯು, ಕುಬೇರ, ಈಶಾನ್ಯ ಇವರು. ಅಂಬರಪಾಲಕರು—ವಸ್ತ್ರಗಳನ್ನು ಸಂರಕ್ಷಿಸುವವರು. ಶ್ರೀಶನೇ . . ಸೂತ—(ಹಿಂದಿನ ಅಧ್ಯಾಯದ ಒಂದನೆಯ ಪದ್ಯದಲ್ಲಿರುವಂತೆ ವಿಷ್ಣುವೇ ಬಾಣ ; (ಭೂಮಿಯೇ ರಥ ; ಬ್ರಹ್ಮನೇ ಸಾರಥಿ). ಶೈಲೇಶ—ಶ್ರೀ ಶೈಲದ ಒಡೆಯನೆಂಬ ಈ ಶಬ್ದವೂ, ಧನಪತಿಮಿತ್ರ (ಕುಬೇರನ ಗೆಳೆಯ) ನೆಂಬ ಶಬ್ದವೂ ಸುರಕುಲಸಾರ್ವಭೌಮಂಗೆ ಎಂಬುದಕ್ಕೆ ವಿಶೇಷಣ. ಸುರಕುಲಸಾರ್ವಭೌಮ—ದೇವತೆಗಳ ಸಮೂಹಕ್ಕೆಲ್ಲ ಚಕ್ರವರ್ತಿ (ಶ್ರೀ ಮಲ್ಲಿಕಾರ್ಜುನೇಶ್ವರಸ್ವಾಮಿ).

೨. ಕುತ್ಸಿತಶೀಲರಿಗೆ—ಕೀಳಾದ ಆಚಾರವುಳ್ಳವರಿಗೆ. ಕುಟಿಲರಿಗೆ—ಮನಸ್ಸಿನಲ್ಲೊಂದು ಬಾಯಲ್ಲೊಂದು ಇರುವವರಿಗೆ. ಏಳಿಲವ ಮಾಳ್ಪರಿಗೆ—ಜರಿಯುವವ

ಹಾಳುವಾದದಿ ಹೊತ್ತುಗಳೆವರ । ನಾಳಿಗೊಂಬರಿಗಧಮರಿಂಗಿದ ।
ಪೇಳದಿರು ಮರೆದರಿದು ದುರುಳರಿಗನುಭವಾಮೃತವ　　॥ ೨ ॥

ನಿರ್ಗುಣಾಷ್ಟಾಂಗವನು ಸಾಧಿಸು । ವಗ್ಗಳಿಕೆಯುಳ್ಳವರಿಗಾವಗ ।
ಭರ್ಗನಲ್ಲಿಯೆ ಭಕ್ತಿಭಾವವ ಮಾಳ್ಪ ಸುಜನರಿಗೆ, ॥
ಸ್ವರ್ಗಸುಖವನು ತುಚ್ಛವಾಗಿಯೆ । ನುಗ್ಗುಮಾಡಿ ಸಮಗ್ರವಾದಪ ।
ವರ್ಗವನು ಬಯಸುವರಿಗುಸುರೀ ಅನುಭವಾಮೃತವ　　॥ ೩ ॥

ಪಲವು ತೆರದಭ್ಯಾಸವುಂಟೈ । ತಿಳಿಯಲೀ ಆತ್ಮಾಪರೋಕ್ಷವ ।
ಕೆಲವು ಸಾಂಖ್ಯವು, ಯೋಗಗಳು, ಕೆಲಕೆಲವು ವೇದಾಂತ, ॥
ಕೆಲವು ಸಿದ್ಧಾಂತಗಳು, ಕೆಲವೆಲೆ । ಬಲುಮೆಯಹ ಶಾಸ್ತ್ರಪ್ರಮೇಯವು ।
ಸುಲಭವಲ್ಲವು ಸಾಧಿಸುವೊಡೀ ಭೂಮಿಕೆಗಳಿರವ　　॥ ೪ ॥

---

ರಿಗೆ. (ಹೊತ್ತುಗಳೆವರನು+) ಆಳಿಗೊಂಬರಿಗೆ--ಗೆಳೆಯರಾಗಿ ಮಾಡಿಕೊಳ್ಳುವವರಿಗೆ ಮರೆದರಿದು—ತಿಳಿಯದೆ ಆಗಲಿ ತಿಳಿದೇ ಆಗಲಿ.

೩. ನಿರ್ಗುಣಾಷ್ಟಾಂಗ—ಮುಂದೆ ಇದೇ ಅಧ್ಯಾಯದ ೭೯ ಮತ್ತು ೮೦ ನೆಯ ಪದ್ಯಗಳಲ್ಲಿ ಈ ಕವಿಯೇ ಉಲ್ಲೇಖಿಸಿರುವಂತೆ ನಿರ್ಗುಣಜ್ಞಾನದ ಪ್ರಕಾರಾಂತರಗಳಾಗಿರುವ ಯಮನಿಯಮಾದಿ ಎಂಟು ಸಾಧನಗಳು. ಪಾತಂಜಲಯೋಗಶಾಸ್ತ್ರದಂತೆ ಯಮನಿಯಮಾದಿಗಳನ್ನು ಹಿಂದೆ ೨ ಅ. ೩೬ ಪ. ದ ಟಿಪ್ಪಣಿಯಲ್ಲಿ ವಿವರಿಸಿದ್ದಾಗಿದೆ. ಅವುಗಳು ಸ್ಥೂಲಗಳೆಂದು ಭಾವಿಸಿ ಕವಿಯು ಇಲ್ಲಿ ತನ್ನ ವಿವರಣೆಯನ್ನು ನಿರ್ಗುಣಾಷ್ಟಾಂಗವೆಂದು ಕರೆದಿರುವಂತೆ ತೋರುತ್ತದೆ. ನುಗ್ಗುಮಾಡಿ—ಹಿಂದಕ್ಕೆ ತಳ್ಳಿ. ಸಮಗ್ರವಾದ+ಅಪವರ್ಗ(ಮೋಕ್ಷ)–ಸಾಯುಜ್ಯಮುಕ್ತಿ (ಸಾಲೋಕ್ಯ, ಸಾಮೀಪ್ಯ, ಸಾರೂಪ್ಯ ಎಂಬ ಮುಕ್ತಿಗಳಲ್ಲಿ ದ್ವೈತಭಾವವಿರುವದರಿಂದ ಅವು ಸಮಗ್ರಗಳಲ್ಲ ಎಂದರೆ ಪೂರ್ಣಗಳಲ್ಲ).

೪. ಆತ್ಮಾಪರೋಕ್ಷವ—ಆತ್ಮಸಾಕ್ಷಾತ್ಕಾರವನ್ನು. ಕೆಲವು ಸಾಂಖ್ಯವು—ಆತ್ಮಾನಾತ್ಮವಿವೇಕ ಮೊದಲಾದ ವಿಚಾರಗಳು ಸಾಂಖ್ಯಶಾಸ್ತ್ರದ ಸಂಬಂಧವಾದವುಗಳು. ಯೋಗಗಳು--ಮನೋನಿಗ್ರಹ ಮೊದಲಾದವುಗಳು ಯೋಗಶಾಸ್ತ್ರದ ಸಂಬಂಧವಾದವುಗಳು. ಕೆಲಕೆಲವು ವೇದಾಂತ--ಸರ್ವಾತ್ಮಭಾವ ಮೊದಲಾದವುಗಳು ವೇದಾಂತಶಾಸ್ತ್ರದ ಸಂಬಂಧವಾದವುಗಳು. ಕೆಲವು ಸಿದ್ಧಾಂತಗಳು—ನಾದೋತ್ಪತ್ತಿ ಮೊದಲಾದ ಕೆಲವು ಶೈವ ಮೊದಲಾದ ಸಂಪ್ರದಾಯಗಳ ನಿಶ್ಚಿತಾರ್ಥಗಳು. ಶಾಸ್ತ್ರಪ್ರಮೇಯವು–ಶಾಸ್ತ್ರದಲ್ಲಿ ಹೇಳಿರುವ ಪ್ರಮಾಣಗಳನ್ನು ಬಿಡಿದು ಮಾಡುವ ವಿಚಾರಗಳು.

ಸಪ್ತಭೂಮಿಕೆಗಳನು ತಿಳಿ ಪರ । ವಸ್ತುವನು ಹೊಂದುವೊಡೆ ಮನಸಿಗೆ
ಸ್ವಸ್ಥವಹ ಸೋಪಾನವಾಗಿರ್ಪವನು ಕ್ರಮದಿಂದ ॥
ವಿಸ್ತರಿಸಿ ಪೇಳುವೆನು ಕೇಳ್ಳೈ । ಹಸ್ತದಾಮಲಕದವೊಲಾತ್ಮನು ।
ನಿಸ್ತರಂಗಚಿದಬ್ಧಿಯವೊಲದರಿಂದ ತೋರುವನು ॥ ೫ ॥

ಮೊದಲ ಭೂಮಿ ಸುಖೇಚ್ಛೆಯೆರಡನೆ। ಯದು ಸದಾತ್ಮವಿಚಾರ, ಮೂರೆನಿ
ಪುದು ಕಣಾ ನಿಸ್ಸಂಗ, ನಾಲ್ಕದು ವಾಸನಾಕ್ಷಯವು, ॥
ಒದವಿದಾನಂದಿನೆಯೆ ಐದನೆ । ಯದು, ತುರಿಯವಾರನೆಯುದದರಿಂ ।
ತುದಿಯ ತುರಿಯಾತೀತವೇ ಏಳನೆಯ ಭೂಮಿಕೆಯು ॥ ೬ ॥

---

೫. ಸಪ್ತಭೂಮಿಕೆಗಳು—ಏಳು ಬಗೆಯ ಮೆಟ್ಟಿಲುಗಳನ್ನು ಮಾಡಿರುವ ಪದ್ಧತಿಯು ವೇದಾಂತಿಗಳ ಮೇಲೆ ಆಗಿರುವ ಯೋಗಶಾಸ್ತ್ರದ ಪರಿಣಾಮದ ಸೂಚನೆಯಾಗಿರುವದು. ಯೋಗಶಾಸ್ತ್ರದವರ ಧ್ಯೇಯವಾದ ಸಮಾಧಿಯು ಹೊಸದಾಗಿ ಪಡೆಯತಕ್ಕದ್ದಾದ್ದರಿಂದ ಅವರಿಗೆ ಅದನ್ನು ಪಡೆಯುವದಕ್ಕೆ ಮೆಟ್ಟಿಲುಗಳು ಬೇಕಾಗುವವು. ಅದರಂತೆಯೇ ಅವರು ತಮಗೆ ಬೇಕಾದ ಮೆಟ್ಟಿಲುಗಳನ್ನು ಮಾಡಿಕೊಂಡಿರುವರು. ವೇದಾಂತಿಗಳ ಧ್ಯೇಯವಾದ ಬ್ರಹ್ಮವು ಹೊಸದಾಗಿ ಪಡೆಯತಕ್ಕದ್ದಲ್ಲ ; ಇದ್ದದ್ದನ್ನೇ ಗುರ್ತಿಸುವದು. ಇದಕ್ಕೆ ಮೆಟ್ಟಿಲುಗಳು ಬೇಕಿಲ್ಲ. ಆದರೂ ಉಪನಿಷತ್ತುಗಳಲ್ಲಿ ಒಂದೊಂದು ಕಡೆ ಯೋಗಶಾಸ್ತ್ರದ ಮಾತುಗಳ ಛಾಯೆ ಕಾಣುವದರಿಂದ ಕೆಲವರು ವೇದಾಂತಿಗಳು ಬ್ರಹ್ಮಜ್ಞಾನಕ್ಕೂ ಈ ಭೂಮಿಕೆಗಳನ್ನು ಕಲ್ಪನೆಮಾಡಿದ್ದಾರೆ. ಆದ್ದರಿಂದ ಇದು ವೇದಾಂತದ ನಿಜವಾದ ಪ್ರಕ್ರಿಯೆಗೆ ಸಂಬಂಧಪಟ್ಟದ್ದಲ್ಲ. ಏಳು ಭೂಮಿಕೆಗಳು ಯಾವವೆಂಬುದನ್ನು ಕವಿಯು ಮುಂದಿನ ಪದ್ಯದಲ್ಲಿ ವಿವರಿಸಿದ್ದಾನೆ. ಹಸ್ತದ ಆಮಲಕದವೊಲು—ಯಾವ ಭಾಗವೂ ಪರೋಕ್ಷವಾಗಿ ಉಳಿಯದೆ ಎಲ್ಲಾ ಭಾಗವೂ ಕಾಣುವ ಅಂಗಯ್ಯೊಳಗಣ ನೆಲ್ಲಿಯಕಾಯಂತೆ. ನಿಸ್ತರಂಗಚಿದಬ್ಧಿಯವೊಲ್—ಅಲೆಗಳಿಲ್ಲದಂಥ ಜ್ಞಾನಸಮುದ್ರದಂತೆ.

೬. ಸುಖೇಚ್ಛೆ—ಇದು ಮೊದಲುಗೊಂಡ ಏಳು ಭೂಮಿಕೆಗಳ ಅರ್ಥವನ್ನೂ ಈ ಕವಿಯು ತಾನೇ ಮುಂದಿನ ಪದ್ಯದಿಂದ ೪೦ ರವರಿಗೆ ವಿವರಿಸುವನು. ಈ ಕವಿಯ ಶಿಷ್ಯರಾದ ಶ್ರೀ ಶಂಕರಾನಂದರೂ ಮತ್ತು ಜ್ಞಾನಸಿಂಧುವೆಂಬ ಗ್ರಂಥದ ಕರ್ತರಾದ ಶ್ರೀ ಚಿದಾನಂದಾವಧೂತರೂ ಶ್ರೀಮನ್ನಿಜಗುಣಶಿವಯೋಗಿಗಳೂ ಈ ಏಳನ್ನೇ ಹೇಳಿದ್ದಾರೆ. ಆದರೆ ಯೋಗವಾಸಿಷ್ಠಕಾರರ ಸಪ್ತಭೂಮಿಕೆಗಳು ಬೇರೆ. ಅವು ಯಾವವೆಂದರೆ :—ಶುಭೇಚ್ಛೆ—ತನ್ನ ಉದ್ಧಾರವನ್ನು ತಾನು ಮಾಡಿಕೊಳ್ಳಬೇಕೆಂಬ ಇಚ್ಛೆ

ಹಿಂದೆ ಮಾಡಿದ ಸುಕೃತಫಲ ತನ । ಗಿಂದು ಬಂದೊದಗಿದರೆ ನರನದ ।
ರಿಂದ ಪರಮವಿವೇಕವೈರಾಗ್ಯವನು ನೆರೆ ಪಡೆಯೆ ॥
ಒಂದರಲ್ಲಿಯು ಸುಖದ ರುಚಿ ತನ । ಗೊಂದುಬಾರಿಯು ತೋರದಿಹುದದ ।
ರಿಂದ ಮನದಲಿ ನೊಂದು ಸುಖದಿಚ್ಛೆಯನು ಮಾಡುವನು ॥ ೭ ॥

ಮಡದಿ ಮನೆ ಮನೆವಾರ್ತೆ ಮಕ್ಕಳೊ । ಳೊಡವೆವಸ್ತುಗಳಲ್ಲಿ ಬಿಡದೇ ।
ತೊಡರಿಕೊಂಡಿಹ ಮನವ ಮೆಲ್ಲನೆ ಸಡಿಲಿಸುತ್ತೊಡನೆ ॥
ದೃಢವಿರಕ್ತಿಯ ಮಾಡಿ, ದುಃಖವ । ಕೊಡಹಿ, ಲೇಸಿನ ಬಟ್ಟೆಯೊಳು ಮುಂ।
ದಡಿಯಿಡುತ ಹಾರೈಸುತಿಹನವ ಮೋಕ್ಷವನು ಬಯಸಿ ॥ ೮ ॥

ಯೋಗಸಿದ್ಧಿಯ ಬಯಸ; ದಿವಿಜರ।ಭೋಗವನು ತಾನೊಲ್ಲ; ಸಕಲವ ।
ದಾಗಿ ಕೆಡುವದಿದೆಂದು ನಿಸ್ಸ್ಪೃಹನಾಗಿ ನಿಮಿಷದಲಿ ॥
ಮೇಗೆ ತನಗಿನ್ನಾವುದೋ ಗತಿ! । ಶ್ರೀಗುರುವಿನುಪದೇಶ ತನಗದು ।
ಹೇಗಹುದೊ! ಎಂಬನು ಸುಖೇಚ್ಛೆಯ ಯೋಗಿಯೆನಿಸುವನು ॥ ೯ ॥

ಪುಣ್ಯವನು ಮಾಡುವನು ; ಪಾಪವ ।ಮುನ್ನಲೇ ವರ್ಜಿಸುವ; ದುಃಖವ।
ನನ್ಯರಿಂಗಾಚರಿಸ ; ತನ್ನಂತೆಲ್ಲರನು ಬಗೆವ ; ॥

---

ವಿಚಾರಣಾ—ಆತ್ಮವಿಚಾರವನ್ನು ಮಾಡುವದು, ತನುಮಾನಸ—ಮನಸ್ಸನ್ನು ವಿಷಯಗಳ ಕಡೆಗೆ ಬಿಡದೆ ಸೊರಗಿಸುವದು, ಸತ್ತ್ವಾಪತ್ತಿ—ಮನಸ್ಸು ಆತ್ಮಸ್ವರೂಪದಲ್ಲಿ ನಿಲ್ಲುವದು, ಅಸಂಸಕ್ತಿ—ಮನಸ್ಸಿಗೆ ಎರಡನೆಯದನ್ನು ಹಚ್ಚಿಕೊಳ್ಳದೆ ಇರುವದು, ಪದಾರ್ಥಾಭಾವಿನೀ—ಹೊರಗಾಗಲಿ ಒಳಗಾಗಲಿ ಯಾವದೊಂದು ವಿಶೇಷಜ್ಞಾನವೂ ಆಗದಿರುವದು, ತುರ್ಯಗಾ—(ಮೂರವಸ್ಥೆಗಳ ಸಾಕ್ಷಿಯಾಗಿ) ನಾಲ್ಕನೆಯದನಿಸಿಯದೆ. ತನ್ನ ಸ್ವರೂಪದಲ್ಲಿಯೇ ತಾನು ಸೇರಿ ಇರುವದು.

೭. ಒಂದರಲ್ಲಿಯು—ಹೊರಗಣ ಯಾವ ವಿಷಯದಲ್ಲಿಯೂ.

೮. ಲೇಸಿನ ಬಟ್ಟೆಯೊಳು—ಪುಣ್ಯಕರವಾದ ದಾರಿಯಲ್ಲಿ. ಮೋಕ್ಷವನು ಬಯಸಿ—ಸುಖೇಚ್ಛೆಯಿಂದ.

೯. ಬಯಸ—ಬಯಸುವದಿಲ್ಲ. (ಸಕಲವು+) ಅದಾಗಿ—ತನ್ನಷ್ಟಕ್ಕೆ ತಾನೆ. ನಿಸ್ಸ್ಪೃಹನಾಗಿ—ಯಾವದನ್ನೂ ಬಯಸದೆ. ಯೋಗಿ—ಸಾಧಕನು.

೧೦. ಮುನ್ನಲೇ—ಪುಣ್ಯಕರ್ಮದ ಕಡೆಗೆ ಮನಸ್ಸನ್ನು ಹಾಕುವದಕ್ಕೆ ಮೊದಲೇ. ದುಃಖವ—ದುಃಖವಾಗುವಂಥ ಕಾರ್ಯವನ್ನು. ಸತ್ಯಪ್ರಿಯಸಂಪನ್ನವಚನವ—ಸತ್ಯ

ಉನ್ನತಾಶೆಯ ಬಿಡುವ ; ದೇಹವ | ಮನ್ನಿಸನು ಮಿಗೆ ; ಸತ್ಯಪ್ರಿಯಸಂ |
ಪನ್ನವಚನವ ನುಡಿವ ಪ್ರಥಮದ ಭೂಮಿಕೆಯನೈದಿ || ೧೦ ||

ತಾನದಾರೋ? ತನುವಿನೊಳು ತಾ| ನೇನುರೂಪಿನೊಳಿಹನೊ? ತನಗಿ |
ನ್ನೇನುಕಾರಣ ಬಂದುದೀ ಸಂಸಾರಸುಖದುಃಖ ? ||
ಈ ನಿಬಿಡದಜ್ಞಾನ ತನಗಿ | ನ್ನೇನುವಿಧದಲಿ ಕೆಡುವದೋ ? ತ |
ನ್ನೀ ನಿಜವನೆಂತರಿವೆನೆಂದು ವಿಚಾರಿಸುವನೊಳಗೆ || ೧೧ ||

ನಾನು ನಾನೆಂದೆಂಬ ಹಮ್ಮಿದು | ತಾನದೇನೋ ? ತನಗೆ ತಾನಿ |
ನ್ನೇನುಕಾರಣ ಮರೆಯೊಳುಳಿದೆನೊ ತನ್ನನರಿವಲ್ಲಿ ? ||
ತಾನು ತೋರುತ ತೋರದಿರುತಿಹು | ದೇನು ಬೆಡಗಿಂತೆನ್ನ ಮರವೆಯ |
ದೇನೆನುತ ತನ್ನೊಳಗೆ ತಿಳಿಯೆ ವಿಚಾರವೆನಿಸುವದು || ೧೨ ||

ವಿರತಿಸುಖವನು ಬಲ್ಲ ; ವೇದದ | ಪರಮಸಾರವನರಿವ ; ದೇಹದ |
ಬರಿಯ ಹಮ್ಮನು ಬಿಡುವನಾತ್ಮವಿಚಾರವನು ಪಡೆವ ; ||
ಹಿರಿಯರನು ಸೇವಿಸುವನವರಿಂ | ದರಿವನಾತ್ಮಹಿತಾಹಿತವ ; ಸಂ |
ಸರಣದುಃಖವ ಪರಿಹರಿಸಿ ಗುರುಪದವ ಸಾರುವನು || ೧೩ ||

---

ಮತ್ತು ಪ್ರಿಯ ಎಂಬ ಸಂಪತ್ತಿನಿಂದ ಕೂಡಿದಂಥ. ಇಂಥ ಮಾತನ್ನು ಹೇಳಬೇಕೆಂಬುದಕ್ಕೆ "ಸತ್ಯಂ ಬ್ರೂಯಾತ್ಪ್ರಿಯಂ ಬ್ರೂಯಾನ್ನ ಬ್ರೂಯಾತ್ಸತ್ಯಮಪ್ರಿಯಂ || ಪ್ರಿಯಂ ಚ ನಾನೃತಂ ಬ್ರೂಯಾದೇಷ ಧರ್ಮಃ ಸನಾತನಃ" ಎಂಬ ಸ್ಮೃತಿವಾಕ್ಯದ ಆಧಾರವಿದೆ.

೧೧. ಏನುರೂಪಿನೊಳು—ಯಾವ ರೂಪಿನಲ್ಲಿ. ನಿಬಿಡದ—ದಟ್ಟವಾದ. ಇನ್ನೇನು ವಿಧದಲಿ—ಬೇರೆ ಯಾವ ವಿಧದಲ್ಲಿ. ವಿಚಾರಿಸುವನು—ಸದಾತ್ಮವಿಚಾರವೆಂಬ ಎರಡನೆಯ ಭೂಮಿಕೆಯ ಸಾಧನವನ್ನು ನಡೆಸುವನು.

೧೨. ಹಮ್ಮು (+ಇದು)— ಅಹಂಕಾರ. ಮರೆಯೊಳುಳಿದೆನೊ—ನನ್ನ ನಿಜವನ್ನು ನಾನು ಅರಿಯಲಾರದವನಾದೆನೊ. ತಾನು ತೋರುತ ತೋರದಿರುತಿಹುದು—ನಾನು ನಾನೆಂಬ ಸಾಮಾನ್ಯಜ್ಞಾನವು ತೋರಿದರೂ ಅದರ ಸ್ವರೂಪಜ್ಞಾನವು ತೋರದೆ ಇರುವದು.

೧೩. ಆತ್ಮಹಿತಾಹಿತವ—ತನಗೆ ಒಳ್ಳೆಯದಾಗುವದನ್ನೂ ಕೆಟ್ಟದಾಗುವದನ್ನೂ. ಸಂಸರಣದುಃಖವ—ಇಹಲೋಕಕ್ಕೂ ಪರಲೋಕಕ್ಕೂ ಸುತ್ತುವ ಕಷ್ಟವನ್ನು. ಸಾರುವನು—ಸೇರುವನು.

ಪರಮಕರುಣಾಶರಧಿಯೆನಿಸುವ । ಗುರುವರನ ಶಿಕ್ಷೆಯಲಿ ಮನಸಿನ ।
ಸರಿಪರಿಯ ನೆನಹೆಂಬ ಕರ್ಕಶಕದಡು ನೆರೆ ತಿಳಿಯೆ ॥
ಸುರಿದು ಶಾಂತಿಯನೈದಿ, ಪಳುಕಿನ । ತೆರದಿ ನಿರ್ಮಲವಾದ ಬುದ್ಧಿಯ ।
ತಿರುಳಿನಲಿ ನಿಜಸುಖವ ತಿಳಿವ ವಿಚಾರಪರನಾಗಿ ॥ ೧೪ ॥

ಜೀವಪರಮರ ಲಕ್ಷಣವ, ಮಾ । ಯಾವರಣದಿಂದಾದ ಮರವೆಯ, ।
ಭಾವಿಸುತ ವಾಚ್ಯಾರ್ಥಲಕ್ಷ್ಯಾರ್ಥಗಳ ವಿವರಣೆಯ, ॥
ತೀವಿ ಲಕ್ಷಣೆಯಿಂದ ವಾಕ್ಯವ, । ಕೇವಲಾಖಂಡಾದ್ವಯಾತ್ಮನ ।
ಸಾವಧಾನದಿ ತಿಳಿದೊಡಾತ್ಮವಿಚಾರವೆನಿಸುವದು ॥ ೧೫ ॥

ಈ ವಿವೇಕ ವಿಚಾರ ನೆಲೆಗೊಳ । ಲಾವರಣವಳಿದಾತ್ಮವಸ್ತುವ ।
ಭಾವಿಸುತಲದರರಿವಿಗೊಲಿದಾಸೆಯನು ಮಾಡುತ್ತ ॥
ತೀವಿದೀ ಜ್ಞಾತೃತ್ವವೆಡೆಗೊಂ । ಡಾವಗಲು ನಿಸ್ಸಂಗಿಯಾಗೆ ಸು ।
ಖಾವಬೋಧವು ತೋರುತಿಹುದೆರಡನೆಯ ಭೂಮಿಯಲಿ ॥ ೧೬ ॥

ವಿಷಯಸುಖವನು ಚಿಂತಿಸದೆ, ತನ । ಗೆಸೆವ ವೈರಾಗ್ಯವನು ಬಿಡದಿರು ।
ತಸಮಸಜ್ಜನರೊಡನೆ ಗೋಷ್ಠಿಯ ಮಾಡಿ ದುರ್ಜನರ ॥
ಘಸಣಿಯನು ಬಿಟ್ಟಾತ್ಮನಲ್ಲಿಯೆ । ವ್ಯಸನ ದೃಢತರವಾಗೆ ನಿಜಸುಖ ।
ವೊಸರುತಂಗಯ್ಯೊಳಗೆ ಮಾಣಿಕದಂತೆ ತೋರುವದು ॥ ೧೭ ॥

---

೧೪. ಶಿಕ್ಷೆಯಲಿ—ಉಪದೇಶದಿಂದ. ಕರ್ಕಶಕದಡು—ಬಲವಾದ ಹೊಲಸು (ಎಷ್ಟು ಪ್ರಯತ್ನಮಾಡಿದರೂ ಮನಸ್ಸಿನ ಬಗೆಬಗೆಯ ಕಲ್ಪನೆಗಳು ಹಿಮ್ಮೆಟ್ಟುವದಿಲ್ಲವಾದ್ದರಿಂದ ಆ ಕಲ್ಪನೆಗಳೆಂಬ ದೋಷವನ್ನು ಕವಿಯು ಕರ್ಕಶವೆಂದು ಕರೆದಿದ್ದಾನೆ). ಪಳುಕಿನ—ಸ್ಫಟಿಕದ.

೧೫. ತೀವಿ . . ವಾಕ್ಯವ—ವಾಕ್ಯವನ್ನು ಲಕ್ಷಣೆಯಿಂದ ತೀವಿ ಎಂದನ್ವಯವು ಎಂದರೆ ವಾಕ್ಯಕ್ಕೆಲ್ಲ ಲಕ್ಷ್ಯಾರ್ಥವನ್ನು ಮಾಡಬೇಕೆಂದು ತಾತ್ಪರ್ಯ.

೧೬. ಆವರಣವು—ಆತ್ಮಸ್ವರೂಪವು ಕಾಣಬರದಂತೆ ಮುಚ್ಚಿಕೊಂಡಿರುವ ಮುಸುಕು. ಅದರ+ಅರಿವಿಗೆ—ಆ ಆತ್ಮಸ್ವರೂಪದ ಜ್ಞಾನಕ್ಕೆ. ಜ್ಞಾತೃತ್ವವೆಡೆಗೊಂಡು—ನಾನು ತಿಳಿಯುವವನೆಂಬ ಕಲ್ಪನೆಯಿಂದ ಕೂಡಿ (ಮನಸ್ಸಿನಲ್ಲಿ ಆತ್ಮವಸ್ತುವನ್ನು ಭಾವಿಸುವಾಗ ನಾನು ತಿಳಿಯುವವನೆಂಬ ಕಲ್ಪನೆಯಿರುವದು. ಆತ್ಮಸಾಕ್ಷಾತ್ಕಾರವಾದಾಗ

ತಾನೆ ಸತ್ಯಜ್ಞಾನಸುಖಮಯ, । ಸ್ವಾನುಭವಸಂವೇದ್ಯ ಘನವಿ ।
ನ್ನೇನು? ತೋರುವ ತೋರಿಕೆಯ ಸಂಸರ್ಗ ತನಗಿ ॥
ಭಾನು ಬೆಳಗಲು ಲೋಕ ಚೇಷ್ಟಿಸು । ವಾ ನಿಯಮದಲಿ ಸಕಲಕರಣಕೆ ।
ತಾನು ತಿಳಿಯೆ ನಿಮಿತ್ತಕಾರಣನೆಂದು ಬಗೆದಿಹನು ॥ ೧೮ ॥

ಹರಿವ ಜಲಗಳು ಜನ್ಮಭೂಮಿಯು ।ನರಿಯದಂದದೊಳಾತ್ಮನಿಂದಲಿ ।
ಸ್ಫುರಿಸುತಿಹ ಕರಣಗಳು ಕಾರಣವಾದ ವಸ್ತುವನು ॥
ಅರಿಯಲರಿಯವು ; ತಿಳಿಯೆ ಸೂರ್ಯನ । ಕಿರಣದಂತೆ ಪ್ರವೃತ್ತಿಮುಖವಾ
ಗಿರುತಿರಲ್ಕದರಲ್ಲಿ ಸಂಗವದಿಲ್ಲವೆಂದಿರ್ಪ ॥ ೧೯ ॥

ಜಲದೊಳಗೆ ತೋರುವ ತರಂಗಾ । ವಳಿಗಳೇರಿಯು ಮೀರಿ ತೋರ್ಪವು ।
ತಿಳಿಯಲುದಕವ ಮೀರಿ ತೋರಲ್ಕಳವೆ? ಕರಣಗಳು ॥
ಹೊಳೆವವಾತ್ಮನ ತೇಜದಿಂದದ । ನುಳಿದು ತೋರಲ್ಕರಿಯವೀ ತನು ।
ಳನುಳಿದು ತೋರುವವು ; ತನಗವಕಾ ಪರಿಯ ಸಂಗ ॥ ೨೦

---

ಅದು ಸುಳ್ಳಿನಿಸಿಕೊಂಡು ಹೋಗುವದು). ನಿಸ್ಸಂಗಿಯಾಗೆ–ನಿಸ್ಸಂಗವೆಂಬ ಮೂರ ಮೆಟ್ಟಲಿಗೆ ಹತ್ತುವವನಾಗಲು. ಸುಖಾವಬೋಧವು— ಸುಖದ ಜ್ಞಾನವು.

೧೭. ಘುಸಣಿ—ಗೋಜು. ವ್ಯಸನ–ಒಂದನ್ನು ಬಿಟ್ಟಿರಲಾರದಿರುವದು. ಒಸರುತ–ಜಿನುಗುತ್ತ, ತೊಟ್ಟಿಕ್ಕುತ್ತ. ಅಂಗಯ್ಯೊಳಗೆ ಮಾಣಿಕದಂತೆ–ಯಾವ ಭಾಗವೂ ಪರೋಕ್ಷವಾಗಿ ಉಳಿಯದಂತೆ ಎಲ್ಲ ಭಾಗವೂ ಸ್ಪಷ್ಟವಾಗಿ ಅಂಗಯ್ಯಲ್ಲಿ ಹೊಳೆಯುವ ಮಾಣಿಕ್ಯದ ಹಾಗೆ.

೧೮. ಸ್ವಾನುಭವಸಂವೇದ್ಯ---ತನ್ನ ಅನುಭವದಿಂದಲೇ ತಿಳಿದು ಬರತಕ್ಕವನು ಘನವಿನ್ನೇನು ?---ಸಚ್ಚಿದಾನಂದಸ್ವರೂಪನಾದ ತನಗಿಂತ ಹೆಚ್ಚಿನದೇನಿದೆ ? ಸಂಸರ್ಗ ತನಗಿಲ್ಲ---ಈ ಮಾತು ನಿಸ್ಸಂಗವೆಂಬ ಮೂರನೇ ಭೂಮಿಕೆಯನ್ನು ನೆನಪುಗೊಡುವದು. ನಿಮಿತ್ತಕಾರಣನು—ತನ್ನ ಬರೀ ಇರುವಿಕೆಯ ಬಲದಿಂದ ಇಂದ್ರಿಯಗಳು ಚೇಷ್ಟಿಸವಂತೆ ಮಾಡುವವನು.

೧೯. ಕಾರಣವಾದ–ತನಗೆ ಆಧಾರವಾಗಿರುವ. ಸೂರ್ಯನ ಕಿರಣದಂತೆ—ಸೂರ್ಯನ ಕಿರಣಗಳು ಯಾವ ವಸ್ತುವಿಗೆ ತಾಕಿದರೂ ಆ ವಸ್ತುವಿನ ಯಾವ ಗುಣದ ಸೋಂಕನ್ನೂ ಅಂಟಿಸಿಕೊಳ್ಳದಿರುವಂತೆ.

೨೦. ತನಗೆ+ಅವಕೆ+ಆ ಪರಿಯ ಸಂಗ—ಆತ್ಮನಿಗೂ ಇಂದ್ರಿಯಗಳಿಗೂ ಎಂಥ ಸಂಗವೆಂದರೆ ಅಲೆಗಳು ಏರಿಯನ್ನು ಬಿಟ್ಟು ಬಂದು ಕಾಣಿಸಿಕೊಳುವಂತೆ ನೀರನ್ನು

ಹಾಲುವೊಸರಂದದ ವಿಕಾರ್ಯನು,। ಕೇಳು ಸ್ವರ್ಗದವೋಲು ಪ್ರಾಪ್ಯನು,।
ಹೇಳಲೇನುತ್ಪಾದ್ಯ ಘಟದಂದದಲಿ, ದ್ವಿಜನಂತೆ ॥
ಮೇಲೆ ಸಂಸ್ಕಾರ್ಯನುಮೆನಿಸನವ; । ಕೇಳು ನೀನದರಂತೆ ಕರಣದ ।
ಕೋಳವಹ ನಾಲ್ಕಾದ ಕರ್ಮದ ಸಂಗ ತನಗಿಲ್ಲ　　　　॥ ೨೧ ॥

ಹಮ್ಮು ಕರ್ಮವ ಮಾಡಿ ತತ್ಫಲ । ಧರ್ಮವಹ ಸುಖದುಃಖದನುಭವ ।
ವೆಮ್ಮದೆಂದೇ ಬಗೆದು ಕರ್ತೃತ್ವಾಭಿಮಾನದಲಿ ॥
ಹೆಮ್ಮೆಯೇ ಒಡಲಾಗಿ ಮೆರೆವೀ । ದುರ್ಮದದ ಹಮ್ಮಿಗೆಯು ನಿಜವಹೆ ।
ನಿರ್ಮಲಾತ್ಮಕನಾದೆನಗೆ ಸಂಸರ್ಗವಿಲ್ಲೆಂದ　　　　॥ ೨೨ ॥

ಗಗನಲತೆಯಲಿ ಪಕ್ಷಿ ಸುಳಿದೊಡೆ । ಬಗೆಯಲವಕನ್ಯೋನ್ಯಸಂಗತಿ
ಯೊಗೆವುದೇ ? ಚಿದ್ಗಗನಲತೆಯಲಿ ಹಮ್ಮು ಸುಳಿದಾಡೆ ॥
ನೆಗಳಿದೀ ನಿಸ್ಸಂಗ, ನಿರ್ಗುಣ । ನಗಣಿತನಿಜಾನಂದ, ನಿರುಪಮ, ।
ನಿಗಮವೇದ್ಯ, ನಿರಂಗನೆನಗದಕೆಂತಹುದು ಸಂಗ ?　　　　॥ ೨೩ ॥

---

ಬಿಟ್ಟು ಬಂದು ಕಾಣಿಸಿಕೊಳ್ಳಲಾರವಷ್ಟೆ. ಹಾಗೆ ಇಂದ್ರಿಯಗಳು ಶರೀರದ ಹೊರ ಗಿದ್ದು ಬೆಳಗಬಲ್ಲವು. ಹೇಗೆಂದರೆ ಇಂದ್ರಿಯಗಳು ಶರೀರಗಳನ್ನು ತಮ್ಮೆದುರಿಗೆ ನೋಡುತ್ತಿರುವವು. ಆದರೆ ಆತ್ಮತೇಜದ ಬೆಂಬಲವನ್ನು ಬಿಟ್ಟು ಬೆಳಗಲಾರವೆಂದರ್ಥ.

೨೧. ವಿಕಾರ್ಯನು---ವಿಕಾರವಾಗುವವನು, ಬದಲಾವಣೆಯನ್ನು ಹೊಂದುವವನು (ಎನಿಸನು-- ಅನ್ನಿಸಿಕೊಳ್ಳುವದಿಲ್ಲ ; ಎಂದರೆ ಬದಲಾವಣೆಯನ್ನು ಹೊಂದುವದಿಲ್ಲ ಎಂದರ್ಥ). ಪ್ರಾಪ್ಯನು---ಹೊಸದಾಗಿ ದೊರೆಯುವವನು (ಎನಿಸನು). ಉತ್ಪಾದ್ಯ--ಹೊಸದಾಗಿ ಹುಟ್ಟುವವನು (ಎನಿಸನು). ಸಂಸ್ಕಾರ್ಯನು---(ಬ್ರಾಹ್ಮಣನಂತೆ) ಸಂಸ್ಕಾರವನ್ನು---ಕರ್ಮದಿಂದ ಶುದ್ಧಿಯನ್ನು) ಪಡೆಯುವವನು (ಎನಿಸನು). ನಾಲ್ಕಾದ ಕರ್ಮ--- ವಿಕಾರ್ಯ, ಪ್ರಾಪ್ಯ, ಉತ್ಪಾದ್ಯ, ಸಂಸ್ಕಾರ್ಯ ಎಂಬ ಕರ್ಮಸಂಬಂಧಸ್ವರೂಪಗಳು ನಾಲ್ಕು (ಆತ್ಮನಿಗಿಲ್ಲವೆಂದರ್ಥ).

೨೩. ಅನ್ಯೋನ್ಯಸಂಗತಿ---ಒಂದಕ್ಕೊಂದು ಸಂಬಂಧವು. ನಿರಂಗ---ಅವಯವವಿಲ್ಲದವನು (ಸಂಬಂಧವಾಗಬೇಕಾದರೆ ಅಂಗವಿರಬೇಕಾಗುವದು. ಆತ್ಮನು ನಿರಂಗನಾದ್ದರಿಂದ ಅವನಿಗೆ ಯಾವದರ ಸಂಬಂಧವೂ ಇಲ್ಲ.) ಎನಗೆ---ನಿಸ್ಸಂಗ ಮೊದಲುಗೊಂಡು ನಿರಂಗನೆಂಬುದರವರೆಗಿನ ಗುಣಗಳುಳ್ಳ ನನಗೆಂದರ್ಥ.

ತ್ರಿಜಗವಿದು ಬಗೆಯಿಂದ । ತೋರ್ಪುದು ನಿಜದವೋಲ್ ; ಬಗೆಯಡಗೆ।
ಕೆಡುವದು; ಭುಜಗ ರಜ್ಜುವಿನಲ್ಲಿ ತೋರ್ದಳಿವಂತೆ; ಶುಕ್ತಿಯಲಿ ॥
ರಜತದಂದದನಾದ್ಯವಿದ್ಯಾ । ವೃಜಿನಲಿಂಗಶರೀರಸಂಗವು ।
ನಿಜದೊಳೆನಗಿಲ್ಲೆಂದು ನಿಸ್ಸಂಗತಿಯನೊಂದಿಹನು ॥ ೨೪ ॥

ಪುಸಿಯ ಹಮ್ಮೇ ಕನಸಿನಂದದೊ । ಳೆಸೆದು ಜಗವಾದಂತೆ ತೋರ್ಪುದು ।
ಬಿಸಿಲದೊರೆಯಂದದಿ ವಿಚಾರಿಸಿ ನೋಡೆ ತೋರದದು ; ॥
ಅಸಮತೇಜೋನಿಧಿಗೆ ಹಮ್ಮಿನ । ಘಸಣಿಯುಂಟೇ ? ರವಿಗೆ ಕತ್ತಲೆ ।
ಮುಸುಕುವದೆ ? ಅದರಂತೆ ತಾ ನಿಸ್ಸಂಗನೆಂದಿಹನು ॥ ೨೫ ॥

ಅನಿಲ ಸುಳಿದಾಡಿದೊಡೆ ಗಗನ । ಕ್ಕನಿಲಗೆತ್ತಣ ಸಂಗ ? ಆತ್ಮನು ।
ತನುರಹಿತ ಪರಿಪೂರ್ಣ ನಿತ್ಯಾನಂದವಿಗ್ರಹನು ॥
ನೆನಹಿನೊಡಲಾಗಿರ್ಪ ಮಾಯಾ । ಜನಿತವಹ ಷೋಡಶವಿಕಾರದ ।
ಮನದ ಸಂಗವದೆತ್ತಣದು ತನಗೆಂದು ಬಗೆದಿಹನು ॥ ೨೬ ॥

---

೨೪. ತ್ರಿಜಗ—ಸ್ವರ್ಗ, ಮರ್ತ್ಯ, ಪಾತಾಲ. ಬಗೆಯಡಗೆ ಕೆಡುವದು—ಈ ಅರ್ಥಕ್ಕೆ ಆಧಾರವಾದ ಮಾಂಡೂಕ್ಯಕಾರಿಕೆಯೇನೆಂದರೆ "ಮನೋದೃಶ್ಯಮಿದಂ ದ್ವೈತಂ ಯತ್ಕಿಂಚಿತ್ಸಚರಾಚರಂ । ಮನಸೋ ಹ್ಯಮನೀಭಾವೇ ದ್ವೈತಂ ನೈವೋಪಲಭ್ಯತೇ ॥" (ರಜತದ+ಅಂದದ+) ಅನಾದ್ಯ . . ಸಂಗವು—ಅನಾದಿಯಾದ ಅವಿದ್ಯೆಯೆಂಬ ಪಾಪದ ರೂಪವಾದ ಲಿಂಗಶರೀರದ ಸಂಗವು.

೨೫. ಪುಸಿಯ - - ತೋರದದು— ಈ ಪೂರ್ವಾರ್ಧವು ಬಹುಮಟ್ಟಿಗೆ ಹಿಂದಿನ ಪದ್ಯದ ಪೂರ್ವಾರ್ಧದ ರೂಪಾಂತರವು. ಅಲ್ಲಿ ಮನಸ್ಸು ಸುಷುಪ್ತಿ ಮುಂತಾದವಸ್ಥೆಯಲ್ಲಿ ಲಯವಾದರೆ ಜಗತ್ತಿಲ್ಲವೆಂದಿದೆ. ಇಲ್ಲಿ ವಿಚಾರದಿಂದ ನೋಡಿದರೆ ಹಮ್ಮೇ ಇಲ್ಲವಾದ್ದರಿಂದ ಜಗತ್ತಿಲ್ಲವೆಂದಿದೆ.

೨೬. ನೆನಹಿನೊಡಲಾಗಿರ್ಪ— ಕಲ್ಪನೆಗಳಿಗೆಲ್ಲ ಆಶ್ರಯವಾಗಿರುವ. ಷೋಡಶ ವಿಕಾರ--ರಾಗ, ದ್ವೇಷ, ಕಾಮ, ಕ್ರೋಧ, ಲೋಭ, ಮೋಹ, ಮದ, ಮತ್ಸರ, ಈರ್ಷೆ) ಅಸೂಯೆ, ದಂಭ, ದರ್ಪ, ಅಹಂಕಾರ, ಇಚ್ಛೆ, ಭಕ್ತಿ, ಶ್ರದ್ಧೆ ಈ ಹದಿನಾರೆಂದು ವಾಸುದೇವಮನನದಲ್ಲಿರುವದು. ಐತರೇಯೋಪನಿಷತ್ತಿನಲ್ಲಿ ಸಂಜ್ಞಾನ (ಚೇತನ ಭಾವ), ಆಜ್ಞಾನ (ಈಶ್ವರಭಾವ), ವಿಜ್ಞಾನ(ಕಲಾದಿಪರಿಜ್ಞಾನ), ಪ್ರಜ್ಞಾನ, ಮೇಧಾ, ದೃಷ್ಟಿ, ಧೃತಿ, ಮತಿ, ಮನೀಷಾ ಜೂತಿ (ದುಃಖಿತ್ವಭಾವ), ಸ್ಮೃತಿ, ಸಂಕಲ್ಪ, ಕ್ರತು ಅಸು, ಕಾಮ, ವಶ ಈ ಹದಿನಾರು ಮನಸ್ಸಿನ ವಿಕಾರಗಳೆಂದಿರುವವು.

ಮುನ್ನ ಮಾಡಿದ ಪುಣ್ಯಫಲದಿಂ । ದುನ್ನತವಿರಕ್ತಿಯನು ಪಡೆದದ
ಮನ್ನಿಸುತ ಸಜ್ಜನಸಮಾಗಮದಿಂದ, ಶಾಸ್ತ್ರವನು ॥
ತನ್ನ ಮತಿಯು ವಿವೇಕದಿಂ ತಿಳಿ । ದನ್ಯಜಡಸಂಗವನುಳಿದ ಚೈ ।
ತನ್ಯ ತಾನೆಂಬೆಚ್ಚರವೆ ಮೂರನೆಯ ಭೂಮಿಕೆಯು ೨೭ ॥

ಇಂತು ಭೂಮಿತ್ರಿತಯವನು ನೆರೆ । ಸಂತತಾಭ್ಯಾಸವನು ಮಾಡುತ ।
ಚಿಂತಿಸದೆ ಹಿಂದಾದುದನು, ಮುಂದೇನುಭಾವಿಸದೆ, ॥
ಮುಂತೆ ದೃಷ್ಟಿಪಥಕ್ಕೆ ಬಿದ್ದುದ । ನೆಂತುಮಿದು ನಿಜವೆಂದು ಬಗೆಯದೆ, ।
ಭ್ರಾಂತಿಯಳಿದುಳಿದಿರ್ಪುದೇ ನಿರ್ವಾಸನೆಯ ಭೂಮಿ ॥ ೨೮ ॥

ತನುವು ತಾನೆಂದೆಂಬ ವಾಸನೆ । ಯೆನಿತೆನಿತೊ ವಿಧ ಶಾಸ್ತ್ರವಾಸನೆ, ।
ಘನತರದ ಲೌಕಿಕದ ವಾಸನೆಯಾದಿಯಾಗಿರ್ದ ॥
ಇನಿತು ವಾಸನೆಗಳಲಿ ಲೇಪವ । ದೆನಿಪ ಮನವನು ತೆಗೆದು ; ಯೋಗದಿ ।
ಚಿನುಮಯಾತ್ಮನೊಳೊಂದಿಸಲು ನಿರ್ವಾಸನೆಯ ಭೂಮಿ ॥ ೨೯ ॥

ವಾಸನಾಕ್ಷಯವೆನಿಸುವದು ದು । ರ್ವಾಸನೆಗಳೆನಿಸಿರ್ಪ ಪಂಚ ।
ಕ್ಲೇಶವಳಿವುದರಿಂದ ಚಿತ್ತದ ಮಲಿನವನು ತೊಳೆದು, ॥
ಭಾಸಮಾನದಿ ಬುದ್ಧಿ ಬೆಳಗುತ । ಸೂಸದಂತರ್ಮುಖವದಾಗಿರ ।
ಲೀ ಸಕಲ ತೋರುವದು ಕನಸಿನವೋಲು ಪುಸಿಯಾಗಿ ॥ ೩೦ ॥

---

೨೭. (ಪಡೆದು+) ಅದ—ಆ ವೈರಾಗ್ಯವನ್ನು. ಅನ್ಯಜಡಸಂಗವನುಳಿದ—ಉಳಿದ ಮೂಢಜನರ ಗೋಷ್ಠಿಯನ್ನು ಬಿಟ್ಟಂಥ ಎಂಬುದೊಂದರ್ಥ ; ಉಳಿದ ಜಡವಸ್ತುಗಳಿಗೂ ಆತ್ಮಸ್ವರೂಪನಾದ ತನಗೂ ಯಾವ ಸಂಗವೂ ಇಲ್ಲವೆಂದು ತಿಳಿದಂಥ ಎಂಬದಿನ್ನೊಂದರ್ಥ.

೨೮. ಮುಂತೆ—ಇದಿರಾಗಿ. ಎಂತುಮಿದು—ಯಾವ ರೀತಿಯಿಂದ ನೋಡಿದರೂ ಇದು. (ಸುಳ್ಳಾದದ್ದು). ನಿರ್ವಾಸನೆಯ ಭೂಮಿ— ವಾಸನಾಕ್ಷಯವೆಂಬ ನಾಲ್ಕನೆಯ ಭೂಮಿಕೆ.

೨೯. ಎನಿತೆನಿತೊ ವಿಧ—ಎಷ್ಟೆಷ್ಟೋ ಬಗೆಯಾದ. ಶಾಸ್ತ್ರವಾಸನೆ—ಬೇರೆ ಬೇರೆ ಶಾಸ್ತ್ರಗಳಲ್ಲಿ ಬೇರೆ ಬೇರೆ ರೀತಿಯಲ್ಲಿ ಹೇಳಿರುವದೆಂಬರ್ಥದಲ್ಲಿಯೇ ತೊಳಲುತ್ತಿರುವುದು. ಲೌಕಿಕದ ವಾಸನೆ—ಈ ಲೋಕದಲ್ಲಿ ತಾನು ಹೆಸರುವಾಸಿಯನ್ನು ಹೊಂದಬೇಕೆಂಬ ಬಲವಾದ ಇಚ್ಛೆ. ಯೋಗದಿ—ಸಾಧನದಿಂದ.

ಕಿಲುಬು ಹತ್ತಿದ ಕನ್ನಡಿಯವೋ। ಲಿಲೆಮಗನೆ, ಬಹುಜನ್ಮಜನ್ಮದಿ।
ತೊಳತೊಳಲಿ ಸಂಸಾರದಲಿ ಗಳಿಸಿರ್ದ ವಾಸನೆಯ ॥
ಕಲುಷವನು ಕಡೆಗಾಣಿಸಲು ನಿ। ರ್ಮಲವ ಮಾಡಿದ ಮುಕುರದಂದದಿ।
ಪೊಳೆವ ಮನವಾತ್ಮದಲಿ ನೆಲೆಗೊಳೆ ವಾಸನಾಕ್ಷಯವು ॥ ೩೧ ॥

ಇದು ಕಣಾ ನಾಲ್ಕನೆಯ ಭೂಮಿಯು। ಹದನ; ಮೇಲಲ್ಲಿಂದಲಭ್ಯಾ।
ಸದೊಳು ನಿರ್ಮಲಚಿತ್ತವಾತ್ಮಾನಂದದೊಳು ಮುಳುಗೆ ॥
ಮುದವೊದವಿದಾನಂದಪದದೊಳು। ಪುದಿದು ನಿದ್ರಾಳುವಿನವೋಲಿರ।
ಲದನು ಪೇಳ್ವರು ಸುಪ್ತಿಯೆಂದು ನಿರಸ್ತಮಾಯೆಯನು ॥ ೩೨ ॥

ತಮದೊಳೊಂದಿರೆ ನಿದ್ರೆ; ಜಾಗ್ರದ।ಭ್ರಮೆಯಳಿದು ನಿಜಸುಖದೊಳಗೆನಿ।
ರ್ಮಮತೆಯಿಂದಡಗಿರಲು ಬುದ್ಧಿಗೆ ಯೋಗನಿದ್ರೆಯದು ; ॥
ತಮದ ನಿದ್ರಾನಂದ ಕ್ಷಣಿಕವು। ವಿಮಲಯೋಗಾನಂದವಧಿಕವಿ।
ದಮಮ! ಸಹಜಾನಂದವಂತೆಂತೆನಲಶಕ್ಯವಲಾ !! ॥ ೩೩ ॥

ಜೀವಪರಮೈಕ್ಯವನು ಪಡೆದವ। ಗಾವ ಸಂಗವುಮಿಲ್ಲ ; ನೆರೆ ಸ।
ದ್ಭಾವವೇ ಒಡಲಾಗಿ, ನಿರ್ವಾಸನೆಯೆ ನೆಲೆಯಾಗಿ, ॥
ಕೇವಲಾನಂದಾನುಭವವೇ। ಸಾವಧಾನದಿ ಹೊರಗೊಳಗೆ ನೆರೆ।
ತೀವಿರುವುದದ ತಿಳಿಯೆಲಾನಂದಿನಿಯೆನಿಪ ಭೂಮಿ ॥ ೩೪ ॥

---

೩೦. ಪಂಚಕ್ಲೇಶಗಳು—೧ ಅ. ೨೬ ಪ. ವನ್ನು ನೋಡಿ. ಸೂಸದೆ—ಹೊರಗೆ ಹರಿದಾಡುವದಕ್ಕೆ ಹೋಗದೆ. ಸಕಲ—ಎಲ್ಲಾ ಜಗತ್ತೂ.

೩೨. ಆನಂದಪದದೊಳು ಪುದಿದು— ಆನಂದಸ್ವರೂಪದಲ್ಲಿ ವ್ಯಾಪಿಸಿ, ಈ ಮಾತು ಆನಂದಿನಿಯೆಂಬ ಐದನೆಯ ಭೂಮಿಕೆಯನ್ನು ಸೂಚಿಸುತ್ತದೆ. ಸುಪ್ತಿಯೆಂದು—ಆನಂದಿನಿಯೆಂಬ ಭೂಮಿಕೆಯಲ್ಲಿ ವಿಷಯಗಳ ಸಂಬಂಧವಿಲ್ಲವಾದ್ದರಿಂದ ಅದಕ್ಕೆ ವಿಷಯಗಳ ಸಂಬಂಧವಿಲ್ಲದ ಗಾಢನಿದ್ರೆಯ ಹೋಲಿಕೆಯನ್ನು ಹೇಳುವರು.

೩೩. ನಿರ್ಮಮತೆಯಿಂದ—ನನ್ನದೆಂಬ ದುರಭಿಮಾನವಿಲ್ಲದೆ. ಯೋಗನಿದ್ರೆ—ಮನಸ್ಸನ್ನು ಆತ್ಮನಲ್ಲಿ ಮುಳುಗಿಸಿರುವದು.

೩೪. ಸದ್ಭಾವವೇ—ಸತ್ಸ್ವರೂಪವಾದ ಬ್ರಹ್ಮನ ಸ್ವರೂಪವೇ. ನಿರ್ವಾಸನೆಯೆ ನೆಲೆಯಾಗಿ—ವಾಸನಾಕ್ಷಯವು ಕದಲದೆ ಇರಲು.

ಒಳಗೆ ಸಚ್ಚಿತ್ಸುಖಮಯಾತ್ಮನು । ಬೆಳಗಿ ಪ್ರತಿಬಿಂಬಿಸುತ ಮಿಗೆ ನಿ ।
ರ್ಮಳನಿಜಾಂತರ್ಮುಖವಿಕಾಸವಿಶುದ್ಧಬುದ್ಧಿಯಲಿ ॥
ಥಳಥಳನೆ ಹೊಳೆಹೊಳೆದು ಚಿತ್ತದ । ಬೆಳಕಿನೊಳು ಬೆರೆದಿರಲು ತಿಂಗಳ ।
ಬೆಳಕು ಪಳುಕಿನೊಳೆಸೆವವೋಲದ್ವೈತನಾಗಿಹನು　　॥ ೩೫ ॥

ಕೇಳದಾನಂದಿನಿಯೆನಿಪುದಿಂ । ತೇಳುಭೂಮಿಕೆಯೊಳಗೆ ಸಂತತ ।
ಮೇಲೆ ತುರಿಯುದ ಭೂಮಿಕೆಯೊಳಭ್ಯಾಸವೊದಗುತಿರೆ ॥
ಮೇಳವಿಸುತಾಸಂವಪದದೊಳು । ಹೇಳಲೇನುನ್ಮನ್ಯವಸ್ಥೆಯ ।
ತಾಳಿ ಭಾವಾಭಾವವಳಿದು ಸ್ವಭಾವವಾಗಿಹುದು　　॥ ೩೬ ॥

ದ್ವೈತವದ್ವೈತಂಗಳೆಂಬೀ । ಮಾತದೇನೂ ತೋರದೆಯೆ, ಚಿ ।
ಜ್ಜ್ಯೋತಿಮಾತ್ರವೆ ಆಗಿ, ಚಿತ್ರದ ದೀಪದಂದದಲಿ ॥
ಕೌತುಕವ ತೋರುತ್ತಖಂಡನಿ । ಜಾತಿಶಯಲಕ್ಷ್ಯಾರ್ಥವಾಗಿ ।
ರ್ದಾ ತುರ್ಯಪರಮಾತ್ಮಪದವಾಗಿರ್ಪನವನೆಂದ　　॥ ೩೭ ॥

ಮೂರವಸ್ಥೆಯ ಮೀರಿ, ವಿಕೃತಿಗ । ಳಾರ ನೆರೆ ಪರಿಹರಿಸಿ, ಸಚ್ಚಿ ।
ತ್ಸಾರಸುಖರೂಪಾಗಿ, ತುರ್ಯಾವಸ್ಥೆಯೆಂದೆನಿಸಿ, ॥

---

೩೫. ಪ್ರತಿಬಿಂಬಿಸುತ...ಬುದ್ಧಿಯಲಿ– ಆತ್ಮನು ಬುದ್ಧಿಯ ಉಪಾಧಿಯೊಳಗಿರುವಂತೆ ಕಾಣಲು ಅಥವಾ ಬುದ್ಧಿಯೇ ಆತ್ಮನೆಂಬಂತೆ ಕಾಣಲು. ತಿಂಗಳ ಬೆಳಕು ಪಳುಕಿನೊಳೆಸೆವವೋಲ್–ಬೆಳದಿಂಗಳು ಸ್ಫಟಿಕದ ಬೆಳಕಿನೊಡನೆ ಬೆರೆತಾಗ ಎರಡರ ಕಾಂತಿಯೂ ಒಂದಾಗಿ ತೋರಿದಂತೆ.

೩೬. ತುರಿಯ—ತುರಿಯವೆಂಬ ಮಾತಿಗೆ (ಮೂರವಸ್ಥೆಗಳ ಸಾಕ್ಷಿಯಾದ) ನಾಲ್ಕನೆಯದೆಂದರ್ಥ; ಅದು ಇಲ್ಲಿ ಆರನೆಯದಾಗಿರುವದು. ಈ ಮೆಟ್ಟಲಿನ ಸಮಾಧಿಯು ತಾನಾಗಿ ಇಳಿಯದಿದ್ದರೂ ಪೋಷಕರಿಂದ ಹೊರಮುಖಕ್ಕೆ ತರಲಾಗುವುದು. ಮೇಳವಿಸುತ—ಹೆಚ್ಚುತ್ತ. ಅಳವಡೆ—ಹೊಂದಿಕೊಂಡರೆ. ಭಾವಭಾವವಳಿದು—ಇಲ್ಲಿ ಇಂಥದ್ದುಳಿದುಕೊಂಡಿರುವದೆಂಬ ಭಾವದ ಕಲ್ಪನೆಯೂ ಇಲ್ಲಿ ಏನೂ ಉಳಿದುಕೊಂಡಿಲ್ಲವೆಂಬ ಅಭಾವದ ಕಲ್ಪನೆಯೂ ನಾಶವಾಗಿ.

೩೭. ಚಿಜ್ಜ್ಯೋತಿ—ಜ್ಞಾನದ ಹೊಳಪು. ಕೌತುಕ—ಆಶ್ಚರ್ಯ. ಅಖಂಡನಿಜಾತಿಶಯಲಕ್ಷ್ಯಾರ್ಥವು– ಅಖಂಡವೂ ನಿಜವೂ (ಶಾಶ್ವತವೂ) ಅತಿಶಯವೂ ಲಕ್ಷ್ಯಾರ್ಥವೂ ಆಗಿರುವಂಥ.

ಪಾರಮಾರ್ಥಿಕವಪ್ಪುದೇ ಕೇ । ಳಾರನೆಯ ಭೂಮಿಕೆಯೆನಿಪ್ಪುದು ; ।
ಧೀರ, ತಿಳಿ ಕೈವಲ್ಯವದ ತಾ ಸಾರಿ ಸುಖಿಯಹನು || ೩೮ ||

ಆರನೆಯದೀ ಭೂಮಿಯಳವಡೆ । ತೋರುವದು ವ್ಯವಹಾರ ಯೋಗಿಗೆ ; ।
ನೀರೆ ತೆರೆಯಾದಂತೆ ತನ್ನೊಳು ತಾನೆ ವ್ಯವಹರಿಪ ; ||
ಬೇರೆ ಮತ್ತೊಂದಿರದೆ, ಕಾರಣ । ಕಾರಿಯಗಳಳಿದುಳಿದು, ಸುಖಸಾ ।
ಕಾರಸಾಯುಜ್ಯವನು ಪಡೆದಿಹನೆಂದನಾ ಮುನಿಪ || ೩೯ ||

ಏಳನೆಯ ಭೂಮಿಕೆಯ ಕೇಳಿಲೆ । ಬಾಲ, ತುರ್ಯಾತೀತವನುಪಮ ।
ಲೀಲೆಯದು ವಾಙ್ಮನಕಗೋಚರವಾಗಿ ಚಿತ್ತೆಂದು ||
ಹೇಳಲಾಗದಚಿತ್ತೆನುತ್ತದ । ಕೇಳಲಾಗದಸತ್ತು ಸತ್ತೆಂ ।
ದಾಲಿಸುವೊಡರಿದಪ್ಪ ನಿಜಪದವುಸುರಲೆಡೆಯಿಲ್ಲ || ೪೦ ||

ಸಪ್ತಭೂಮಿಯಲಾದಿಯಹ ಭೂ । ಮಿತ್ರಿತಯವೇ ಸಾಧನಗಳೆನಿ ।
ಸುತ್ತಲಿಹವಭ್ಯಾಸನಿಷ್ಠರಿಗೆಲೆ ಮುನೀಶ್ವರನೆ ||
ಮತ್ತೆ ನಾಲ್ಕನೆಯಾದ ಭೂಮಿಕೆ । ಚಿತ್ತೆನಿಸುವದು ಕೇಳು ; ಜೀವ ।
ನ್ಮುಕ್ತಿಪರ್ಯಾಯಗಳು ಕಡೆಯಹ ಮೂರುಭೂಮಿಗಳು || ೪೧ ||

---

೩೮. ಮೂರವಸ್ಥೆ—೩ ಅ. ೮೯ ಪ. ವನ್ನು ನೋಡಿ. ವಿಕೃತಿಗಳಾರ—೩ ಅ. ೩೫ ಪ. ವನ್ನು ನೋಡಿ. ತುರ್ಯಾವಸ್ಥೆ-(ಮೂರವಸ್ಥೆಗಳ ಸಾಕ್ಷಿಯಾದ) ನಾಲ್ಕನೆಯದು.

೩೯. ವ್ಯವಹಾರ—ಆಹಾರ, ನಿದ್ರೆ ಮೊದಲಾದ ವ್ಯವಹಾರವು (ಆರನೆಯ ಭೂಮಿಕೆಯಲ್ಲಿಯೂ ತೋರುವದೆಂದರ್ಥ). ನೀರೆ ತೆರೆಯಾದಂತೆ—ಅವನು ಹೊರ ಗಣವರಿಗೆ ವಿಷಯಗಳೊಡನೆ ವ್ಯವಹರಿಸುವಂತೆ ಕಂಡರೂ ತನ್ನೊಡನೆ ತಾನೇ ವ್ಯವಹರಿಸುವನು. ಕಾರಣಕಾರಿಯಗಳಳಿದು—ಕಾರಣವಾದ ತ್ರಿಗುಣಾತ್ಮಕಮಾಯೆ ಯೂ ಕಾರ್ಯವಾದ ವಿವಿಧಜಗತ್ತೂ ತನ್ನ ಭಾಗಕ್ಕೆ ನಾಶವಾಗಿ ತಾನೊಬ್ಬನೇ ಉಳಿ ದುಕೊಂಡು ಸುಖಸಾಕಾರಸಾಯುಜ್ಯವನು— ಸುಖವೇ ರೂಪುಗೊಂಡಂಥ ಐಕ್ಯ ವೆಂಬ ಮುಕ್ತಿಯನ್ನು.

೪೦. ತುರ್ಯಾತೀತವು—ತುರ್ಯವೆಂಬ ಆರನೆಯ ಭೂಮಿಕೆಯನ್ನೂ ದಾಟಿದ್ದು. (ಚಿತ್ತೆಂದು +) ಹೇಳಲು+ಆಗದು + ಅಚಿತ್ತೆನುತ್ತ+ಅದು+ ಕೇಳಲು + ಆಗದು+ಅಸ ತ್ತು+ ಸತ್ತು+ ಎಂದು. ನಿಜಪದ— ಆತ್ಮಸ್ವರೂಪಸ್ಥಿತಿ. ಉಸುರಲೆಡೆಯಿಲ್ಲ— ಅಲ್ಲಿ ಏನನ್ನು ಹೇಳುವದಕ್ಕೂ ಅವಕಾಶವಿಲ್ಲ.

೪೧. ಭೂಮಿತ್ರಿತಯವೇ—ಸುಖೇಚ್ಛೆ, ಆತ್ಮವಿಚಾರ, ನಿಸ್ಸಂಗ ಇವುಗಳೇ ಸಾಧನಗಳು). ನಾಲ್ಕನೆಯಾದ—ವಾಸನಾಕ್ಷಯವೆಂಬುದು. ಚಿತ್ತೆನಿಸುವದು—ಜ್ಞಾನ

ತುರ್ಯಗಾಮಿನಿಯೇಳನೆಯವೆಲಿ । ಆರ್ಯ, ಕಡೆಯಾಗಿರ್ಪ ಭೂಮಿಕೆ ।
ಕಾರ್ಯಕಾರಣವಳಿದು ಕೇವಲ ನಿರ್ವಿಕಲ್ಪಕವು ; ॥
ಧೀರರದನು ವಿದೇಹಮುಕ್ತಿಯ । ಸಾರವೆಂದೇ ಹೇಳುವರು ನಿ ।
ರ್ಧಾರಿಸಲು ನಿಶ್ಚೇಷ್ಟೆವಡೆದಿಹುದಾಗಿ ದೇಹದಲಿ ॥ ೪೨ ॥

ಈ ಪರಿಯ ಭೂಮಿಕೆಗಳಿರವ ನಿ । ರೂಪಿಸುತಲಭ್ಯಾಸದನುಗುಣ ।
ರೂಪವಹ ಶ್ರವಣಾದಿಗಳ ವಿವರಣೆಯ ತಿಳಿವಂತೆ ॥
ಆ ಪರಮಪುರುಷಂಗೆ ಪೇಳಿದ । ನೀ ಪರಿಯಲಾ ವ್ಯಾಸಮುನಿಪತಿ ।
ದೀಪಿಸುವ ವೇದಾಂತಕನುಗುಣವೆನಲು ಹರುಷದಲಿ ॥ ೪೩ ॥

ತನಯ ಕೇಳ್ಳೆ ಸದ್ಗುರುವಿನಿಂ । ದನುಭವಕೆ ಸರಿಯಾಗಿ ತನ್ನೀ ।
ಮನಕೊಡಂಬಡುವಂತೆ ಶಾಸ್ತ್ರಾರ್ಥವನು ನೆರೆ ತಿಳಿದು, ॥

---

ವೆನಿಸಿಕೊಳ್ಳುವದು. ಕಡೆಯಹ ಮೂರುಭೂಮಿಗಳು— ಆನಂದಿಸಿ, ತುರ್ಯ, ತುರ್ಯಾತೀತ ಇವು.

೪೨. ತುರ್ಯಗಾಮಿ—(ಮೂರವಸ್ಥೆಗಳ ಸಾಕ್ಷಿಯಾಗಿ) ನಾಲ್ಕನೆಯದಾದ ಆತ್ಮನೊಡನೆ ಸೇರಿಹೋಗುವದು. ಈ ಮೆಟ್ಟಲಿನ ಸಮಾಧಿಯು ತನಗೆ ತಾನೂ ಇಳಿಯುವದಿಲ್ಲ ; ಹೊರಗಣವರಿಂದ ಇಳಿಸಲಾಗುವದೂ ಇಲ್ಲ. ವಿದೇಹಮುಕ್ತಿ—ದೇಹವು ಸತ್ತಮೇಲೆ ಆಗುವ ಜೀವಬ್ರಹ್ಮೈಕ್ಯ. ನಿಶ್ಚೇಷ್ಟೆವಡೆದಿಹುದಾಗಿ—(ದೇಹವು) ಆಹಾರ, ನಿದ್ರೆ ಮೊದಲಾದ ಯಾವದಕ್ಕೂ ಕ್ರಿಯೆಯನ್ನು ಮಾಡದೆ ಇರುವದರಿಂದ.

೪೩. ಶ್ರವಣಾದಿಗಳ ವಿವರಣೆ—ಶ್ರವಣಮನನನಿದಿಧ್ಯಾಸನಗಳ ವಿವರಣೆ ಇವು ವೇದಾಂತಪ್ರಕ್ರಿಯೆಗೆ ಸಮ್ಮತವಾದ ಸಾಧನಗಳು. ಶ್ರವಣದಲ್ಲಿ ಶಾಸ್ತ್ರವಾಕ್ಯವನ್ನು ಕೇಳುವದು ಪ್ರಧಾನವಾಗಿಯೂ ಮನನದಲ್ಲಿ ತನ್ನ ಯುಕ್ತಿಗಳನ್ನು ಕೂಡಿಸಿ ಸಂಶಯಗಳನ್ನು ಹೋಗಲಾಡಿಸಿಕೊಳ್ಳುವದು ಪ್ರಧಾನವಾಗಿಯೂ ನಿಧಿಧ್ಯಾಸನದಲ್ಲಿ ಅನುಭವಕ್ಕೆ ಹೊಂದಿಸಿನೋಡಿ ತಿಳಿದುಕೊಳ್ಳುವದು ಪ್ರಧಾನವಾಗಿಯೂ ಇರುವವು. ಯುಕ್ತ್ಯನುಭವಗಳ ಸಂಬಂಧವೇ ಇಲ್ಲದ ಶ್ರವಣವಿರುವದೇ ಇಲ್ಲ. ಉಳಿದವುಗಳೂ ಹಾಗೆಯೇ. ಆದ್ದರಿಂದ ಮುಂದೆ ಈ ಗ್ರಂಥಕಾರನು ಈ ಮೂರರ ಅರ್ಥವನ್ನೂ ಸಾಕ್ಷಾತ್ಕಾರದವರೆಗೂ ಮುಟ್ಟಿಸಿರುವನು. ಆ ಪರಮಪುರುಷಂಗೆ—ಆ ಪುರುಷಶ್ರೇಷ್ಠನಾದ ಶುಕನಿಗೆ. ವೇದಾಂತ—ಉಪನಿಷತ್ತು.

೪೪. ಅನುಭವಕೆ ಸರಿಯಾಗಿ...ತಿಳಿದು—ಜಗತ್ತು ಸುಳ್ಳೆಂಬುದೇ ಮುಂತಾದ ಮಾತುಗಳು ತನ್ನ ಅವಿಚಾರದಿಂದ ತೋರುವ ಅನುಭವಕ್ಕೆ ವಿರೋಧಕಂಡರೂ ವಿಚಾರದಿಂದ ತೋರುವ ಅನುಭವಕ್ಕೆ ಅನುಗುಣವಾದದ್ದೆನಿಸುವ ಹಾಗೆ ತಿಳಿದು. ಕೂಡಿದ+

ಘನತರದ ಜನ್ಮಾಂತರದ ವಾ ! ಸನೆಯ ಕೂಡಿದವಿದ್ಯೆಯುಳಿದಾ ।
ತ್ಮನ ನಿಜವ ನಿಶ್ಚಯಿಸಿ ತಿಳಿವುದೆ ಶ್ರವಣವೆನಿಸುವದು ॥ ೪೪ ॥

ತತ್ತ್ವಮಸಿವಾಕ್ಯಾರ್ಥವನು ಶಾ । ಸ್ತ್ರೋಕ್ತವಾಗಿಯೆತಿಳಿದು,ಮಾಯೊ ।
ತತ್ತ್ವಮೊದಲಾದಖಿಲವೆಲ್ಲವ ಮಿಥ್ಯೆಯೆಂದರಿದು, ॥
ಸತ್ಯಸಂವಿನ್ಮಾತ್ರವೆನಿಸುವ । ಪ್ರತ್ಯಗಾತ್ಮಪರಾತ್ಮರೈಕ್ಯಾ ।
ಪತ್ತಿಯೇ ತಾನೆಂದೆನುತ ನಿಶ್ಚಯಿಪುದೇ ಶ್ರವಣ ॥ ೪೫ ॥

ಗುರುಪದಾಂಬುಜಸೇವೆಯನು ಮನ । ದೆರಕವಾಗಿಯೆ ಮಾಡುತಿರೆ, ತ ।
ತ್ಕರುಣವಾಗಲು ತನಗೆ, ಪಾಪಚ್ಛೇದರೂಪಾದ ॥
ಪರಮಶಾಂಭವಬೋಧೆಯೆನಿಸುವ । ನಿರತಿಶಯಸಂಪೂರ್ಣದೃಷ್ಟಿಯ ।
ಧರಿಸಿ ಸಹಜಾನಂದವಾಗಿರೆ ಶ್ರವಣವೆನಿಸುವದು ॥ ೪೬ ॥

ಶ್ರವಣದಿಂ ನಿಶ್ಚಯಿಸಿ ತಾನನು । ಭವದಿ ಕಂಡರ್ಥವನು, ಮತಭೇ ।
ದವನು ಖಂಡಿಸಿ ಪ್ರಬಲಶ್ರುತಿಯುಕ್ತ್ಯನುಭವಗಳಿಂದ, ॥
ಅವಘಟಿಪ ಸಂಶಯವಿಪರ್ಯಾ । ಸವನು ಕಳೆದೀಡಾಡಿ, ತನ್ನನು ।
ಭವವ ಕೆಡಿಸದೆ ರಕ್ಷಿಸುವದೇ ಮನನವೆನಿಸುವದು ॥ ೪೭ ॥

---

ಅವಿದ್ಯೆ. ನಿಶ್ಚಯಿಸಿ ತಿಳಿವುದೆ ಶ್ರವಣ— ಇಲ್ಲಿ ಅವಿದ್ಯೆಯನ್ನು ಕಳೆದುಕೊಂಡು ನಿಶ್ಚಯಿಸುವದನ್ನು ಶ್ರವಣವೆಂದಿದೆ. ಶ್ರವಣದಿಂದ ಅವಿದ್ಯೆಯು ಹೋಗದವರಿಗೆ ಮುಂದೆ ಮನನನಿದಿಧ್ಯಾಸನಗಳ ವಿಚಾರಗಳಿವೆ.

೪೫. ಸತ್ಯಸಂವಿನ್ಮಾತ್ರವು— ನಿಜವಾದ ಜ್ಞಾನಮಾತ್ರವು (ಈ ಮಾತು ಮುಂದೆ ಇರುವ ಐಕ್ಯಾಪತ್ತಿಯೆಂಬದಕ್ಕೆ ವಿಶೇಷಣ). ಪ್ರತ್ಯಗಾತ್ಮಪರಾತ್ಮರ— ಜೀವೇಶ್ವರರ. ಐಕ್ಯಾಪತ್ತಿ–ಏಕತ್ವವು.

೪೬. ಮನದೆರಕವಾಗಿಯೆ— ಮನಃಪೂರ್ವಕವಾಗಿಯೆ (ಎರಕವೆಂದರೆ ಲೋಹದ ರಸವನ್ನೆರೆದು ಒಂದು ಮೂರ್ತಿಯನ್ನು ಮಾಡುವದು. ಹಾಗೆಯೇ ಮನಸ್ಸಿನಲ್ಲಿ ಗುರುಮೂರ್ತಿಯನ್ನು ಕಲ್ಪಿಸಿಕೊಳ್ಳಬೇಕೆಂದಾದರೂ ಅರ್ಥವನ್ನು ಮಾಡಬಹುದು)- ಪರಮಶಾಂಭವಬೋಧೆ— ಉತ್ಕೃಷ್ಟವಾದ ಶಿವಜ್ಞಾನ ಅಥವಾ ತತ್ತ್ವಜ್ಞಾನ.

೪೭. ತಾನನುಭವದಿ ಕಂಡರ್ಥವನು— ಶಾಸ್ತ್ರವು ತನಗೆ ನೆನಪುಗೊಟ್ಟಂಥ ಅನುಭವಗಳ ಸ್ವರೂಪವನ್ನು. ಅವಘಟಿಪ–ಬಂದೊದಗುವ. ಸಂಶಯವಿಪರ್ಯಾಸವನು— ಹಾಗೋ ಹೀಗೊ ಎಂಬ ಸಂಶಯವನ್ನೂ ಒಂದನ್ನಿನ್ನೊಂದಾಗಿ ನಿಶ್ಚಯಿಸುವ ವಿರೋಧ.

ತನಯ ಕೇಳ್ಳೈ ಸಕಲವಹ ವಾ । ಸನೆಯಳಿದು, ಮೃಗತೃಷ್ಣೆಯಂದದಿ ।
ತನಗೆ ತೋರುವ ತೋರಿಕೆಯ ಪುಸಿಯೆಂದು ನಿಶ್ಚಯಿಸಿ, ॥
ಘನಗುರುವಿನುಪದೇಶವನು ಚಿಂ । ತನೆಯ ಮಾಡುವ ಮನನಕಾಲದ ।
ನೆನಹು ನೌಕಾಸ್ತಂಭಸಂಸ್ಥಿತಕಾಕನಂತಿಹುದು ॥ ೪೮ ॥

ಆಸನವನಳವಡಿಸಿ, ಪ್ರಾಣವ ಸೂಸದಂದದಿ ನಿಲಿಸಿ, ದೃಷ್ಟಿಯ ।
ನಾಸಿಕಾಗ್ರದೊಳಿಟ್ಟು, ತನುಶಿರಗಳನು ರುಜುಮಾಡಿ, ॥
ಲೇಸೆನಿಸುವೇಕಾಂತದೆಡೆಯೊಳು । ದೇಶಿಕೋತ್ತಮನಿಂದ ತನಗುಪ ।
ದೇಶವಾದುದ ಮರಳಿಯಾವರ್ತಿಸುವದೇ ಮನನ ॥ ೪೯ ॥

---

ಬುದ್ಧಿಯನ್ನೂ. ಈಡಾಡಿ--ದೂರದೂರಕ್ಕೆ ಚೆಲ್ಲಿ. ತನ್ನನುಭವವ ಕೆಡಿಸದೆ-ಗುರುವಿನಿಂದಲೂ ಶಾಸ್ತ್ರದಿಂದಲೂ ತಿಳಿದ ಅರ್ಥಕ್ಕೆ ಭಿನ್ನವಾಗದಂತೆ ತನಗೆ ಮರೆಯಾಗಿರುವ ತನ್ನ ಅನುಭವಗಳನ್ನು ವ್ಯರ್ಥಮಾಡಿಕೊಳ್ಳದೆ. (ನಮ್ಮ ಕೆಲವನುಭವಗಳು ನಮಗೆ ಮರೆಯಾಗಿರುವವು. ಶಾಸ್ತ್ರದಿಂದ ಅವುಗಳ ನೆನಪನ್ನು ತಂದುಕೊಂಡು ಅವನ್ನು ಆತ್ಮವಿಚಾರಕ್ಕೆ ಉಪಯೋಗ ಮಾಡಿಕೊಂಡರೆ ಅವುಗಳ ಸದುಪಯೋಗವಾದಂತಾಯಿತು. ಇಲ್ಲದಿದ್ದರೆ ಅವುಗಳನ್ನು ಹಾಳುಮಾಡಿಕೊಂಡಂತಾಗುವದು.)

೪೮. ಸಕಲವಹ ವಾಸನೆ—ಹಿಂದಿನ ೨೯ ನೇ ಪದ್ಯವನ್ನು ನೋಡಿ. ನೌಕಾಸ್ತಂಭಸಂಸ್ಥಿತಕಾಕನಂತೆ-ಹಡಗಿನ ಧ್ವಜಸ್ತಂಭದ ಮೇಲಿರುವ ಕಾಗೆಯಂತೆ. (ಹಡಗಿನ ಮೇಲೆ ಕುಳಿತ ಕಾಗೆಯು ಸ್ವಭಾವವಾದ ಚಪಲದಿಂದ ಅತ್ತಿತ್ತ ಹಾರಿಹೋದರೂ ಎಲ್ಲಿಯೂ ತನಗೆ ಸುರಕ್ಷಿತವಾದ ಸ್ಥಾನವನ್ನು ಕಾಣದೆ ಮತ್ತೆ ಅಲ್ಲಿಗೇ ಬಂದು ಕುಳಿತುಕೊಳ್ಳುವಂತೆ ಧ್ಯಾನಮಾಡುವಾಗ ಮನಸ್ಸು ಅತ್ತಿತ್ತ ಚಲಿಸಿದರೂ ಹೊರಗಣ ವಿಷಯಗಳು ಸುರಕ್ಷಿತವಲ್ಲವೆಂಬುದನ್ನು ವಿಚಾರಕ್ಕೆ ತಂದುಕೊಂಡು ಮತ್ತೆ ಹಿಂದಿರುಗಿ ಆತ್ಮಸ್ವರೂಪದಲ್ಲಿಯೇ ನಿಲ್ಲುವದು).

೪೯. ಆಸನವನಳವಡಿಸಿ—ಈ ಮೊದಲಾದ ಧ್ಯಾನಲಕ್ಷಣಗಳ ವಿಷಯದಲ್ಲಿ ಇದರಂತೆ ಭಗವದ್ಗೀತೆಯಲ್ಲಿರುವದೇನೆಂದರೆ-“ಯೋಗೀ ಯುಞ್ಜೀತ ಸತತಮಾತ್ಮಾನಂ ರಹಸಿ ಸ್ಥಿತಃ । ಏಕಾಕೀ ಯತಚಿತ್ತಾತ್ಮಾ ನಿರಾಶೀರಪರಿಗ್ರಹಃ । ಶುಚೌ ದೇಶೇ ಪ್ರತಿಷ್ಠಾಪ್ಯ ಸ್ಥಿರಮಾಸನಮಾತ್ಮನಃ । ತತ್ರೈಕಾಗ್ರಂ ಮನಃ ಕೃತ್ವಾ ಯತಚಿತ್ತೇಂದ್ರಿಯಕ್ರಿಯಃ ॥ ಸಮಂ ಕಾಯಶಿರೋಗ್ರೀವಂ ಧಾರಯನ್ನಚಲಂ ಸ್ಥಿರಃ । ಸಂಪ್ರೇಕ್ಷ್ಯ ನಾಸಿಕಾಗ್ರಂ ಸ್ವಂ ದಿಶಶ್ಚಾನವಲೋಕಯನ್ ।” ಸೂಸದಂದದಿ- ಹೊರಬೀಳದಂತೆ. ದೃಷ್ಟಿಯ ನಾಸಿಕಾಗ್ರದೊಳಿಟ್ಟು-ದೃಷ್ಟಿಯನ್ನು ಮೂಗಿನ ಮೇಲೆ ಇಟ್ಟು (ಈ ಮಾತಿಗೆ

ಮನನದಭ್ಯಾಸವನು ಬಿಡದಂ । ತನವರತ ಮಾಡುತ್ತ, ನೆರೆ ತ ।
ನ್ನನುಭವವು ದೃಢವಾಗಿ ನಿಲುವಂದದಲಿ ನಿಶ್ಚಯಿಸೆ, ॥
ಜನನಹೇತುವೆನಿಪ್ಪ ಕರ್ಮಗ । ಳನಿತು ನಾಶವನೈದುವವು ತಿಳಿ ; ।
ಮನದ ಸಂಶಯ ಹೋಗಿ ಹೃದಯಗ್ರಂಥಿಯಳಿದಿಹುದು ॥ ೫೦ ॥

ದಿನದಿನಕೆ ಮನನದಲಿ ಮನಸಿನ । ನೆನಹು ತನುಧರ್ಮಗಳ ಮರೆದಾ ।
ತ್ಮನಲಿ ತಾನೆಂದೆಂಬ ಭಾವಜ್ಞಾನ ದೃಢವಾಗಿ, ॥
ಘನಪರಂಜ್ಯೋತಿಸ್ವರೂಪನೆ । ತನಗೆ ತಾನಾಗಿರ್ದವಸ್ಥೆಯ ।
ನನುಗಮಿಸೆ ನಿದಿಧ್ಯಾಸವೆನಿಪುದು ರಾಜಯೋಗದಲಿ ॥ ೫೧ ॥

---

ಮೂಗಿನ ತುದಿಯನ್ನು ನೋಡುತ್ತಿರಬೇಕೆಂದರ್ಥವನ್ನು ಮಾಡಬಾರದು. ಏಕೆಂದರೆ ಮೂಗಿನ ತುದಿಯನ್ನು ನೋಡುವದರಿಂದ ಯಾವ ಪುರುಷಾರ್ಥವೂ ಇಲ್ಲ. ದೃಷ್ಟಿ ಯೊಡನೆ ಮನಸ್ಸು ಹೊರಗೆ ಹೋಗಬಹುದಾದ್ದರಿಂದ ಅದನ್ನು ಅತ್ತಿತ್ತ ಹರಿಯ ಬಿಡಬಾರದೆಂಬುದೇ ತಾತ್ಪರ್ಯ). ತನುಶಿರಗಳನು ರುಜುಮಾಡಿ–ಶರೀರವನ್ನೂ ಶಿರ ಸ್ಸನ್ನೂ ನೆಟ್ಟಗಿಟ್ಟುಕೊಳ್ಳದಿದ್ದರೆ ಬೆನ್ನುಹುರಿಯ ನಡುವೆ ನೆಟ್ಟಗೆ ಹೋಗಿರುವ ಸುಷು ಮ್ನೆಯೆಂಬ ನಾಡಿಗೆ ನಡುವೆ ತಡೆಯಾಗುವದರಿಂದ ಮನಸ್ಸು ತನ್ನ ಉದ್ದೇಶಕ್ಕೆ ನೆರ ವಾಗಲಾರದೆಂದು ಸ್ವಾಮಿ ವಿವೇಕಾನಂದರು ತಮ್ಮ ರಾಜಯೋಗದಲ್ಲಿ ಹೇಳಿದ್ದಾರೆ. ಏಕಾಂತದೆಡೆಯೊಳು–ಈ ಮಾತನ್ನು ಮುಂದೆ ಇರುವ 'ಆವರ್ತಿಸುವದು' ಎಂಬ ಕ್ರಿಯೆಗೆ ಅನ್ವಯಿಸಿಕೊಳ್ಳಬೇಕು. ಆವರ್ತಿಸುವದು–ಮತ್ತೆ ಮತ್ತೆ ಮನಸ್ಸಿಗೆ ತಂದು ಕೊಳ್ಳುವದು. ಇವೆಲ್ಲಾ ನಿಜವಾಗಿ ನಿದಿಧ್ಯಾಸನಕ್ಕೆ ಸೇರಿದ ಮಾತುಗಳಾದರೂ ಮನ ನವು ಮನಸ್ಸನ್ನು ನಿದಿಧ್ಯಾಸನಕ್ಕೊಯ್ಯು ಬಿಡಬೇಕೆಂಬ ದೃಷ್ಟಿಯಿಂದ ಇವುಗಳನ್ನು ಮನನದ ಲಕ್ಷಣದಲ್ಲಿ ಸೇರಿಸಿದ್ದಾಗಿದೆ.

೫೦. ತನ್ನನುಭವವು—ಶಾಸ್ತ್ರವು ತನಗೆ ನೆನಪುಗೊಟ್ಟಂಥ ತನ್ನ ಅನುಭವವು ಹೃದಯಗ್ರಂಥಿ–ಅವಿದ್ಯೆಯಿಂದ ಮನಸ್ಸಿನಲ್ಲಿ ಹುಟ್ಟಿದ ಬಯಕೆ.

೫೧. ಅನುಗಮಿಸೆ—ಪಡೆಯಲಾಗಿ. ರಾಜಯೋಗದಲಿ–ವಿಚಾರದಿಂದ ದೃಢ ವಾದ ಈ ನಿದಿಧ್ಯಾಸನವು ರಾಜಯೋಗದ್ದು. (ಪಾತಂಜಲಯೋಗಶಾಸ್ತ್ರದಂತೆ ಪ್ರತ್ಯಾ ಹಾರಾದಿಗಳಿಂದ ಮನಸ್ಸು ಅಂತರ್ಮುಖವಾಗಿ ಏಕಾಕಾರವಾಗಿ ನಿಲ್ಲುವ ನಿದಿಧ್ಯಾಸನವು ಹಠಯೋಗದ್ದೆಂದು ಜ್ಞಾನಿಗಳ ಅಭಿಪ್ರಾಯ. ಜ್ಞಾನಿಗಳಿಗೆ ಮನಸ್ಸು ಬಹಿರ್ಮುಖವಾ ಗಿದ್ದರೂ ಅವರಿಗೆ ಸರ್ವವೂ ಬ್ರಹ್ಮವೆಂಬ ದೃಢಜ್ಞಾನವಿರುವದರಿಂದ ಅದೇ ನಿದಿಧ್ಯಾ ಸನವೆನಿಸಿಕೊಳುವದು).

ಬ್ರಹ್ಮಮಯವಾಗಿರ್ಪವಸ್ಥಾ । ಧರ್ಮವು ನಿದಿಧ್ಯಾಸವಪ್ಪುದು ; ।
ಬ್ರಹ್ಮಸಾಕ್ಷಾತ್ಕರಿಸೆ ಬುದ್ಧಿ ಸಮಾಧಿಯೆನಿಸುವದು ; ॥
ಹಮ್ಮಿನಿಂ ಪ್ರಾರಬ್ಧಕರ್ಮದ । ಬಿಮ್ಮು ತೀರಲು ಸಂಪಗೆಯನಳಿ ।
ನೆಮ್ಮಿದಂತೆ ವಿದೇಹಕೈವಲ್ಯದಲಿ ಸುಖಿಯಹನು ॥ ೫೨ ॥

ಶ್ರವಣದಿಂದಜ್ಞಾನ ಕೆಡಲಂ । ತವಿರಳಪರಂಜ್ಯೋತಿ ಮನನದಿ ।
ಸವನಿಸಲು ದೃಢವಾಗಿ, ನಿಶ್ಚಲವಾದ ನಿಜಪದವು ॥
ಧ್ರುವಪದವೆನಿಪ್ಪುದದು ನಿದಿಧ್ಯಾ । ಸವದು ಜೀವನ್ಮುಕ್ತಿ ನಿನಗಂ ।
ತವುಗಳಿಂದಲಿ ದೊರಕುವದು ಶುಕಯೋಗಿ ಕೇಳೆಂದ ॥ ೫೩ ॥

ನಿತ್ಯವಧ್ಯಾತ್ಮದ ವಿಚಾರದಿ । ಚಿತ್ತವಂತರ್ಮುಖವದಾಗಲು, ।
ಚಿತ್ತಿನನುಸಂಧಾನದಪರೋಕ್ಷಾನುಭವದಿಂದ ॥
ಸತ್ಯ ಸಹಜಾನಂದ ಪರತರ । ವಸ್ತು ಸಾಕ್ಷಾತ್ಕರಿಸಿ, ಬುದ್ಧಿಯ ।
ವೃತ್ತಿಯೊಡನೇಕತ್ವವಾಗೆ ಸಮಾಧಿಯೆನಿಸುವದು ॥ ೫೪ ॥

---

೫೨. ಬ್ರಹ್ಮಮಯವಾಗಿರ್ಪ—ಭಾವನೆಯಿಂದ ಬ್ರಹ್ಮವನ್ನು ಅನುಸಂಧಾನ ಮಾಡುತ್ತಿರುವಂಥ (ಭಾವನೆಯಿಂದ ಅನುಸಂಧಾನಮಾಡುವದು ನಿದಿಧ್ಯಾಸನವು ; ಸಾಕ್ಷಾತ್ಕಾರವಾದರೆ ಅದೇ ಸಮಾಧಿಯೆನಿಸುವದು). ಬಿಮ್ಮು—ಬಿಗಿ. ಸಂಪಗೆಯನಳಿ ನೆಮ್ಮಿದಂತೆ-ಭ್ರಮರವು ಸಂಪಗೆಯ ಹೂವನ್ನು ಆಶ್ರಯಿಸಿದ ಹಾಗೆ (ಸಂಪಗೆಯ ಹೂವಿಗೆ ಮುತ್ತಿದ ಭ್ರಮರವು ತನಗರಿವಿಲ್ಲವಂತೆ ತನ್ನ ದೇಹವನ್ನು ಕಳೆದುಕೊಂಡು ಆ ಸುವಾಸನೆಯಲ್ಲಿ ಒಂದಾಗಿ ಹೋಗಿಬಿಡುವಂತೆ).

೫೩. ಶ್ರವಣದಿಂದಜ್ಞಾನ ಕೆಡಲು—ಶ್ರವಣದಿಂದಲೇ ಅಜ್ಞಾನವು ಹೋದ ಮೇಲೆ ಇನ್ನು ಮನನನಿದಿಧ್ಯಾಸನಗಳೇಕೆ ? ಆದ್ದರಿಂದ ಇಲ್ಲಿ ಅಜ್ಞಾನವೆಂಬ ಶಬ್ದಕ್ಕೆ ಸಂಪೂರ್ಣವಾಗಿ ಅಕ್ಷರಾರ್ಥವನ್ನು ಮಾಡಿಕೊಳ್ಳಬಾರದು. ಅದರ ಮುಡಿಕೆಯು ಕಡಿಮೆಯಾಯಿತೆಂದಿಷ್ಟೇ ಮಾಡಿಕೊಳ್ಳಬೇಕು. ಏಕೆಂಪರೆ ಇದು ಸಾಧನದ ಪ್ರಕರಣ. ಶ್ರವಣವಾದ ಮೇಲೆ ಮನನನಿದಿಧ್ಯಾಸನಗಳ ಮೆಟ್ಟಲುಗಳನ್ನೇರುವ ವಿಚಾರವೂ ಇಲ್ಲಿ ಬೇಕು. ಯಾವ ಮೆಟ್ಟಲೂ ಇಲ್ಲದಂಥ ವಿಚಾರಪ್ರಕರಣವು ಮುಂದಿನ ಅಧ್ಯಾಯದಲ್ಲಿರುವದು. ಸವನಿಸಲು—ದೊರೆಯಲು. ಧ್ರುವಪದವೆನಿಪ್ಪುದು—ಶಾಶ್ವತವಾದ ಪದವಿಯೆನಿಸಿಕೊಳ್ಳುವದು.

೫೪. ಚಿತ್ತಿನ—ಚಿದ್ರೂಪವಾದ ಆತ್ಮನ.

ಧ್ಯಾನನಿಶ್ಚಲವೇ ಸಮಾಧಿಯ । ದೇ ನಿದಾನಿಸಲಾರು ಭೇದವು ।
ಮಾನನಿಧಿ ಸವಿಕಲ್ಪಕವು ತಿಳಿ ನಿರ್ವಿಕಲ್ಪಕವು ॥
ಧ್ಯಾನಿಸಲು ಸವಿಕಲ್ಪಕವೆ ದೃ । ಶ್ಯಾನುವಿದ್ಧವದೇ ಮಗುಳೆ ಶ ।
ಬ್ದಾನುವಿದ್ಧವಿವೆರಡು ಬಾಹ್ಯಾಭ್ಯಂತರಗಳಿಂದ ॥ ೫೫ ॥

ಒಳಗೆ ಕರಣಂಗಳನು ಕುರುಹಿ । ಟ್ಟಳವಡಲು ದೃಶ್ಯತ್ವದಿಂ, ತಾ
ತಿಳಿಯುತವನೊಂದೊಂದನಿದಿರಿಟ್ಟರಿದು, ತಾನದಕೆ ॥
ತಳೆದು ಸಾಕ್ಷಿತ್ವವನು, ಬೇರಾ । ಗುಳಿವುದೇ ದೃಶ್ಯಾನುವಿದ್ಧವು ; ।
ಬಳಕೆಯ ಸಮಾಧಿಯು ಕುಮಾರನೆ ಕೇಳು ನೀನೆಂದ ॥ ೫೬ ॥

ಆವನಿದ ಕೇಳುವನು, ಕಾಣುವ । ನಾವನಾಸ್ವಾದಿಸುವ, ಗಂಧವ ।
ನಾವನಾಘ್ರಾಣಿಸುವ, ಶೀತೋಷ್ಣಗಳನರುಹಿಸುವ, ॥

---

೫೫. ನಿದಾನಿಸಲು—ವಿಚಾರಮಾಡಿ ನೋಡಿದರೆ. ಆರುಭೇದವು—ಅದರ ವಿವರವೆಂತೆಂದರೆ :—




೫೬. ಕುರುಹಿಟ್ಟು—ಗುರ್ತಿಸಿ. ಅಳವಡಲು—ಅವು ದೃಶ್ಯತ್ವದಿಂದಳವಡಲು ಎಂದರ್ಥ. ಒಂದೊಂದನಿದಿರಿಟ್ಟು+ಅರಿದು—ಇದು ನೋಡುವ ಕಣ್ಣೆಂದು ಮುಂತಾಗಿ ಇಂದ್ರಿಯಗಳನ್ನು ತನ್ನಿದಿರಿನವುಗಳ ಹಾಗೆ ಮಾಡಿಕೊಂಡು. ದೃಶ್ಯಾನುವಿದ್ಧವು—ಇಲ್ಲಿ ದೃಶ್ಯಗಳಾದ ಕರಣಗಳೆಲ್ಲ ಒಳಗಿನವುಗಳಾದ್ದರಿಂದ ಇದು ಅಭ್ಯಂತರದೃಶ್ಯಾನುವಿದ್ಧವು ಬಳಕೆಯ ಸಮಾಧಿಯು—ರೂಢಿಯಲ್ಲಿ ಜನರು ಇದನ್ನೇ ಸಮಾಧಿಯೆನ್ನುವರೆಂದರ್ಥ.

೫೭. ಈ ವಿಷಯಗಳ....ಭಾವಿಸಲು—ಕೇಳುವಿಕೆ, ಕಾಣುವಿಕೆ ಮೊದಲಾದವುಗಳಿಗೆಲ್ಲ ಶಕ್ತಿಯನ್ನು ಕೊಡುವ ವಸ್ತು ಬೇರೆ ಇರಬೇಕೆಂದು ಇವುಗಳ ಸಹಾಯದಿಂದ ಅದನ್ನು ನಿಲುಕಿಸಿಕೊಂಡರೆ: ಹೀಗೆ ಇಂದ್ರಿಯಗಳ ಪ್ರೇರಕನು ಆತ್ಮನೆಂಬ

ಆ ವಿಭುವೆ ತಾನೆನ್ನುತಲಿ ತಾ । ನೀ ವಿಷಯಗಳ ಕುರಿತು ಕುರುಹನು ।
ಭಾವಿಸಲು ದೃಶ್ಯಾನುವಿದ್ಧವು ಮಗನೆ ಕೇಳೆಂದ || ೫೭ ||

ಮನಕೆ, ವಚನಕೆ, ಕಣ್ಣಗೋಚರ । ನೆನಿಸುವಾತ್ಮನನಾವ ಪರಿಯಲಿ ।
ನೆನೆಯಬಹುದೆಂದೆನಲು ಕೇಳು ತಟಸ್ಥಲಕ್ಷಣವ ; ||
ಅನುವಿನಿಂ ಶಾಖಾಗ್ರದಲಿ ಚಂ । ದ್ರನನು ಸಾಧಿಸುವಂತೆ ಕರಣಗ ।
ಳನಿತುವನು ಕುರುಹಿಟ್ಟರಿಯೆ ದೃಶ್ಯಾನುವಿದ್ಧವದು || ೫೮ ||

ಹಲವು ಛಿದ್ರದ ಘಟದೊಳಗೆ ಹೊಳೆ । ಹೊಳೆವ ದೀಪಜ್ವಾಲೆಯಂದದೊ ।
ಳೊಳಹೊರಗೆ ಬೆಳಗುತಲಿ ಕರಣದ್ವಾರದಿಂದಾವ, ||
ತಿಳಿಯುತಿಹನೋ ಆತ ತಾನೆಂ । ದೊಳಗೆ ತನ್ನನು ಕಂಡು ಮನನದೊ ।
ಳೊಲಿದು ಸೋಽಹಮ್ಮೆನುತಲಿರೆ ಶಬ್ದಾನುವಿದ್ಧವದು || ೫೯ ||

ಬ್ರಹ್ಮ ತೊಡಗಿ ತೃಣಾಂತವಾಗಿಯು । ಬ್ರಹ್ಮವೇ ಮಣಿಗಣದ ಸೂತ್ರದ ।
ಧರ್ಮದಲನುಸ್ಯೂತಚೈತನ್ಯಸ್ವರೂಪದಲಿ ||

---

ರ್ಥದಲ್ಲಿ "ಕೇನೇಷಿತಂ ಪತತಿ ಪ್ರೇಷಿತಂ ಮನಃ ಕೇನ ಪ್ರಾಣಃ ಪ್ರಥಮಃ ಪ್ರೈತಿ ಯುಕ್ತಃ । ಕೇನೇಷಿತಾಂ ವಾಚಮಿಮಾಂ ವದಂತಿ ಚಕ್ಷುಃ ಶ್ರೋತ್ರಂ ಕ ಉ ದೇವೋ ಯುನಕ್ತಿ" ಈ ಕೇನೋಪನಿಷದ್ವಿಚಾರವಿರುವದು.

೫೮. ತಟಸ್ಥಲಕ್ಷಣ—ಕೊಂಬೆಯ ತುದಿಯ ಮೂಲಕವಾಗಿ ಚಂದ್ರನನ್ನು ತೋರಿ ಸುವಂತೆ ಬೇರೆ ಸಹಾಯದಿಂದ ತೋರಿಸಿ ಹೇಳುವದು.

೫೯. ಹಲವು ಛಿದ್ರದ...ದೀಪಜ್ವಾಲೆಯಂದದೊಳು—ಇದೇ ಅಭಿಪ್ರಾಯವನ್ನೆ ಶ್ರೀ ಶಂಕರಭಗವತ್ಪಾದರು ದಕ್ಷಿಣಾಮೂರ್ತಿಸ್ತೋತ್ರದಲ್ಲಿ ಹೇಳಿರುವದೇನೆಂದರೆ:— "ನಾನಾಛಿದ್ರಘಟೋದರಸ್ಥಿತಮಹಾದೀಪಪ್ರಭಾಭಾಸ್ವರಂ । ಜ್ಞಾನಂ ಯಸ್ಯ ತು ಚಕ್ಷುರಾದಿಕರಣದ್ವಾರಾ ಬಹಿಃ ಸ್ಪಂದತೇ ॥ ಜಾನಾಮೀತಿ ತಮೇವ ಭಾಂತಮನುಭಾತ್ಯೇತತ್ಸಮಸ್ತಂ ಜಗ । ತ್ತಸ್ಮೈ ಶ್ರೀಗುರುಮೂರ್ತಯೇ ನಮ ಇದಂ ಶ್ರೀ ದಕ್ಷಿಣಾಮೂರ್ತಯೇ ॥" ಸೋಽಹಮ್ಮೆನುತಲಿರೆ—ಅವನೇ ನಾನೆಂದುಕೊಳ್ಳುತ್ತಿದ್ದರೆ. ಶಬ್ದಾನುವಿದ್ಧವದು—ಮನಸ್ಸಿನಲ್ಲಿಯೇ ಸೋಽಹಮೆನುತ್ತಲಿರುವದರಿಂದ ಇದು ಆಭ್ಯಂತರ ಶಬ್ದಾನುವಿದ್ಧವು.

೬೦. ಬ್ರಹ್ಮ—ಚತುರ್ಮುಖಬ್ರಹ್ಮ. ತೊಡಗಿ—ಮೊದಲುಮಾಡಿಕೊಂಡು. ಬ್ರಹ್ಮವೇ—ಪರಬ್ರಹ್ಮವೇ. ಅನುಸ್ಯೂತ—ಎಲ್ಲೆಲ್ಲಿಯೂ ತೂರಿಕೊಂಡಿರುವ. ಶಬ್ದಾನುವಿದ್ಧವು—

ನೆಮ್ಮಿಕೊಂಡಿಹುದೆಂದದನು ಸೋ । ಹಮ್ಮೆನುತಲನವರತ ನೆನೆಯುವ ।
ಧರ್ಮವೇ ಶಬ್ದಾನುವಿದ್ಧವು ಮಗನೆ ಕೇಳಿಂದ ॥ ೬೦ ॥

ಕನಸಿನಂದದಿ ತೋರ್ಪ ಜಗವಿದು। ಮನದ ಭ್ರಮೆಯೆಂದರಿದು,ಕೇಳಾ।
ಮವವನದ್ವಯವಾದ ಬ್ರಹ್ಮದೊಳೈಕ್ಯವನು ಮಾಡೆ, ॥
ನೆನಹಡಗಿ, ಬಾಹ್ಯವನು ಮರೆದಾ । ತ್ಮನಲಿ ರಮಿಸುತ್ತಿರ್ಪವಸ್ಥೆಯ ।
ನನಘ, ತಿಳಿಯೈ ನಿರ್ವಿಕಲ್ಪಸಮಾಧಿಯೆಂದದನು ॥ ೬೧ ॥

ಮಕುಟಕಟಕದ ನಾಮರೂಪಿನ । ವಿಕೃತಿಯಳಿದ ಸುವರ್ಣದಂದದಿ, ।
ವಿಕರಿಸಿದ ತೆರೆನೊರೆಗಳಡಗಿದ ಶರಧಿಯಂದದಲಿ, ॥
ಸಕಲಭೇದದಿ ತೋರ್ಪ ಮಾಯಾ । ಸಕತಿಯಳಿದೇಕತ್ವನಿರುಪಾ ।
ಧಿಕ ನಿಜತ್ವವೆ ನಿರ್ವಿಕಲ್ಪಸಮಾಧಿಯೆನಿಸುವದು ॥ ೬೨ ॥

ಒಳಹೊರಗೆ ಪರಿಪೂರ್ಣದನುಭವ । ನೆಲೆಗೊಳುತಲಿರುತಿರೆ ನಿವಾತ ।
ಸ್ಥಲದ ದೀಪದವೋಲು ನಿಶ್ಚಲವಾಗಿ ತೋರುತಿಹ ॥

---

ಇಲ್ಲಿ ಬಾಯಿಂದ ಅವನೇ ನಾನೆನ್ನುವದರಿಂದ ಬಾಹ್ಯಶಬ್ದಾನುವಿದ್ಧವಾಯಿತು. (ಮುಂದಿನ ಪದ್ಯದಲ್ಲಿ ಕವಿಯು ನಿರ್ವಿಕಲ್ಪಸಮಾಧಿಯ ವರ್ಣನೆಗೆ ಹೊರಟಿರುವದರಿಂದ ಬಾಹ್ಯದೃಶ್ಯಾನುವಿದ್ಧಸಮಾಧಿಯ ವರ್ಣನೆಯು ಉಳಿದಂತಾಗುವದು. ಈ ಪದ್ಯದಲ್ಲಿ ಬ್ರಹ್ಮವನ್ನು ಮೊದಲುಮಾಡಿಕೊಂಡು ಹುಲ್ಲುಕಡ್ಡಿಯವರಿಗಿನ ಬಾಹ್ಯವಿಷಯಗಳನ್ನು ಕುರುಹಿಟ್ಟು ಸೋಹಮ್ಮೆನ್ನುವದರಿಂದ ಇದೇ ಬಾಹ್ಯದೃಶ್ಯಾನುವಿದ್ಧವೂ ಆಯಿತೆಂದು ಸಮಾಧಾನವನ್ನು ಮಾಡಿಕೊಳ್ಳಬಹುದು. ಆದರೆ ಬಾಹ್ಯದೃಶ್ಯಾನುವಿದ್ಧವೆಂದರೆ ವಸ್ತುಗಳ ನಾಮರೂಪಗಳನ್ನು ಉಪೇಕ್ಷಿಸಿ ಅಸ್ತಿಭಾತಿಪ್ರಿಯರೂಪಗಳನ್ನು ಅಂದರೆ ಅವುಗಳ ಇರುವಿಕೆ, ತೋರುವಿಕೆ ಮತ್ತು ನಮಗೆ ಬೇಕೆನಿಸುವಿಕೆ ಇವುಗಳನ್ನು ಸ್ಮರಿಸುವದೆಂದು ಶ್ರೀ ಸರ್ಪಭೂಷಣಶಿವಯೋಗಿಗಳು ತಮ್ಮ ಕೈವಲ್ಯಕಲ್ಪವಲ್ಲರಿಯಲ್ಲಿ ಹೇಳಿರುತ್ತಾರೆ.

೬೧. ನೆನಹು—ಕಲ್ಪನೆಗಳು. ನಿರ್ವಿಕಲ್ಪಸಮಾಧಿಯೆಂದು— ಈ ಪದ್ಯದಲ್ಲಿ ತಾನೇ ಬ್ರಹ್ಮವೆಂಬ ಕಲ್ಪನೆಯ ಸೂಚನೆಯಾಗದೆ ಬ್ರಹ್ಮದಲ್ಲಿ ಮನಸ್ಸು ಐಕ್ಯವಾಗುವದೆಂದು ಸಾಮಾನ್ಯವಾಗಿ ಹೇಳಿರುವದರಿಂದ ಇದು ಬಾಹ್ಯನಿರ್ವಿಕಲ್ಪಸಮಾಧಿ.

೬೨. ಮಕುಟಕಟಕದ—ಕಿರೀಟದ ಮತ್ತು ಕಡಗದ. ವಿಕೃತಿ—ವಿಕಾರ. ವಿಕರಿಸಿದ–ವಿಕಾರವನ್ನು ಹೊಂದಿದ. ನಿರ್ವಿಕಲ್ಪಸಮಾಧಿ–ಇಲ್ಲಿ ಮನಸ್ಸೂ ಕೂಡ ಅಡಗಿ ಹೋಗಿರುವದರಿಂದ ಇದು ಅಭ್ಯಂತರನಿರ್ವಿಕಲ್ಪಸಮಾಧಿ.

ಉಳಿಮೆಯೇ ತಾನಾಗಿ ನಿಂದಾ । ನಿಲವದೇ ನಿಶ್ಚೇಷ್ಟೆವಡೆದಿರ ।
ಲಲಘುಮತಿ ತಿಳಿ ನಿರ್ವಿಕಲ್ಪಸಮಾಧಿಯೆಂದದನು　　॥ ೬೩ ॥

ಶ್ರವಣಮನನಗಳಿಂದಲೀ ಮನ । ಸವನಿಸಿಯೆ ಸಾರೂಪ್ಯವಡೆದಿರೆ ।
ಲವಣರಸದಲಿ ಬಿದ್ದ ಪತ್ರತೃಣಾಳಿಯಂದದಲಿ, ॥
ಜವದಿ ಕತಕದ ರಜವು ಕಲುಷಿತ । ಭುವನದೊಳು ಬೆರೆವಂತೆ, ಕೀಟವು
ಶಿವಶಿವಾ ! ತಾ ಭ್ರಮರವಾದಂತಾಯಿತಾತ್ಮನಲಿ　　॥ ೬೪ ॥

ಅರಣಿಗಳಲುದುಭವಿಸಿ ಪಾವಕ । ನರಣಿಗಳ ತನ್ನಂತೆ ಮಾಡುವ ।
ಪರಿಯಲೀ ಸೋಹಂಪದಾರ್ಥದಿ ಪುಟ್ಟಿದಾ ಜ್ಞಾನ ॥

---

೬೩. ನಿವಾತಸ್ಥಲದ ದೀಪ—ಗಾಳಿಯಿಲ್ಲದ ಕಡೆಯ ದೀಪ. ಇದೇ ಅಭಿಪ್ರಾಯವೇ ಭಗವದ್ಗೀತೆಯಲ್ಲಿರುವದೇನೆಂದರೆ— "ಯಥಾ ದೀಪೋ ನಿವಾತಸ್ಥೋ ನೇಂಗತೇ ಸೋಪಮಾಸ್ಮೃತಾ ॥"

೬೪. ಲವಣ....ಯಂದದಲಿ—ಉಪ್ಪುನೀರಲ್ಲಿ ಬಿದ್ದ ಎಲೆಗಳಾಗಲಿ ಕಡ್ಡಿಗಳಾಗಲಿ ಬೇಗ ಕರಗಿಹೋದರೂ ಆ ಕರಗಿದ ರೂಪದಲ್ಲಿಯೇ ತಮ್ಮ ಸ್ವರೂಪವನ್ನು ಅಷ್ಟಿಷ್ಟು ತೋರಿಸಿಕೊಳ್ಳುತ್ತ ರುಚಿಯಲ್ಲಿ ಎಲ್ಲ ಉಪ್ಪುಪ್ಪಾಗಿರುವವು. ಅದರಂತೆ ಮನಸ್ಸು ಆತ್ಮನಲ್ಲಿ ಕರಗಿಹೋದರೂ ಹೇಗೋ ತನ್ನ ಸ್ವರೂಪವನ್ನು ತೋರಿಸಿಕೊಳ್ಳುತ್ತ ಆತ್ಮಸ್ವರೂಪವಾಗಿ ಕಾಣಿಸಿಕೊಳ್ಳುವದು. ಇದು ಕನಿಷ್ಠಪಕ್ಷ. ಜವದಿ....ಬೆರೆವಂತೆ—ಚಿಲ್ಲಬೀಜವನ್ನು ತೆಯ್ದು ನೀರೊಳಗೆ ಕದಡಿದರೆ ಅದು ಒಡನೆ ನೀರಿನಲ್ಲಿ ಬೆರೆತು ನೀರನ್ನು ತಿಳಿಯಾಗಿ ಮಾಡಿ ತನ್ನ ಸ್ವರೂಪವನ್ನು ಮೇಲೆ ತೋರಿಸಿಕೊಳ್ಳದಿದ್ದರೂ ನೀರಿನಲ್ಲಿದ್ದ ಇತರ ಕಲ್ಮಷಗಳನ್ನೂ ಕೂಡಿಕೊಂಡು ತಳಕ್ಕೆಹೋಗಿ ಅಡಗಿಕೊಂಡಿರುವದು. ಅದರಂತೆ ಮನಸ್ಸು ಆತ್ಮನೊಡನೆ ಬೆರೆತು ಆತ್ಮನೇ ಮೇಲೆ ಕಾಣುವಂತೆ ಮಾಡಿ ತಾನು ಒಳಗೆ ಅಡಗಿಕೊಂಡಿರುವದು. ಇದರಿಂದ ಮುಂದೆ ಅದು ಸಮಯ ಬಂದಾಗ ಮೇಲಕ್ಕೇಳುವ ಸಂಭವವುಂಟು. ಈ ರೀತಿಯಲ್ಲಿ ಆತ್ಮನಲ್ಲಿ ಬೆರೆಯುವದು ಮಧ್ಯಮಪಕ್ಷ. ಕೀಟವು ಭ್ರಮರವಾದಂತೆ—ಕಣಜವು ಅವರೇಕಾಯ ಹುಳವನ್ನು ತನ್ನ ಗೂಡಿನೊಳಗಿಟ್ಟುಕೊಂಡು ಗಳಿಗೆಗೊಂದು ಸಲ ತನ್ನ ಮುಳ್ಳುಗಳಿಂದ ಅದನ್ನು ಕುಕ್ಕುವದಂತೆ. ಅದು ಒಮ್ಮೆ ಕುಕ್ಕಿಹೋದ ಮೇಲೆ ಆ ಹುಳು ಮನಸ್ಸಿನಲ್ಲಿ ಆ ಕಣಜವನ್ನೇ ಕನವರಿಸಿಕೊಳ್ಳುತ್ತಿರುವದಂತೆ. ಹೀಗಾಗುತ್ತ ಆಗುತ್ತ ಕೊನೆಗೆ ಆ ಹುಳು ಸತ್ತು ಕಣಜವೇ ಆಗಿ ಬಿಡುವದಂತೆ. ಇದರಂತೆ ಮನಸ್ಸು ಆತ್ಮನಲ್ಲಿ ಬೆರೆತರೆ ಮನಸ್ಸೆಂಬ ಆದರ ತುಚ್ಛವಾದ ಸ್ವರೂಪವೇ ಹೋಗಿ ಅದು ಆತ್ಮನೇ ಆಗಿ ಬಿಡುವದರಿಂದ ಇದು ಉತ್ತಮಪಕ್ಷ.

ಎರಡುತನುವೆಂದೆಂಬ ಭೇದವ | ಪರಿಹರಿಸಿ ತನ್ಮಯವದಾಗಲು |
ನಿರುಪಮಾದ್ವಯರೂಪನಾಗಿಹನೆಂದನಾ ಮುನಿಪ || ೬೫ ||

ತನಯ ಕೇಳ್ಳೈ ಪ್ರಣವವೇ ಧನು | ವನುಪಮಾತ್ಮನೆ ಬಾಣ; ಬ್ರಹ್ಮವೆ |
ಘನತರದ ಲಕ್ಷ್ಯವು ; ನಿರಂತರ ಸಾವಧಾನದಲಿ ||
ಮನನವನು ಮಾಡುತ್ತ ಶರದಂ | ತನುಸರಿಸಿ ಲಕ್ಷ್ಯದೊಳು ತಾ ತ |
ನ್ನನುಭವಾನಂದೈಕರಸಮಯವಾಗಿ ತೋರುವನು || ೬೬ ||

ತಾನು ತಾನಾಗೇನು ತೋರದೆ | ತಾನೆಯಾಗಿರೆ ನಿರ್ವಿಕಲ್ಪ ; |
ಧ್ಯಾನಧಾರಣದಿಂದ ಬುದ್ಧಿ ಸಮಾಧಿಯಾಗಿಹುದು ||
ಮಾನನಿಧಿ ಸವಿಕಲ್ಪಕವು ತಿಳಿ ; | ಭಾನು ಜಲದಲಿ ತೋರ್ಪವೋಲದು |
ಸ್ವಾನುಭವಸಂಸಿದ್ಧವಾಗಿಹುದಾಗಿ ಸೋಪಾಧಿ || ೬೭ ||

ಮನವಡಗಲೇಕತ್ವವಾಗಿಹ | ಘನಸುಖವೆ ತಿಳಿ ನಿರ್ವಿಕಲ್ಪವು ; |
ಮನಸಹಿತಲಹ ಸುಖವೆ ಸವಿಕಲ್ಪಕಸಮಾಧಿಯದು ; ||
ತನಯ ತುರ್ಯಾವಸ್ಥೆ ಬುದ್ಧಿಗೆ | ಜನಿಸುವಡೆ ಸವಿಕಲ್ಪವಾತ್ಮಗೆ |
ಮನವಳಿಯೆ ನಿರವಸ್ಥೆ ನಿರ್ಗುಣ ನಿರ್ವಿಕಲ್ಪಕವು || ೬೮ ||

---

೬೫. ಅರಣಿಗಳಲಿ—ಅರಳಿಯ ಕಟ್ಟಿಗೆಗಳಿಂದ. ಸೋಽಹಂ ಪದಾರ್ಥದಿ--ಅವನೇ ನಾನೆಂದು ಎಡೆಬಿಡದೆ ಮನನಮಾಡಿದ್ದರಿಂದ ಉಂಟಾದ ಅರ್ಥದಿಂದ. ಎರಡು ತನುವೆಂದೆಂಬ ಭೇದವ–ಜೀವ, ಈಶ್ವರ ಎಂಬೆರಡು ಶರೀರಗಳೆಂಬುದನ್ನು. ಪರಿಹರಿಸಿ—ಎರಡೆಂಬ ಭೇದವೇ ಇಲ್ಲವೆಂದು ಸಂಶಯವನ್ನು ಕಳೆದು.

೬೬. ಪ್ರಣವವೇ ಧನು—ಈ ಬಗೆಯ ಕಲ್ಪನೆಗೆ ಆಧಾರವಾಗಿ ಮುಂಡಕಶ್ರುತಿಯಲ್ಲಿರುವದೇನೆಂದರೆ “ ಪ್ರಣವೋ ಧನುಶ್ಶರೋ ಹ್ಯಾತ್ಮಾ ಬ್ರಹ್ಮ ತಲ್ಲಕ್ಷ್ಯಮುಚ್ಯತೇ | ಅಪ್ರಮತ್ತೇನ ವೇದ್ಧವ್ಯಂ ಶರವತ್ತನ್ಮಯೋ ಭವೇತ್ || ” ಅನುಪಮಾತ್ಮನೆ ಬಾಣ—ಇಲ್ಲಿ ಆತ್ಮಶಬ್ದಕ್ಕೆ ಜೀವನೆಂದರ್ಥವನ್ನು ಮಾಡಬೇಕು , ಏಕೆಂದರೆ ಅವನು ಹೋಗಿ ಬ್ರಹ್ಮದಲ್ಲಿ ಐಕ್ಯವಾಗಬೇಕಾಗಿದೆ. ಇಂಥ ಪ್ರಯತ್ನವನ್ನು ಮಾಡುವವರೇ ಕಡಿಮೆಯೆಂಬರ್ಥವನ್ನು ತೋರಿಸುವದಕ್ಕಾಗಿ ಕವಿಯು ಈ ಪ್ರಯತ್ನಮಾಡುವ ಜೀವನಿಗೆ ಅನುಪಮನೆಂಬ ವಿಶೇಷಣವನ್ನು ಕೊಟ್ಟಿದ್ದಾನೆ. ನಿರಂತರ—ಎಡೆಬಿಡದೆ. ಸಾವಧಾನದಲಿ--ಮನಸ್ಸಿಟ್ಟು.

೬೮. ತುರ್ಯಾವಸ್ಥೆ—ಆತ್ಮಸ್ಥಿತಿ. ನಿರವಸ್ಥೆ—ಯಾವ ಅವಸ್ಥೆಯೂ ಇಲ್ಲದ ಸ್ಥಿತಿ.

ಇಂತು ತನ್ನೊಳು ತಾನೆ ಆತ್ಮನ । ಚಿಂತಿಸುತ್ತಲನಾತ್ಮಗಳ ಕಳೆ ।
ದಂತರಂಗದಲುಜ್ಜಳಿಪ ಚಿಜ್ಜ್ಯೋತಿರೂಪವನು ॥
ಸಂತತವು ಸಚ್ಛಾಸ್ತ್ರಗುರು ಪೇ । ಳ್ದಂತೆ ತಿಳಿದು ಸಮಾಧಿ ನೆಲೆಗೊಳ ।
ಲಂತವಿಲ್ಲದ ಸುಖವ ಪಡೆದವ ಶಾಂತನಾಗಿಹನು ॥ ೬೯ ॥

ಇಂತು ಷಡ್ವಿಧವಹ ಸಮಾಧಿಯ । ಸಂತತಾಭ್ಯಾಸದಲಿ ಮನವೇ ।
ಕಾಂತವಾಗಿರುತಿರಲದೇನೋ ! ನೆನಹಡಗಿನಿಂದ ॥
ಅಂತದನು ಪೇಳಲ್ಕವಾಚ್ಯವು ; । ಕಂತುಹರನೇ ಬಲ್ಲ ಯೋಗಿಯ ।
ಸಂತತಸಮಾಧಿಯನದಾರಿಗು ತಿಳಿಯಲರಿದೆಂದ ॥ ೭೦ ॥

ನಿರ್ವಿಕಲ್ಪಸಮಾಧಿಸಿದ್ಧಿಯ । ನಿರ್ವಹಿಸಲೀ ನಾಲ್ಕು ಭೂಮಿಯ ।
ಸರ್ವದಾಭ್ಯಾಸವನು ಮಾಡಲು ಬೇಕದೇಕೆನಲು ॥
ದುರ್ವಿಷಯಗಳ ನೆನೆವ ಮನಸಿನ । ಗರ್ವವನು ಕೆಡಿಸುವದು ; ನಿಜಸುಖ ।
ಪರ್ವೆ ಪಸರಿಸಿ ಪರಮಪದವಾಗಿಹುದು ಕೇಳೆಂದ ॥ ೭೧ ॥

ಕೇಳು ಶುಕಯೋಗೀಂದ್ರ, ಪಶುಗಳ । ವೋಲು ವಾಗ್ವ್ಯಾಪಾರವಳಿದು,ಸು।
ಶೀಲವಹ ಮೌನದಿ, ಮನೋರಾಜ್ಯತ್ವಮಾತ್ರದಲಿ, ॥

---

೬೯. ಉಜ್ಜಳಿಪ—ಪ್ರಕಾಶಿಸುವ. ಸಚ್ಛಾಸ್ತ್ರಗುರು—ಸಚ್ಛಾಸ್ತ್ರ ಮತ್ತು ಸದ್ಗುರು (ಸಮತ್ವವನ್ನುಪದೇಶಮಾಡುವ ಶಾಸ್ತ್ರಗಳೂ ಸಾಧುಗಳೂ ಸೇವ್ಯರೆಂದು ಯೋಗವಾಸಿಷ್ಠದ "ಅನಂತಂ ಸಮತಾನಂದಂ ಪರಮಾರ್ಥಂ ವಿದುರ್ಬುಧಾಃ । ಸ ಏಭ್ಯಃ ಪ್ರಾಪ್ಯತೇ ನಿತ್ಯಂ ತೇ ಸೇವ್ಯಾಃ ಶಾಸ್ತ್ರಸಾಧವಃ ॥" ಎಂಬ ಶ್ಲೋಕವು ಹೇಳುತ್ತದೆ.

೭೦. ನೆನಹಡಗಿನಿಂದ—ಯಾವ ಕಲ್ಪನೆಯೂ ಇಲ್ಲದೆ ಹೋಗುವದರಿಂದ (ಹೇಳುವದಕ್ಕಾಗುವದಿಲ್ಲವೆಂದರ್ಥ). ಅವಾಚ್ಯವು—ಹೇಳುವದಕ್ಕಾಗುವದಿಲ್ಲ.

೭೧. ಈ ನಾಲ್ಕು ಭೂಮಿಯ—ಮುಂದೆ ಹೇಳುವ ವಾಗ್ಭೂಮಿಕೆ, ಮನೋಭೂಮಿಕೆ, ಜ್ಞಾನಭೂಮಿಕೆ ಮತ್ತು ಶಾಂತಾತ್ಮಭೂಮಿಕೆ ಎಂಬ ನಾಲ್ಕು ಸಾಧನಗಳನ್ನು. ಪರ್ವೆ—ಹಬ್ಬುವಂತೆ.

೭೨. ವಾಗ್ವ್ಯಾಪಾರವಳಿದು—ಮಾತಾಡುವದನ್ನು ಬಿಟ್ಟು. ಇಲ್ಲಿ ವಾಗಿಂದ್ರಿಯವನ್ನು ಉಪಲಕ್ಷಣವಾಗಿ ಭಾವಿಸಿ ಇಂದ್ರಿಯಗಳನ್ನೆಲ್ಲ ಬಿಗಿಹಿಡಿಯಬೇಕೆಂದು ತಿಳಿಯಬೇಕು. ಈ ಬಗೆಯ ಭೂಮಿಗಳಿಗೆ ಕಠವಲ್ಲಿಯಲ್ಲಿರುವ ಆಧಾರವೇನೆಂದರೆ—"ಯಚ್ಛೇ

ಕಾಲವನು ಕಳೆಯುತ್ತಲಿರುತಿರೆ | ಮೇಲೆ ನೆಲೆಗೊಂಡಿರ್ದವಸ್ಥೆಯ |
ಹೇಳುವರು ಮೊದಲನೆಯ ಭೂಮಿಕೆಯೆಂದು ಬಲ್ಲವರು || ೭೨ ||

ಆ ಮನೋರಾಜ್ಯತ್ವಮಾತ್ರದ | ಭೂಮಿಕೆಯಲಭ್ಯಾಸವಳವಡ |
ಲಾ ಮನೋರಾಜ್ಯವನು ಮೆಲ್ಲನೆ ಬಿಟ್ಟು ಕ್ರಮದಿಂದ ||
ನೇಮ ನೆಲೆಗೊಳೆ ತೊಟ್ಟಿಲೊಳಗಿ | ರ್ದಾ ಮಗುವಿನಂದದೊಳಗೆರಡನೆ |
ಭೂಮಿಯೆನಿಪುದು ಕೇಳಹಂಪ್ರತ್ಯಯದ ಮಾತ್ರದಲಿ || ೭೩ ||

ಕೇಳಹಂಪ್ರತ್ಯಯವನುಳಿದವ | ಮೇಲೆ ತೂಕಡಿಪವನ ತೆರದಲಿ |
ಪೇಳಲೇನದ ಸರ್ವದೊಳುದಾಸೀನನಾಗಿರಲು ||
ಹೇಳುತಿಹರಿಂತಿರ್ದವಸ್ಥೆಯ | ಕಾಲವನು ಮೂರನೆಯ ಭೂಮಿಯ |
ಶೀಲವೆಂದರಿದವರು ಶುಕಯೋಗೀಂದ್ರ ಕೇಳೆಂದ || ೭೪ ||

ಮೌನ ಮೊದಲಾಗಿರಲುಳಿದುದಾ | ಸೀನ ಕಡೆಯಾದವರಲನುಸಂ |
ಧಾನವನು ಮರೆದಾಗ ಚಿತ್ತದ ವೃತ್ತಿಯಳಿದಿರಲು ||
ಆ ನಿದಾನದವಸ್ಥೆ ನೆಲೆಗೊಳ | ಲಾ ನಿಲವದಾತ್ಮಸ್ಫುರಣಮಾ |
ತ್ರಾನುಭವನಿದ್ರಾಳುವಿನವೊಲ್ನಾಲ್ಕನೆಯ ಭೂಮಿ || ೭೫ ||

---

ದ್ವಾಙ್ಮನಸೀ ಪ್ರಾಜ್ಞಸ್ತದ್ಯಚ್ಛೇಜ್ಜ್ಞಾನ ಆತ್ಮನಿ | ಜ್ಞಾನಮಾತ್ಮನಿ ಮಹತಿ ನಿಯಚ್ಛೇತ್ತದ್ಯಚ್ಛೇಚ್ಛಾಂತ ಆತ್ಮನಿ || ". ಅವು ಯಾವವೆಂದರೆ ಒಂದನೆಯದು ಮನಸ್ಸಿನಲ್ಲಿ ವಾಕ್ ಮೊದಲಾದ ಇಂದ್ರಿಯಗಳನ್ನು ಅಡಗಿಸಿಬಿಡುವಂಥ ವಾಗ್ಭೂಮಿಕೆ. ಎರಡನೆಯದು ಆ ಮನಸ್ಸನ್ನು ನಾನೊಬ್ಬನಿದ್ದೇನೆಂಬಷ್ಟು ಮಾತ್ರದ ಸಾಮಾನ್ಯಾಹಂಕಾರಜ್ಞಾನದಲ್ಲಿ ಅಡಗಿಸಿಬಿಡುವಂಥ ಜ್ಞಾನಭೂಮಿಕೆ. ಮೂರನೆಯದು ಆ ಸಾಮಾನ್ಯಾಹಂಕಾರವನ್ನು ಮಹತ್ತಾದ ಚಿದಾನಂದಸ್ವರೂಪನಲ್ಲಿ ಅಡಗಿಸಿಬಿಡುವಂಥ ಮಹದ್ಭೂಮಿಕೆ. ನಾಲ್ಕನೆಯದು ಅಹಂಕಾರದ ವಾಸನೆಯೇ ಇಲ್ಲದೆ ಆತ್ಮಸ್ವರೂಪದಲ್ಲಿ ನೆಲೆಯಾಗಿರುವಂಥ ಶಾಂತಾತ್ಮಭೂಮಿಕೆ.

೭೫. ಮೌನ....ಕಡೆಯಾದವರಲಿ---ಮೌನಪ್ರಧಾನವಾದ ಮೊದಲನೆಯದರಿಂದ ಉದಾಸೀನತ್ವ ಪ್ರಧಾನವಾದ ಮೂರನೆಯದರವರೆಗಿನವುಗಳಲ್ಲಿ. ನಿಲವು+ಅದು-- ಆ ರೀತಿ ಏಕಪ್ರಕಾರವಾಗಿರುವಿಕೆಯು. ಆತ್ಮ....ನಿದ್ರಾಳುವಿನವೊಲ್—ಆತ್ಮಸ್ವರೂಪದ ಸ್ಫುರಣವನ್ನು ಮಾತ್ರ ಅನುಭವಿಸುತ್ತಿರುವ ನಿದ್ರಾಳುವಿನ ಹಾಗೆ. ಇದುವರೆಗೆ ಎರಡನೆಯದನ್ನು ತಿಳಿಯದೆ ಸುಖವಾಗಿದ್ದೆನೆಂದು ಎಚ್ಚರದಲ್ಲಿ ಆಗುವ ನೆನಹು ನಿದ್ರಾಳುವಿನ ಅನುಭವ.

ಆ ಸಮಾಧಿಯೊಳಿರ್ದ ಯೋಗಿಗ । ದೇಸು ದಿನವಾದೊಡೆಯುಮಗುಳಂ ।
ತಾ ಸಮಯದೊಳಗಾದೊಡೆಯು ತನ್ನಿಂದ ಪರರಿಂದ ॥
ಸೂಸುತೆಚ್ಚರದೋರದಾ ಮನ । ಕಾ ಶರೀರವ್ಯವಹರಣೆ ನಿ ।
ರ್ವಾಸನೆಯಲಿ ಜಡಾಂಧಮೂಕರ ಭಾವವಾಗಿಹುದು ॥ ೭೬ ॥

ಮನವಳಿದು, ಕರ್ತೃತ್ವಬುದ್ಧಿಯ । ನೆನಹಡಗಿ,ಸಂಸೃತಿಯ ಹೊಲಬಿನ ।
ಬಿನುಗು ತೋರದೆ, ಹೊರಗೊಳಗೆ ಸಂತತ ಸಮಾಧಿಯನು ॥
ಅನುಭವಿಸುತಿರಲವಗೆ ನಿಜಸುಖ । ವನವರತ ಬಿಡದಿರ್ಪುದಾಗಿಯೆ ।
ವಿನುತನಾತ್ಮಾರಾಮನಾಗಿಹನೆಂದನಾ ಮುನಿಪ ॥ ೭೭ ॥

ಸಗುಣ ನಿರ್ಗುಣವೆಂದು ಯೋಗದ । ಬಗೆಗಳೆರಡಾಗಿರ್ಪುವದರೊಳು ।
ಸಗುಣವೇ ಸಾಕಾರ ; ನಿರ್ಗುಣವೇ ನಿರಾಕಾರ ; ॥
ಸಗುಣದಲಿ ಸಾಲೋಕ್ಯ ಮೊದಲಾ । ದಗಣಿತದ ಮುಕ್ತಿಗಳ ಪಡೆವರು ; ।
ಮಗನೆ, ನಿರ್ಗುಣದಿಂದಲಾ ಸಾಯುಜ್ಯವಹುದೆಂದ ॥ ೭೮ ॥

ಇಹಪರದ ಭೋಗದ ವಿರಕ್ತಿಯ । ಲಿಹುದೆ ತಾಯಮ; ತತ್ತ್ವದರ್ಥದ ।
ಸಹಜದನುರಕ್ತಿಯೆ ನಿಯಮ; ಬಾಹ್ಯದೊಳುದಾಸೀನ ॥

---

೭೬. ಸೂಸುತ—(ಸಮಾಧಿಯು ಹತ್ತಿದ ಕಾಲದಲ್ಲಾಗಲಿ ಮತ್ತು ಆಮೇಲೆ ಎಷ್ಟು ದಿನಗಳ ಮೇಲಾದರೂ ಆಗಲಿ) ಬಹಿರ್ಮುಖವಾಗುತ್ತ. ಎಚ್ಚರದೋರದ+ಆ ಮನಕೆ. ಜಡಾಂಧಮೂಕರ ಭಾವವಾಗಿಹುದು—ಹೇಗೆ ಜಡರೂ ಅಂಧರೂ ಮೂಕರೂ ವಿಷಯಗಳನ್ನು ನೋಡದೆ ಮತ್ತು ತಮ್ಮ ಅಭಿಪ್ರಾಯಗಳನ್ನು ಹೇಳದೆ ವ್ಯವಹರಿಸುವರೋ ಹಾಗೆ ಜ್ಞಾನಿಗಳು ವ್ಯವಹರಿಸುವರು. (ಇಲ್ಲಿ ಜಡರೂ ಅಂಧರೂ ಮೊದಲಾದವರು ವಾಸನೆಯಿಂದ ಕೂಡಿದವರಾಗಿದ್ದು ಯೋಗ್ಯತೆ ಇಲ್ಲದ್ದರಿಂದ ಆ ರೀತಿ ವ್ಯವಹರಿಸುವರೆಂದು ತಿಳಿಯಬೇಕು). ಸಮಾಧಿಯಲ್ಲಿರುವವರು ವ್ಯವಹಾರಕ್ಕೆ ಮನಸ್ಸನ್ನು ಹಾಕುವದಿಲ್ಲ.

೭೭. ಹೊಲಬು—ವಾಸನೆ. ಬಿನುಗು—ಬಿನ್ನಾಣ. ವಿನುತನು—ಸ್ತೋತ್ರಾರ್ಹನಾದ ಅವನು.

೭೮. ಸಾಲೋಕ್ಯ....ಮುಕ್ತಿಗಳ—ಸಾಲೋಕ್ಯ, ಸಾಮೀಪ್ಯ, ಸಾರೂಪ್ಯ-ಎಂಬ ಮೂರು ಮುಕ್ತಿಗಳ.

೭೯. ಯಮ—ಯಮ, ನಿಯಮ ಮೊದಲಾದವುಗಳು ಪಾತಂಜಲಯೋಗಶಾಸ್ತ್ರದ ಮಾತುಗಳು. ಇವುಗಳಿಗೆ ಆ ಶಾಸ್ತ್ರದಲ್ಲಿ ಹೇಳಿರುವ ಅರ್ಥವನ್ನು ೨ ಅ.

ಅಹುದದೇ ಆಸನವದಿಂದ್ರಿಯ । ಗ್ರಹಣವದು ಸಂಯಮನವದ ನಿ ।
ಗ್ರಹಿಸಿ ವಶವನು ಮಾಡೆ ಪ್ರತ್ಯಾಹಾರವೆನಿಸುವದು ॥ ೭೯ ॥

ವಶವ ಮಾಡಿದ್ದ ಚಿತ್ತವಾತ್ಮನ । ವ್ಯಸನದಲ್ಲಿರೆ ಧಾರಣವು ; ಶೋ ।
ಧಿಸಿದ ನಿಜಚೈತನ್ಯ ತಾನೆಂದೆಂಬುದೇ ಧ್ಯಾನ ; ॥
ಎಸೆಯಲಾತ್ಮಧ್ಯಾನದಲಿ ಮನ । ಮಿಸುಕದೇಕಾಕಾರವಾಗಿಯೆ ।
ಸಸಿನೆ ನಿಲೆ ಸುಸಮಾಧಿಯದು ಶುಕಯೋಗಿ ಕೇಳೆಂದ ॥ ೮೦ ॥

---

೩೬ ಪ. ದಲ್ಲಿ ವಿವರಿಸಿದೆ. ಶ್ರೀ ಸ್ವಾಮಿ ವಿವೇಕಾನಂದರು ಇವುಗಳನ್ನೆಲ್ಲಾ ಸಂಗ್ರಹಿಸಿರುವ ತಮ್ಮ ಗ್ರಂಥವನ್ನು ರಾಜಯೋಗವೆಂದು ಕರೆದಿದ್ದರೂ ಶ್ರೀಮಚ್ಛಂಕರಭಗವತ್ಪಾದರು ಇವುಗಳಲ್ಲಿ ಹಠವು ಪ್ರಧಾನವಾಗಿರುವದರಿಂದ ಹಠವೆಂದು ಕರೆದು ಈ ಹಠವನ್ನು ಅಪಕ್ವಮನಸ್ಸಿನವರಿಗೆ ಬಿಟ್ಟು ಚಿತ್ತಶುದ್ಧಿಯಾದವರಿಗೆ ೧೫ ಬಗೆಗಳನ್ನು ಅಪರೋಕ್ಷಾನುಭೂತಿಯಲ್ಲಿ ಹೇಳಿ ಅವುಗಳನ್ನು ರಾಜಯೋಗವೆಂದು ಕರೆದಿದ್ದಾರೆ. ಆ ೧೫ ರಲ್ಲಿ ಯಮ ಮೊದಲಾದ ಎಂಟಂಗಗಳೂ ಇವೆ. ಈ ಅಂಗಗಳಿಗೆ ಅವರು ಹೇಳಿರುವ ಲಕ್ಷಣಗಳೇನೆಂದರೆ: ಯಮ—ಸರ್ವವೂ ಬ್ರಹ್ಮವೆಂದು ಇಂದ್ರಿಯಗಳನ್ನು ಬಿಗಿಹಿಡಿಯುವದು. ನಿಯಮ—ಒಂದೇ ಕಲ್ಪನೆಯನ್ನು ಸಾಧಿಸುವದು. ಆಸನ—ಅಖಂಡ ಬ್ರಹ್ಮಚಿಂತನೆಗೆ ಅನುಕೂಲವಾಗಿ ಕುಳಿತುಕೊಳ್ಳುವ ಸ್ಥಿತಿ. ಪ್ರಾಣಾಯಾಮ—ಎಲ್ಲವೂ ಬ್ರಹ್ಮವೆಂದು ತಿಳಿದು ವೃತ್ತಿಯನ್ನು ನಿರೋಧಿಸುವದು. ಪ್ರತ್ಯಾಹಾರ—ವಿಷಯಗಳನ್ನೆಲ್ಲ ಬ್ರಹ್ಮಸ್ವರೂಪದಿಂದ ಕಾಣುವದು. ಧಾರಣಾ—ಮನಸ್ಸು ಹೋದ ಕಡೆಯಲ್ಲೆಲ್ಲ ಬ್ರಹ್ಮವನ್ನರಿಯುವದು. ಧ್ಯಾನ—ದೇಹಾದಿಗಳ ಎಚ್ಚರವಿಲ್ಲದೆ ತಾನು ಬ್ರಹ್ಮಸ್ವರೂಪವೆಂದಿರುವದು. ಸಮಾಧಿ—ಆ ವೃತ್ತಿಯನ್ನು ಕೂಡ ಮರೆತು ಜ್ಞಾನರೂಪವಾಗುವದು. ಈ ಗ್ರಂಥಕಾರನು ಇಲ್ಲಿ ಯಮನಿಯಮಾದಿಗಳಿಗೆ ಮೇಲಿನ ಲಕ್ಷಣವನ್ನೇ ಹೇಳದಿದ್ದರೂ ಅದೇ ಬಗೆಯ ಲಕ್ಷಣಗಳನ್ನು ಹೇಳಿರುವದರಿಂದ ಇದನ್ನು ರಾಜಯೋಗವೆಂದರಿಯಬೇಕು. ಶ್ರೀಮನ್ನಿಜಗುಣಶಿವಯೋಗಿಗಳು ನಿರ್ಗುಣಾಷ್ಟಾಂಗವೆಂಬ ವಿಚಾರದ ಕೆಳಗೆ ಯಮಾದಿಗಳ ಅರ್ಥವಿವರಣೆಯನ್ನು ಈ ಗ್ರಂಥಕಾರನಂತೆಯೇ ಹೇಳಿರುವರು. ಇಂದ್ರಿಯಗ್ರಹಣ—ಇಂದ್ರಿಯಗಳನ್ನು ಬಿಗಿಹಿಡಿಯುವದು. ಸಂಯಮನ—ಪ್ರಾಣಾಯಾಮ.

೮೦. ವ್ಯಸನ—ಬಿಟ್ಟಿರಲಾರದಿರುವಿಕೆ. ಶೋಧಿಸಿದ ನಿಜಚೈತನ್ಯ—ತ್ವಂಪದ ಮತ್ತು ತತ್ಪದ-ಇವುಗಳಲ್ಲಿ ಭಾಗತ್ಯಾಗಲಕ್ಷಣೆಯಿಂದ ವಿರೋಧಾಂಶಗಳನ್ನು ಬಿಟ್ಟು ಲಕ್ಷ್ಯಾರ್ಥವಾಗಿ ಕಂಡುಕೊಂಡಂಥ ಶುದ್ಧಚೈತನ್ಯ. ಸಸಿನೆ—ನಿಶ್ಚಲವಾಗಿ.

ಮಗನೆ ಲಯ, ವಿಕ್ಷೇಪವು, ಕಷಾ । ಯಗಳು ಮೊದಲಾದಂತರಾಯಗ ।
ಳಗಣಿತಗಳಾಗಿಹವು ಯೋಗಾಭ್ಯಾಸಕಾಲದಲಿ ; ॥
ಬಗೆಯಲವಕವಕೆಲ್ಲ ಪರಿಹಾ । ರಗಳ ಹೇಳುವ ಶ್ರುತಿಪುರಾಣಾ ।
ದಿಗಳನರಿದವಕೆಲ್ಲ ಪರಿಹಾರವನು ಮಾಡುವದು ॥ ೮೧ ॥

ತನ್ನೊಳಪರೋಕ್ಷಾನುಭವಸಂ । ಪನ್ನವಾದ ಸಮಾಧ್ಯವಸ್ಥೆಯ ।
ಲನ್ಯವೇನೂ ತೋರದೇ ತಾ ತೋರುತಿರ್ಪಾಗ ॥
ಶೂನ್ಯಭಾವದ ನಿದ್ರೆ ಬರೆ ತಾ । ಮುನ್ನಿನನುಭವ ಕೆಡುವದಂತದ ।
ನಿನ್ನು ಲಯವೆಂದೆಂಬರೈ ಯೋಗಾಂತರಾಯವನು ॥ ೮೨ ॥

ಮನನವನು ಮಾಳ್ಪಾಗ ಚಿತ್ತದ । ನೆನಹು ಚಂಚಲವಾಗಿ, ಬ್ರಹ್ಮದ ।
ಲನುಭವವನುಳಿದನ್ಯವಿಷಯಾಪೇಕ್ಷೆಯಿಂದಿರ್ದು, ॥
ಎನಿತು ಪರಿಯಲಿ ಮರಳಿಚಿದೊಡದು । ತನಯ ಮರಳದೆ ತೋರ್ಪವಸ್ಥೆಯು ।
ಘನವೆನಿಪ ವಿಕ್ಷೇಪವೆನಿಸಿರ್ಪಂತರಾಯವದು ॥ ೮೩ ॥

ಭಾವಶುದ್ಧಿಯನೊಂದಿ, ಚಿತ್ತವ । ಸಾವಧಾನವ ಮಾಡಿ, ಬ್ರಹ್ಮವ ।
ಭಾವಿಸುವ ಹೊತ್ತಿನಲಿ ಬುದ್ಧಿಯ ವೃತ್ತಿ ಜಡವಾಗಿ ॥

---

೮೧. ಮೊದಲಾದ—ಈ ಮಾತಿನಿಂದ ರಸಾಸ್ವಾದವೆಂಬ ಅಂತರಾಯವನ್ನು ಗ್ರಹಿಸಬೇಕು. ಅಂತರಾಯ—ವಿಘ್ನ. ಶ್ರುತಿ—ವಿಘ್ನಗಳ ಪರಿಹಾರದ ವಿಷಯಕ್ಕೆ ಮಾಂಡೂಕ್ಯಕಾರಿಕೆ ಹೇಳುವದೇನೆಂದರೆ—“ಲಯೇ ಸಂಬೋಧಯೇಚ್ಚಿತ್ತಂ ವಿಕ್ಷಿಪ್ತಂ ಶಮಯೇತ್ಪುನಃ । ಸಕಷಾಯಂ ವಿಜಾನೀಯಾತ್ಸಮಪ್ರಾಪ್ತಂ ನ ಚಾಲಯೇತ್ । ನಾಸ್ವಾದಯೇತ್ಸುಖಂ ತತ್ರ ನಿಸ್ಸಙ್ಗ ಪ್ರಜ್ಞಯಾ ಭವೇತ್” ಎಂದರೆ ಲಯವಾದರೆ ಮನಸನ್ನು ಎಚ್ಚರಗೊಳಿಸಬೇಕು; ಹೊರಕ್ಕೆ ನುಗ್ಗಿದರೆ ಮತ್ತೆ ಸಮಾಧಾನಕ್ಕೆ ತರಬೇಕು ; ಒಳಕ್ಕೆ ಬಂದರೂ ಮನೋರಾಜ್ಯವನ್ನು ಮಾಡುತ್ತಿದ್ದರೆ ಅದನ್ನು ತಿಳಿದು ಹಿಮ್ಮೆಟ್ಟಿಸಬೇಕು; ಸಮಕ್ಕೆ ನಿಂತದ್ದನ್ನು ಕದಲಿಸಬಾರದು ; ಆ ಸಮತ್ವದ ಸುಖವನ್ನೆ ಸವಿನೋಡುತ್ತಿರಬಾರದು ; ತಿಳಿವಳಿಕೆಯಿಂದ ಆಸಕ್ತಿಯಿಲ್ಲದವನಾಗಿರಬೇಕು. ಗ್ರಂಥಕಾರನು ಈ ಪರಿಹಾರಗಳ ವಿಷಯಕ್ಕೆ ಶ್ರುತಿಯನ್ನು ನೆನಪುಗೊಟ್ಟದ್ದರೂ ತಾನು ಮಾತ್ರ ಮುಂದೆ ೮೬ ನೆ ಮತ್ತು ೮೭ ನೆ ಪದ್ಯಗಳಲ್ಲಿ ಬೇರೆ ಉಪಾಯಗಳನ್ನೇ ಹೇಳಿರುವನು.

೮೪. ಭಾವಶುದ್ಧಿಯ—ಚಿತ್ತಶುದ್ಧಿಯನ್ನು. ಸಾವಧಾನವ ಮಾಡಿ—ಸಮತ್ವಕ್ಕೆ ತಂದದು. ಅವುದನು ತೋರಿಸದೆ—ವಿಕ್ಷೇಪವೆಂಬ ದೋಷವನ್ನು ಕಳೆದುಕೊಂಡಿರುವ

ಆವುದನು ತೋರಿಸದೆ ಸ್ತಂಭೀ । ಭಾವವಾಗಿರಲಾ ಅವಸ್ಥೆಯ ।
ಭಾವಿಕರು ಹೇಳುವರು ಮಗನೆ ಕಷಾಯವೆಂದದನು || ೮೪ ||

ಶ್ರವಣಮನನಂಗಳಲಿ ಚಿತ್ತವು । ಸವನಿಸಿಯೆ ಸತ್ಯಾದ್ವಯಾನಂ ।
ದವನು ಪಡೆದಿರಲಾ ಸಮಯದಲಿ ತತ್ಸುಖಕೆ ಮೆಚ್ಚಿ ||
ಸವಿಸವಿದು ಸುಸಮಾಧಿಯಳಿದಿ । ರ್ಪವಸರವ ಬಲ್ಲವರು ಹೇಳುವ ।
ರವಗತರಸಾಸ್ವಾದವೆಂದಾ ಅಂತರಾಯವನು || ೮೫ ||

ನಿದ್ರೆಗಾದ್ಯಂತದಲಿ ಬ್ರಹ್ಮವು । ಸಿದ್ಧವಾಗಿಯೆ ತಿಳಿಯಲದರಿಂ ।
ಮಧ್ಯಕಾಲವ ಬ್ರಹ್ಮವೆಂಬುದು ಲಯಕೆ ಪರಿಹಾರ ; ||
ಬುದ್ಧಿ ತಾನಾವಾವ ವಿಷಯವ । ಹೊದ್ದಿ ಚೇಷ್ಟಿಸಲಾ ವಿಷಯವೇ ।
ಶುದ್ಧಬ್ರಹ್ಮವದೆಂದರಿಯೆ ವಿಕ್ಷೇಪಪರಿಹಾರ || ೮೬ ||

---

ದರಿಂದ ವಿಷಯಾಕಾರವಾಗುವದಂತು ಇಲ್ಲವಷ್ಟೆ ; ಒಳಮುಖವಾದರೂ ಬ್ರಹ್ಮಾಕಾರವಾಗದೆ ಇರುವದರಿಂದ ಯಾವದನ್ನೂ ತೋರಿಸದೆ ಇದ್ದ ಹಾಗಾಯಿತು.

೮೫. ರಸಾಸ್ವಾದ—ಮನಸ್ಸು ಬ್ರಹ್ಮಾಕಾರವಾಗುತ್ತಲೇ ಆ ಹೊಸ ಪರಿಸ್ಥಿತಿಯ ಆನಂದದ ರುಚಿಯನ್ನು ನೋಡುತ್ತ ಬ್ರಹ್ಮವನ್ನು ಮರೆಯುವದೇ ರಸಾಸ್ವಾದವೆಂದು ಈ ಗ್ರಂಥಕಾರನ ಅಭಿಪ್ರಾಯವಾಯಿತಷ್ಟೆ. ಈ ಹೊಸ ಪರಿಸ್ಥಿತಿಯ ಸುಖವನ್ನು ಇತರ ಸುಖದ ಜೊತೆಗೆ ಹೋಲಿಸಿ ಅದರ ಹೆಚ್ಚುಗಾರಿಕೆಯಿಂದ ಹಿಗ್ಗಿ ಏಳಬೇಕೆಂಬ ಲವಲವಿಕೆಯನ್ನು ಪಡೆಯುವದು ರಸಾಸ್ವಾದವೆಂದು ಜೀವನ್ಮುಕ್ತಿಕಾರರ ಅಭಿಪ್ರಾಯ. ರಸಾಸ್ವಾದವೆಂದರೆ ಹರಿದಾಟದ ದುಃಖವಿಲ್ಲದ್ದರಿಂದ ತೋರುವ ಸುಖಕ್ಕೆ ಮರುಳಾಗುವದೆಂದೂ ಅಥವಾ ಸವಿಕಲ್ಪಸಮಾಧಿಯು ಹೋಗಿ ನಿರ್ವಿಕಲ್ಪಸಮಾಧಿಯು ಮೈಗೂಡುವದರ ನಡುವಣ ಕಾಲದ ಆನಂದದ ಕಡೆಗೆ ಲಕ್ಷ್ಯವನ್ನು ಕೊಡುವದೆಂದೂ ವಿಚಾರಸಾಗರಕಾರರ ಅಭಿಪ್ರಾಯ.

೮೬. ಲಯಕೆ ಪರಿಹಾರ—ಈ ಪದ್ಯದ ಪೂರ್ವಾರ್ಧದಲ್ಲಿ ಹೇಳಿರುವ ಈ ಲಯದ ಪರಿಹಾರವು ವಿಚಾರದೃಷ್ಟಿಯಿಂದ ಸರಿ. ಸಾಧನದ ದೃಷ್ಟಿಯಿಂದ ಮಾಂಡೂಕ್ಯಕಾರಿಕೆಯಲ್ಲಿ "ಲಯೇ ಸಂಬೋಧಯೇಚ್ಚಿತ್ತಂ" ಎಂದಿದೆ. ಎಂದರೆ ಮನಸ್ಸು ನಿದ್ರೆಯನ್ನು ಪಡೆಯುವ ಹಾಗೆ ಕಂಡರೆ ಎಚ್ಚರಿಸಬೇಕೆಂದರ್ಥ. ವಿಕ್ಷೇಪಪರಿಹಾರ—ಈ ಪದ್ಯದ ಉತ್ತರಾರ್ಧದಲ್ಲಿ ಹೇಳಿರುವ ಈ ವಿಕ್ಷೇಪದ ಪರಿಹಾರವು ವಿಚಾರದೃಷ್ಟಿಯಿಂದ ಸರಿ. ಸಾಧನದ ದೃಷ್ಟಿಯಿಂದ ಮಾಂಡೂಕ್ಯಕಾರಿಕೆಯಲ್ಲಿ "ವಿಕ್ಷಿಪ್ತಂ ಶಮಯೇತ್ಪುನಃ" ಎಂದಿದೆ. ಎಂದರೆ ಮನಸ್ಸು ಹೊರಕ್ಕೆ ಹರಿಯುಹೋದರೆ ಅದನ್ನು ಮತ್ತೆ ತಿರುಗಿಸಿಕೊಂಡು ಬರಬೇಕೆಂದರ್ಥ.

ಸಿದ್ಧವಾಗಿದಿರಿಟ್ಟು ತೋರುವ । ಬುದ್ಧಿ ದೃಶ್ಯವಿದೆಂದು ತಿಳಿಯು ।
ಶ್ತಿದ್ಧ ಸಾಕ್ಷಿಯನೊಳಗೆ ಕಾಣೆ ಕಷಾಯಪರಿಹಾರ ; ॥
ಬುದ್ಧಿಯನು ಮೀರಿರ್ದತೀಂದ್ರಿಯ । ಶುದ್ಧಸಂವಿನ್ಮಾತ್ರವಾಗಿರು ।
ತಿರ್ದೊಡೆ ರಸಾಸ್ವಾದಕದು ಪರಿಹಾರ ಕೇಳೆಂದ ॥ ೮೭ ॥

ತನಯ ಕೇಳಾಲಸ್ಯ, ರೋಗಗ । ಳನುಗತದ ದುಃಖತ್ರಯಂಗಳು, ।
ಮನದಲುದಿಸಿದ ಸಂಶಯಪ್ರಮಾದಗಳು, ಚಿತ್ತದಲಿ ॥
ನೆನಹು ತೋರ್ಪನವಸ್ಥೆ, ತತ್ತ್ವವ । ದೆನುವುದೊಮ್ಮನವಿಷಯಚಿಂತನೆ ।
ಯನಘ, ದರುಶನಭ್ರಾಂತಿಯಶ್ರದ್ಧೆಗಳು ವಿಘ್ನಗಳು ॥ ೮೮ ॥

ಮತಿಯುತನೆ ಪ್ರತಿಭಾ,ಶ್ರವಣ,ಮೇ। ಣತಿಶಯದ ವಾರ್ತಾ, ದರುಶನಗ।
ಳತುಳವಪ್ಪಾಸ್ವಾದನವು ವೇದನೆಯುಮೆಂಬಾರು ॥

---

೮೭. ಆತ್ಮಾಕಾರವಾಗದೆ ಸ್ತಬ್ಧವಾಗಿದ್ದ ಮನಸ್ಸನ್ನು ಆತ್ಮಾಕಾರವಾಗಿ ಮಾಡುವದು ಕಷಾಯಕ್ಕೆ ಪರಿಹಾರ. ಸಮಾಧಿಯನ್ನು ಬಿಟ್ಟಿಳಿಯದಿರುವದು. ರಸಾಸ್ವಾದಕ್ಕೆ ಪರಿಹಾರ.

೮೮. ಶ್ರೀಮನ್ನಿಜಗುಣ ಶಿವಯೋಗಿಗಳು ತಮ್ಮ ಪರಮಾರ್ಥಪ್ರಕಾಶಿಕೆಯಲ್ಲಿ ಈ ವಿಘ್ನಗಳನ್ನೆಲ್ಲ ಹೇಳಿರುತ್ತಾರೆ. ಇವುಗಳ ವಿವರವೇನೆಂದರೆ:—ಆಲಸ್ಯ, ರೋಗ ದುಃಖತ್ರಯಂಗಳು (ಶರೀರದಲ್ಲಿ ಹುಟ್ಟಿದ ಆಧ್ಯಾತ್ಮಿಕ, ಇತರ ಪ್ರಾಣಿಗಳಿಂದುಂಟಾಗುವ ಆಧಿಭೌತಿಕ, ಪಂಚಭೂತಗಳಿಂದಾಗುವ ಆಧಿದೈವಿಕ), ಸಂಶಯ, ಪ್ರಮಾದ (ತಪ್ಪು), ಅನವಸ್ಥೆ (ದೃಢವಾಗಿಲ್ಲದಿರುವಿಕೆ ಅಥವಾ ಒಂದಕ್ಕೊಂದು ಕಾರಣವಾಗುತ್ತ ಕೊನೆ ಇಲ್ಲದಿರುವಿಕೆ), ಅದು ಎಂದರೆ ತನಗಿಂತ ಭಿನ್ನವಾದದ್ದು ತತ್ತ್ವವೆನ್ನುವದು, ಒಂದೇ ಮನಸ್ಸಿನಿಂದ ವಿಷಯಚಿಂತನೆ, ದರ್ಶನಭ್ರಾಂತಿ (ಭ್ರಾಂತಿದರ್ಶನ ಅಂದರೆ ಬೇರೆ ತಿಳಿಯುವದು), ಅಶ್ರದ್ಧೆ ಹೀಗೆ ೧೦ ಆಗುವವು. ಪರಮಾರ್ಥಪ್ರಕಾಶಿಕೆಯಲ್ಲಿ ತನಗಿಂತ ಭಿನ್ನವಾದದ್ದನ್ನು ತತ್ತ್ವವೆನ್ನುವ ಮಾತಿಲ್ಲ ; ಇಚ್ಛಾಭಂಗದಿಂದಾದ ಕಡಹು ಎಂಬ ಮಾತಿದೆ. ಪಾತಂಜಲಯೋಗಸೂತ್ರಗಳಲ್ಲಿಯೂ ಈ ವಿಘ್ನಗಳ ವಿಚಾರವು ಬಂದಿದೆ. "ವ್ಯಾಧಿಸ್ತ್ಯಾನ...ಅಂತರಾಯಾಃ" ಎಂಬ ಸೂತ್ರದಂತೆ ರೋಗ, ಮನಸ್ಸಿನ ಬೇಸರ, ಸಂದೇಹ, ಉತ್ಸಾಹವಿಲ್ಲದಿರುವದು, ಅಲಸಿಕೆ, ಬಯಕೆ, ಸುಳ್ಳುತಿಳಿವಳಿಕೆ, ಸಮಾಧಿಯು ದೊರೆಯದಿರುವದು, ಪಡೆದರೂ ಆ ಸ್ಥಿತಿಯಲ್ಲಿಲ್ಲದೆ ಕೆಳಗೆ ಬೀಳುವದು—ಹೀಗೆ ೯ ಇವೆ.

ಗತಿಗೆ ವಿಗಡಗಳೆನಿಸುವೀ ಪ್ರಾ । ಕೃತಗಳಾದ್ಯೈಶ್ವರ್ಯಗಳು ಕೇ ।
ಳ್ಸಿತನೆ ಬ್ರಹ್ಮಾಭ್ಯಾಸಕಾಲದಲಂತರಾಯಗಳು ॥ ೮೯ ॥

ಈ ವಿಧದೊಳಭ್ಯಾಸವನು ಬಿಡ । ಹಾವಗಲು ತಪ್ಪದಲೆ ನೆರೆ ತಾ ।
ನೋವಿ ಮಾಡುತ್ತಿರಲು ಚಂಚಲವಳಿದು ಚಿತ್ತಕ್ಕೆ ॥
ಆವ ವೃತ್ತಿಯು ಹುಟ್ಟದೆಯೆ, ಮೇ । ಣಾವ ವಾಸನೆಯಿಲ್ಲದೆಯೆ, ಸ ।
ತ್ತ್ವಾವಲಂಬನೆಯಾಗಿ ಶಾಂತಿಯ ತೋರಿ ಸುಖವಹುದು ॥ ೯೦ ॥

ಲೇಸೆನಿಸುವೀ ಭೂಮಿಕೆಗಳ । ಭ್ಯಾಸದಲಿ ಶ್ರವಣಾದಿಯಾದಿಂ ॥
ತೀ ಸಮಸ್ತಸಮಾಧಿಯಳವಡುವಂತೆ ಯೋಗವನು ।
ಪೋಷಿಸುತಲೆಲೆಮಗನೆ ಶಾಸ್ತ್ರದ । ವಾಸನೆಯ ನೆಲೆಗೊಳಿಸಿ, ಯೋಗಾ ।
ಭ್ಯಾಸ ಸಹಜಾನಂದ ಗುರುಪದವೊಂದಿ ಸುಖಿಯಾಗು ॥ ೯೧ ॥

---

೮೯. ಪ್ರತಿಭಾ—"ಪ್ರತಿಭಾದ್ವಾ ಸರ್ವಂ" ಎಂಬ ಯೋಗಸೂತ್ರದಂತೆ ಪ್ರತಿಭೆಯೆಂಬ ಶಕ್ತಿಯಿಂದ ಎಲ್ಲಾ ತಿಳಿವಳಿಕೆಯೂ ಆಗುವದು. ಶ್ರವಣ—ಇತರರಿಗೆ ಕೇಳದ್ದು ತನಗೆ ಕೇಳಬರುವದು. ವಾರ್ತಾ—ಎಲ್ಲೆಲ್ಲಿಯ ಸುದ್ದಿಯಾದರೂ ತನಗೆ ತಿಳಿಯುವದು. ದರುಶನಗಳ್—"ಮೂರ್ಧಜ್ಯೋತಿಷಿ ಸಿದ್ಧದರ್ಶನಮ್" ಎಂಬ ಯೋಗಸೂತ್ರದಂತೆ ತಲೆಯ ಮೇಲಿನಿಂದ ಹೊರಡುತ್ತಿರುವ ಬೆಳಕಿನಲ್ಲಿ ಸಿದ್ಧರನ್ನು ಕಾಣುವದು. ಇಲ್ಲಿ ಸಿದ್ಧರೆಂದರೆ ದೇವ್ಯಗಳಿಗಿಂತ ಸ್ವಲ್ಪ ಉತ್ತಮರಾದವರೆಂದೂ ಯೋಗಿಯು ತಲೆಯ ಮೇಲೆ ಮನಸ್ಸನ್ನಿಟ್ಟರೆ ಅವರು ಕಾಣುವರೆಂದೂ ಶ್ರೀ ಸ್ವಾಮಿ ವಿವೇಕಾನಂದರು ತಮ್ಮ ರಾಜಯೋಗದ ವಿವರಣೆಯಲ್ಲಿ ಹೇಳಿದ್ದಾರೆ. ಆಸ್ವಾದನೆ—ಇತರರಿಗೆ ದೊರೆಯದ ರುಚಿಯಾಗೋಣ. ವೇದನೆ—ಇತರರಿಗೆ ಅನುಭವಕ್ಕೆ ಬರದೆ ಇರುವದು ತನ್ನ ಅನುಭವಕ್ಕೆ ಬರೋಣ. ಐಶ್ವರ್ಯಗಳು-ಸಿದ್ಧಿಗಳು. ಅಂತರಾಯಗಳು—"ತೇ ಸಮಾಧಾವುಪಸರ್ಗಾ ವ್ಯುತ್ಥಾನೇ ಸಿದ್ಧಯಃ" ಎಂಬ ಯೋಗಸೂತ್ರದಂತೆ ಇವು ಸಮಾಧಿಗೆ ಅಡ್ಡಿಗಳು; ವ್ಯವಹಾರದಲ್ಲಿ ಸಿದ್ಧಿಗಳು.

೯೦. ಸತ್ತ್ವಾವಲಂಬನೆ—ಸತ್ತ್ವಗುಣವನ್ನು ಆಶ್ರಯಿಸುವದು.

೯೧. ಶಾಸ್ತ್ರದ ವಾಸನೆಯ ನೆಲೆಗೊಳಿಸಿ—ಇಲ್ಲಿ ಶಾಸ್ತ್ರದ ವಾಸನೆಯೆಂದರೆ ಹಿಂದೆ ದೇಹವಾಸನೆ ಮೊದಲಾದವುಗಳೊಡನೆ ಸೇರಿದಂಥ ಅನೇಕ ಶಾಸ್ತ್ರಾರ್ಥಗಳ ಗಡಿಬಿಡಿಯಲ್ಲಿ ತೊಳಲುವ ಶಾಸ್ತ್ರವಾಸನೆಯಲ್ಲ. ಶಾಸ್ತ್ರವೆಂದರೆ ವೇದ. ವೇದವು ಹೇಳಿರುವಂಥ ಜೀವಬ್ರಹ್ಮೈಕ್ಯವು ಮನಸ್ಸಿನಲ್ಲಿ ಚೆನ್ನಾಗಿ ಬೇರೂರಿಕೊಳ್ಳುವಂತೆ ಮಾಡುವದೇ ಶಾಸ್ತ್ರವಾಸನೆ. ಈ ವಾಸನೆಯು ಅಗತ್ಯ.

ಹರನೆ, ಗಂಗಾಧರನೆ, ಗೌರೀ। ವರನೆ, ಶಿತಿಕಂಧರನೆ,:ಚರ್ಮಾಂ।
ಬರನೆ, ಪುರಸಂಹರನೆ, ಪುಣ್ಯಾಕರನೆ, ಸುಖಕರನೆ ||
ತರಣಿಶಶಿಶೇಖರನೆ, ಭವಭಯ। ಹರನೆ, ಪರಶುಮೃಗಾಭಯಾಂಬುಜ।
ಕರನೆ, ಸಲಹೈ ಭಕ್ತಜನರನು ಶ್ರೀಗಿರೀಶ್ವರನೆ || ೯೨ ||

ಶ್ರೀಮತ್ಪರಮಹಂಸ ಪರಿವ್ರಾಜಕಾಚಾರ್ಯ ಸಹಜಾನಂದಗುರುವರ್ಯ
ಪಾದಕಮಲಭೃಂಗಾಯಮಾಣ ಸಹವಾಸಿ ಮಹಲಿಂಗರಂಗ
ವಿರಚಿತವಾದ ಅನುಭವಾಮೃತವೆಂಬ ಗ್ರಂಥದಲ್ಲಿ
ಸಪ್ತಭೂಮಿಕೆಗಳ ಅಭ್ಯಾಸವೆಂಬ ಆರನೆಯಧ್ಯಾಯವು
ಮುಗಿದುದು.

---

೯೨. ಪರಶು...ಕರನೆ—ಕೊಡಲಿಯನ್ನೂ ಜಿಂಕೆಯನ್ನೂ ಅಭಯಮುದ್ರೆಯನ್ನೂ ಕಮಲವನ್ನೂ ಕಯ್ಯಲ್ಲಿ ಧರಿಸಿರುವವನೆ.

## ೭ನೆಯ ಅಧ್ಯಾಯ

## ಪರಮಾತ್ಮಪದನಿರೂಪಣ

ಸೂ॥ ಸಕಲತತ್ತ್ವರಹಸ್ಯವನು ಬಹು । ಯುಕುತಿಯಿಂದಲಿ ತಿಳುಹಿ ಮುನಿಪತಿ ।
ಶುಕಮುನಿಗೆ ಪರಮಾತ್ಮಪದವ ನಿರೂಪಿಸಿದನೊಲಿದು ॥

ಸೃಷ್ಟಿಸುವ ಭವನಾಗಿ ಜಗವನು ; । ನೆಟ್ಟನೇ ಮೃಡನಾಗಿ ಸಲಹುವ; ।
ಕಟ್ಟಕಡೆಯಲಿ ಸಂಹರಿಪ ಲೋಕವನು ಹರನಾಗಿ ; ॥
ಇಷ್ಟು ವಿಧವಾಗಿರ್ಪ ಗುಣದಿಂ । ದಷ್ಟಮೂರುತಿ ; ನಿರ್ಗುಣದಿ ಶಿವ ; ।
ಭ್ರಷ್ಟರರಿವರದೆಂತು ಶ್ರೀಗಿರಿಮಲ್ಲಿಕಾರ್ಜುನನ ॥ ೧ ॥

ಕುಂಠರಿಗೆ, ಶ್ರುತಿವಿಮುಖರಿಗೆ, ಜನ । ಕಂಟಕರಿಗೆ, ಕಠೋರವಚನದಿ ।
ಗಂಟುಬಿಡದಾವಾಗ ವಿಷಯಾಸಕ್ತರಾದರಿಗೆ, ॥
ನಂಟರಿಷ್ಟರುಗುರುಹಿರಿಯರೊಳು । ಟೆಂಠಣಿಸಿ ಕಡುಮೂರ್ಖರಾಗಿಹ ।
ಗಂಟುಗಳ್ಳರಿಗರುಹದಿರು ಮರಿದನುಭವಾಮೃತವ ॥ ೨ ॥

---

೧. ಸೃಷ್ಟಿಸುವ—ಹುಟ್ಟಿಸುವನು. ಭವನಾಗಿ—ಆಗುವವನು ಎಂಬರ್ಥದ "ಭವ" ಎಂಬ ಹೆಸರುಳ್ಳವನಾಗಿ. ಮೃಡನಾಗಿ—ಸುಖವನ್ನುಂಟುಮಾಡುವವನು ಎಂಬರ್ಥದ "ಮೃಡ" ಎಂಬ ಹೆಸರುಳ್ಳವನಾಗಿ. ಹರನಾಗಿ—ಕೊಲ್ಲುವವನೆಂಬರ್ಥದ "ಹರ" ಎಂಬ ಹೆಸರುಳ್ಳವನಾಗಿ. ಇರ್ಪ—ಇರುವನು. ಅಷ್ಟಮೂರುತಿ—೩ ಅ. ೧. ಪ. ವನ್ನು ನೋಡಿ. ಶಿವ—ಮೋಕ್ಷಸ್ವರೂಪನು. ಈ ಶ್ಲೋಕವು ಶಿವಮಹಿಮ್ನಸ್ತೋತ್ರದ ಈ ಕೆಳಗಿನ ಶ್ಲೋಕದ ಅನುವಾದವಾಗಿದೆ :—"ಬಹುಲರಜಸೇ ವಿಶ್ವೋತ್ಪತ್ತೌ ಭವಾಯ ನಮೋ ನಮಃ । ಪ್ರಬಲತಮಸೇ ತತ್ಸಂಹಾರೇ ಹರಾಯ ನಮೋ ನಮಃ ॥ ಜನಸುಖಕೃತೇ ಸತ್ತ್ವೋದ್ರಿಕ್ತೌ ಮೃಡಾಯ ನಮೋ ನಮಃ । ಪ್ರಮಹಸಿ ಪದೇ ನಿಸ್ತ್ರೈಗುಣ್ಯೇ ಶಿವಾಯ ನಮೋ ನಮಃ ॥"

೨. ಕುಂಠರಿಗೆ—ಏನೂ ತಿಳಿಯದವರಿಗೆ. ಟೆಂಠಣಿಸಿ—ಎದರುಬಿದು.

ಆದರದೊಳಧ್ಯಾತ್ಮವಿದ್ಯೆಯ । ಸಾಧಿಸುವ ಸತ್ಪುರುಷರಿಗೆ, ಮೈ ।
ತ್ರ್ಯಾದಿಸದ್ಗುಣಗಳನು ಪಡೆದ ಮಹಾನುಭಾವರಿಗೆ, ॥
ಬೋಧೆ ನಿಲುವಂದದಲಿ ಸದ್ಗುರು । ಪಾದಪದ್ಮವ ಸೇವಿಸುತ್ತಿಹ ।
ಸಾಧಕರಿಗರುಹುವದು ಬಿಡದೀ ಅನುಭವಾಮೃತವ ॥ ೩ ॥

ಮುನಿವರರನ್ನೆ, ಚಿತ್ತಯಿಸು; ತತ್ತ್ವದ । ಘನರಹಸ್ಯವನೆಲ್ಲವೆನ್ನಯ ।
ಮನಕೊಡಂಬಡುವಂತೆ ಶಾಸ್ತ್ರಾರ್ಥವನು ಬೋಧಿಸಿದೆ ; ॥
ಜನನಮರಣದ ಕೋಟಲೆಯ ಕಳೆ । ದೆನು ಭವತ್ಕಾರುಣ್ಯದೃಷ್ಟಿಯೊ ।
ಳನುಪಮದ ಪರಮಾತ್ಮಪದವನು ತಿಳುಹಬೇಕೆಂದ ॥ ೪ ॥

ಕೇಳು ಶುಕಯೋಗೀಂದ್ರ, ನಿಜಪದ । ಹೇಳಲಳವಲ್ಲಾದೊಡೆಯು ಸಂ ।
ಭಾಳಿಸುತಲರುಪುವೆನು ನಿಜನಿರ್ದ್ವಂದ್ವನಿರ್ಗುಣವ ; ॥
ತಾಳಿ ನೀನಪರೋಕ್ಷದನುಭವ । ಮೇಳವಿಸುವಂದದಲಿ ತಿಳಿವನು ।
ಕೂಲವನು ಮಾಡುವದು ಮನದಲಿ ಮಗನೆ ಕೇಳೆಂದ ॥ ೫ ॥

ದರ್ಪಣದವೊಲು ಶುದ್ಧವಾಗಿಯೆ । ತೋರ್ಪ ಬುದ್ಧಿಯ ವೃತ್ತಿ ನಿಜವಾ ।
ಗಿರ್ಪ ನಿತ್ಯಜ್ಯೋತಿರೂಪಿನೊಳೇಕರಸವಾಗಿ ॥
ಕರ್ಪುರವನುರಿಯಾವರಿಸಿದೋ । ಲ್ಪೇರ್ಪಡದೆ ನಿರ್ದ್ವಂದ್ವಪದವಾ ।
ಗಿರ್ಪುದದು ಪರಮಾತ್ಮಪದವೆಂದರಿತುಕೋ ಎಂದ ॥ ೬ ॥

ನೆನಹಡಗಿ, ಮನವೇನು ತೋರದೆ, । ತನಗೆ ತಾನೆಂದೆಂಬ ಹಮ್ಮಿನ ।
ಬಿನುಗು ನೆರೆ ಬಯಲಾಗಿ, ಭಾವಭ್ರಾಂತಿಯಳಿದುಳಿದ ॥

---

೩. ಮೈತ್ರ್ಯಾದಿಸದ್ಗುಣಗಳು— " ಮೈತ್ರೀಕರುಣಾಮುದಿತೋಪೇಕ್ಷಾಣಾಂ...... ......ಚಿತ್ತ ಪ್ರಸಾದನಮ್ " ಎಂಬ ಪಾತಂಜಲಯೋಗಸೂತ್ರದಂತೆ ಮೈತ್ರಿ, ಕರುಣಾ, ಮುದಿತಾ, ಉಪೇಕ್ಷಾ ಈ ನಾಲ್ಕು ಗುಣಗಳು ಚಿತ್ತಶುದ್ಧಿಗೆ ಸಾಧನಗಳು. ಮೈತ್ರಿಯೆಂದರೆ ಸುಖಿಗಳೊಡನೆ ಸ್ನೇಹ ; ಕರುಣೆಯೆಂದರೆ ದುಃಖಿಗಳ ವಿಷಯದಲ್ಲಿ ಮರುಕ ಮುದಿತ ಎಂದರೆ ಒಳ್ಳೆಯ ವಿಷಯಗಳನ್ನು ಕಂಡರೆ ಸಂತೋಷ ; ಉಪೇಕ್ಷೆಯೆಂದರೆ ಕೆಟ್ಟ ವಿಷಯಗಳಲ್ಲಿ ಉದಾಸೀನತೆ.

೫. ಸಂಭಾಳಿಸುತ—ಪ್ರಯತ್ನದಿಂದ ಹೊಂದಿಸಿಕೊಳ್ಳುತ್ತ. ತಾಳಿ—ಗ್ರಹಿಸಿ.

೪. ಅನುಪಮವು—(ಎಲ್ಲ ಸ್ಥಿತಿಗಳೂ ಮನಸ್ಸಿನಲ್ಲಿ ಅನುಭವಕ್ಕೆ ಬರತಕ್ಕವುಗಳಾಗಿರುವಾಗ ಆತ್ಮಸ್ಥಿತಿಯು ಮನಸ್ಸನ್ನು ಮೀರಿರುವದರಿಂದ) ಹೋಲಿಕೆ ಇಲ್ಲದ್ದು.

ಘನಪರಂಜ್ಯೋತಿಸ್ವರೂಪವು । ಮನದೊಳನುಭವವಿಲ್ಲದನುಪಮ ।
ವೆನಿಪುದೇ ಪರಮಾತ್ಮಪದವೆಂದರಿತುಕೋ ಎಂದ ॥ ೭ ॥

ಬುದ್ಧಿಯೆನಿಸುವ ಕರಣವನುಭವ । ಸಿದ್ಧವಾಗಿಹುದಾತ್ಮನಡಿಯೊಳ ।
ಗಿರ್ದು ತೋರುತ ಬಯಲೊಳೆಸೆಯುವ ಬಿಂಗದಂದದಲಿ ; ॥
ಬುದ್ಧಿಗಾದಾಕಾರವಡಗಿರ । ಲದ್ವಯಾನಂದಾಬ್ಧಿಯಾಗುತ ।
ಭೇದ್ಯವದು ಪರಮಾತ್ಮಪದವೆಂದರಿತುಕೋ ಎಂದ ॥ ೮ ॥

ಅಚ್ಛಬೆಳದಿಂಗಳಿನ ಪ್ರಭೆಯಲಿ । ಸ್ವಚ್ಛವಾದಾ ಸ್ಫಟಿಕಮಣಿಯ ಶಿ ।
ಲೋಚ್ಚಯದ ನಿಜವೇನು ತೋರದಭೇದ್ಯವಾದಂತೆ ॥
ಅಚ್ಚ ಬರಿಯರಿವಾಗಿ ತತ್ಸುಖ । ಪೆರ್ಚೆ ತನ್ನಯ ಬುದ್ಧಿಯೊಳು ಮಿಗೆ ।
ಬೆಚ್ಚಲದು ಪರಮಾತ್ಮಪದವೆಂದರಿತುಕೋ ಎಂದ ॥ ೯ ॥

ಜೀವನೆನಿಸುವ ಸಂವಿದದ್ವಯ । ನಾವದೊಂದನು ಮನದಿ ವಿಷಯವ ।
ಭಾವಿಸದೆ ನಿರ್ವಿಷಯನಾಗಿಹನಾವ ಹೊತ್ತಿನಲಿ ॥

---

೮. ಆತ್ಮನಡಿಯೊಳಗಿರ್ದು ತೋರುತ—(ಬುದ್ಧಿಯು) ಆತ್ಮನ ಹತ್ತಿರದಲ್ಲಿಯೆ ಇದ್ದು ಕಾಣುತ್ತ. ಬಯಲೊಳೆಸೆಯುವ ಬಿಂಗದಂದದಲಿ—ಬಯಲಲ್ಲಿ ಕಾಗೆಯ ಬಂಗಾರವು ಥಳಥಳ ಹೊಳೆಯುತ್ತ ಎದ್ದು ಕಾಣುವಂತೆ. (ಕಾಗೇಬಂಗಾರವು ತಾನು ತೇಜೋಮಯವಾದ ವಸ್ತುವಲ್ಲದಿದ್ದರೂ ಸೂರ್ಯನ ತೇಜಸ್ಸನ್ನು ಪಡೆದು ಸೂರ್ಯನ ಹಾಗೆ ಬೆಳಗುವಂತೆ ಬುದ್ಧಿಯು ಜ್ಞಾನಸ್ವರೂಪವಲ್ಲದಿದ್ದರೂ ಆತ್ಮಸಾನ್ನಿಧ್ಯದ ಬಲದಿಂದ ಆತ್ಮನ ಹಾಗೆ ಜ್ಞಾನಸ್ವರೂಪಾಗಿ ಕಾಣಿಸಿಕೊಳ್ಳುವದು.) ಬುದ್ಧಿಗಾದಾಕಾರವಡಗಿರಲು—(ಕಾಗೇ ಬಂಗಾರವು ಹೋದರೆ ಸೂರ್ಯನನ್ನು ಅನುಕರಣಮಾಡುತ್ತಿದ್ದ ಎರಡನೆಯ ಪ್ರಕಾಶವಸ್ತುವೆಂಬುದು ಹೋಗಿ ಸೂರ್ಯನೊಬ್ಬನೇ ಆಗುವಂತೆ) ಬುದ್ಧಿಯ ವೃತ್ತಿಗಳೆಲ್ಲಾ ಹೋದರೆ ಆತ್ಮನೊಬ್ಬನೇ ಅಖಂಡನಾಗಿ ಕಾಣಿಸಿಕೊಳ್ಳುವನು.

೯. (ಶಿಲೋಚ್ಚಯದ+) ನಿಜವು—ಸ್ವಾಭಾವಿಕವಾದ ಕಾಂತಿಯು. ಅಭೇದ್ಯವಾದಂತೆ—ಬೆಳದಿಂಗಳಲ್ಲಿ ಇದು ಚಂದ್ರನ ಬೆಳಕೆಂದೂ ಇದು ಸ್ಫಟಿಕಶಿಲೆ ಎಂದೂ ಬಿಡಿಸಿ ತಿಳಿಯುವದಕ್ಕೆ ಬರದೆ ಇರುವ ಹಾಗೆ. ಬೆಚ್ಚಲು—ಚೆನ್ನಾಗಿ ಬೆಸುಗೆಯಿಂದ ಕೂಡಿಕೊಳ್ಳಲು.

೧೦. ಸಂವಿದದ್ವಯನು—(ಜೀವನೆಂಬ) ಅದ್ವಯವೂ ಜ್ಞಾನಸ್ವರೂಪವೂ ಆದ

ಕೇವಲಚಿದಾನಂದಮಯವಹ । ಭಾವವಿರಹಿತವಾದ ನಿರ್ಮಲ ।
ವಾವುದದು ಪರಮಾತ್ಮಪದವೆಂದರಿತುಕೋ ಎಂದ || ೧೦ ||

ತನ್ನ ನಿಜವನು ತಿಳಿದು, ತಾ ಸಂ । ಪನ್ನಸುಖಮಯನಾಗಿ, ತನ್ನಿಂ ।
ದನ್ಯವಹ ತನುಕರಣಗಳ ಪ್ರಾರಬ್ಧಕರ್ಮವನು ||
ಅನ್ಯರನುಭವದಂತೆ ಕಂಡವ । ಮುನ್ನಲೇ ಪರಿಹರಿಸಿ ನಿಂದ ನಿ ।
ಜೋನ್ನತಿಯೆ ಪರಮಾತ್ಮಪದವೆಂದರಿತುಕೋ ಎಂದ || ೧೧ ||

ಬಗೆಯೆ ಸಕಲಾಕಾರವಾಗಿರ । ಲೊಗೆದು ತೋರ್ಪುದು; ತಿಳಿಯಲಂತಾ ।
ಬಗೆಯಳಿಯೆ ತಾನಾಗಿ ತೋರ್ಪುದಖಂಡವಸ್ತುವೆನೆ ||
ನಿಗಮನಿಕರಂಗಳಿಗೆ ನಿಲುಕದ, । ಸಗುಣನಿರ್ಗುಣವೆನಿಸದಾ ಚಿ ।
ದ್ಗಗನವದು ಪರಮಾತ್ಮಪದವೆಂದರಿತುಕೋ ಎಂದ || ೧೨ ||

ತೋರಿಸುವದೆಲ್ಲವನು ತನ್ನೊಳು ; । ತೋರದಡಗಿದೊಡಡಗಿತೆಂಬ ವಿ ।
ಚಾರವೇನೂ ತೋರದೇ ಸ್ತಿಮಿತಾಂಬುಧಿಯವೋಲು ||
ಮೀರಿ ಮಿಕ್ಕಿಹ ಸಂತ್ಯಸಂವಿದ । ಪಾರಪರಮಾನಂದಸಹಜಾ।
ಕಾರವದು ಪರಮಾತ್ಮಪದವೆಂದರಿತುಕೋ ಎಂದ || ೧೩ ||

ಜ್ಞೇಯವೆನಿಸಿಯೆ ಮೆರೆದು ತೋರುವ ।ದೀಯಶೇಷವು; ಸಕಲಕರಣೋ।
ಪಾಯವಿವು ಜ್ಞಾನಂಗಳೆನಿಪುವು ; ನಿಜದೊಳವನರಿವ ||
ಆಯರಿವೆ ಜ್ಞಾತೃತ್ವವೆನಿಸುವ । ದೀಯಿನಿತು ತಿಳಿ ತ್ರಿಪುಟಿಯಿವನಳಿ ।
ದಾಯವಸ್ಥೆಯನರಿತುಕೋ ಪರಮಾತ್ಮಪದವೆಂದು || ೧೪ ||

---

ಬ್ರಹ್ಮದ ಸ್ವರೂಪವನು. ನಿರ್ವಿಷಯನಾಗಿಹನು—ಯಾವ ವಿಷಯವನ್ನೂ ಮನಸ್ಸಿಗೆ ತಂದುಕೊಳ್ಳದೆ ಇರುವನು. ಭಾವವಿರಹಿತವಾದ—ಯಾವ ಕಲ್ಪನೆಯೂ ಇಲ್ಲದಂಥ

೧೧. ಕಂಡು+ಅವ (ಆ ಪ್ರಾರಬ್ಧಕರ್ಮಗಳನ್ನು) ಪರಿಹರಿಸಿ—ಕೈಬಿಟ್ಟು.

೧೨. ಬಗೆಯೆ—ಮನಸ್ಸೇ. ಬಗೆಯಳಿಯೆ—ಮನಸ್ಸು ನಾಶವಾದರೆ.

೧೩. ಸ್ತಿಮಿತಾಂಬುಧಿಯವೋಲು—ಅಲುಗಾಡದ ಸಮುದ್ರದಂತೆ.

೧೪. ತ್ರಿಪುಟಿ—ಮೂರುದಲಗಳುಳ್ಳದ್ದು.

ಒತ್ತರದ ನಿದ್ರೆಯೊಳು ನಿಜಸುಖ । ವ್ಯಕ್ತವಾಗಿಯೆ ತೋರುತಿರಲದ ।
ಮರ್ತ್ಯ "ಸುಖಮಸ್ವಾಪ್ಸಮಹ" ಮಿಂತೆಂದು ಪೇಳುವನು; ॥
ಪ್ರತ್ಯಭಿಜ್ಞೆಯೆನಿಪ್ಪುದಾ ಸುಖ; । ನಿತ್ಯನಿರುಪಾಧಿಕವದಾಗಿಹ ।
ಸತ್ಯಸಹಜಾನಂದವದು ಪರಮಾತ್ಮಪದವೆಂದ ॥ ೧೫ ॥

ಕತ್ತಲೆಗೆ ಸೈರಿಸದೆ ತೇಜವ । ನರ್ಥಿಸುವ ನಯನಗಳ ತೇಜೋ ।
ಮೂರ್ತಿಯೆಂತಂತಖಿಳದುಃಖವ ಸೈರಿಸದೆ, ಸುಖವ ॥
ಪ್ರಾರ್ಥಿಸುವ ನಿಜವಾದ ನಿರುಪಮ । ವಸ್ತುವೇ ಸುಖಮಯವದೆನಲೇ ।
ಕತ್ವವದು ಪರಮಾತ್ಮಪದವೆಂದರಿತುಕೋ ಎಂದ ॥ ೧೬ ॥

ಸ್ಥಾಲಿಯೊಳಗಿದ್ದಗ್ನಿಪುರುಷನು । ತೈಲಸಿಕ್ತದ ಬತ್ತಿಯೊಳು ಸ ।
ಮ್ಮೇಳವಾಗಲು ಸಕಲವಸ್ತುವ ಬೆಳಗುವಂದದಲಿ ॥
ಸ್ಥೂಲಸೂಕ್ಷ್ಮಗಳಾದ ತತ್ತ್ವಗ । ಳೋಳಿಯೊಳಗಿಹ ಸ್ವಪ್ರಕಾಶವ ।
ಹೇಳಲೇನದು ಪರಮಪದವೆಂದರಿತುಕೋ ಎಂದ ॥ ೧೭ ॥

---

೧೫. "ಸುಖಮಸ್ವಾಪ್ಸಮಹಂ"—ನಾನು ಸುಖವಾಗಿ ನಿದ್ರೆಗೈದೆನು. ಪ್ರತ್ಯಭಿಜ್ಞೆ—ಹಿಂದೊಮ್ಮೆ ನೋಡಿದ್ದನ್ನು ನಡುವೆ ಮರೆತಿದ್ದು ಆ ಮೇಲೆ ಗುರ್ತಿಸುವದಕ್ಕೆ ಪ್ರತ್ಯಭಿಜ್ಞೆಯೆಂದು ಹೆಸರು. ಇಲ್ಲಿ ಕವಿಯು ನಿದ್ರೆಯಲ್ಲಿ ಅನುಭವಕ್ಕೆ ಬಂದ ಸುಖದ ನೆನಪನ್ನು ಪ್ರತ್ಯಭಿಜ್ಞೆಯೆಂದು ಕರೆದಿರುವನು.

೧೬. ಅರ್ಥಿಸುವ—ಅಪೇಕ್ಷಿಸುವ. (ತೇಜೋಮೂರ್ತಿಗಳಾದ ಕಣ್ಣುಗಳು ಕತ್ತಲೆಯನ್ನು ಸಹಿಸದೆ ಬೆಳಕನ್ನು ಬಯಸುವಂತೆ ಸುಖಮಯನಾದ ಆತ್ಮನು ದುಃಖವನ್ನು ಸೈರಿಸದೆ ಸುಖವನ್ನೇ ಪ್ರಾರ್ಥಿಸುವನೆಂದರ್ಥ).

೧೭. ಸ್ಥಾಲಿಯೊಳಗಿದ್ದು—ಹಣತೆಯಲ್ಲಿದ್ದು. ತೈಲಸಿಕ್ತದ—ಎಣ್ಣೆಯೊಳಗದ್ದಿದ. ತತ್ತ್ವ...ಸ್ವಪ್ರಕಾಶವ—ತತ್ತ್ವಗಳೆಲ್ಲಾ ನಮಗೆ ತೋರುವವಷ್ಟೆ ; ಹಾಗೆ ತೋರಿಕೊಳ್ಳುವದೇ ಪರಮಾತ್ಮನ ಸ್ವಪ್ರಕಾಶವು. ಜಗತ್ತೆಂಬುದು ಅಸ್ತಿ (ಇದೆ), ಭಾತಿ (ತೋರುತ್ತದೆ), ಪ್ರಿಯ (ಬೇಕೆನಿಸುವದು), ನಾಮ (ಹೆಸರು), ರೂಪ (ಆಕಾರ)-ಈ ಐದಂಶಗಳಿಂದ ಕೂಡಿದೆ. ಇವುಗಳಲ್ಲಿ ನಾಮರೂಪಗಳೆರಡೂ ಮಾಯೆಯ ಅಂಶಗಳು. ಅಸ್ತಿಭಾತಿಪ್ರಿಯಗಳು ಸಚ್ಚಿದಾನಂದಸ್ವರೂಪನಾದ ಆತ್ಮನ ಅಂಶಗಳು. ಇವುಗಳಲ್ಲಿ ಈ ಪದ್ಯವು ಭಾತಿ (ತೋರುತ್ತದೆ) ಎಂಬಂಶದ ಆತ್ಮಸ್ವರೂಪವನ್ನು ತಿಳಿಸುತ್ತದೆ. ದೀಪಕ್ಕೆ ಹಣತೆಯೂ ಬತ್ತಿಯೂ ಹೇಗೆ ಉಪಾಧಿಗಳೊ ಹಾಗೆ ಆತ್ಮನಿಗೆ ಸ್ಥೂಲಸೂಕ್ಷ್ಮಗಳಾದ ತತ್ತ್ವಗಳು ಉಪಾಧಿಗಳು.

ಜ್ಞಾನವೆಂಬಭಿಮಾನವಿಲ್ಲ । ಜ್ಞಾನವೇನೂ ತೋರದಾವಗ ।
ಭಾನುವಿನವೋಲ್ಪೆಳಗುವನು ಪ್ರಜ್ಞಾನನೆಂದೆನಿಸಿ॥
ಧ್ಯಾನಮೌನಸಮಾಧಿಯಳಿದುಳಿ । ದಾ ನಿಜಾನಂದೈಕವಸ್ತುವೆ ।
ತಾನು ತಾನಾಗಿಪ್ಪುದದು ಪರಮಾತ್ಮಪದವೆಂದ　　॥ ೧೮ ॥

ಕರಣ ಮೊದಲಾಗಿರ್ಪುಪಾಧಿಯ । ಬೆರೆದುಕೊಂಡಿಹ ಜೀವನೇ ಸ ।
ದ್ಗುರುಕಟಾಕ್ಷವ ಪಡೆದು ತನ್ನ ನಿಜಸ್ವರೂಪವನು ॥
ಅರಿದೊಡಪರೋಕ್ಷಾನುಭವ ಸು । ಸ್ಥಿರವದಾಗಲು ತಾನೆ ಸಾಕ್ಷಾ ।
ತ್ಕರಿಸಿಹುದು ಪರಮಾತ್ಮಪದವೆಂದರಿತುಕೋ ಎಂದ　　॥ ೧೯ ॥

ತಾಪಮೂರರ ಘಸಣೆಯಿಲ್ಲದೆ, । ಪಾಪಪುಣ್ಯದ ಲೇಪವಿಲ್ಲದೆ, ।
ರೂಪರಸಗಂಧಾದಿವಿಷಯವ್ಯವಹರಣೆಯಳಿದ ॥
ದೀಪದಂದದಿ, ಮೂರವಸ್ಥೆಯ । ದೀಪಿಸುತ್ತೇಕತ್ವವಾಗಿ ।
ರ್ಪಾ ಪರಂಜ್ಯೋತಿಯೆ ಕಣಾ ಪರಮಾತ್ಮಪದವೆಂದ　　॥ ೨೦ ॥

ತೋರುತಡಗುವ ಸಕಲದೊಳು ತಾ । ತೋರದಡಗದೆ, ಸಹಜವಾಗಿಯೆ ।
ತೋರುತಿರುತಾವಾಗಲೊಂದೇ ಪರಿಯೊಳಿಲ್ಲವನು ॥
ತೋರಿಸುವ ಸ್ವಪರಪ್ರಕಾಶನ । ಪಾರನಿತ್ಯಾನಂದಸಂವಿ ।
ತ್ಸಾರವೇ ಪರಮಾತ್ಮಪದವೆಂದರಿತುಕೋ ಎಂದ　　॥ ೨೧ ॥

---

೧೮. ಅಭಿಮಾನವಿಲ್ಲ+ ಅಜ್ಞಾನವೇನೂ ತೋರದು. ಪ್ರಜ್ಞಾನನು—ಜ್ಞಾನ ಸ್ವರೂಪನು. ಧ್ಯಾನಮೌನಸಮಾಧಿಯಳಿದು—ಧ್ಯಾನ, ಮೌನ, ಸಮಾಧಿ ಮೊದಲಾದ ಸಾಧನಗಳನ್ನೆಲ್ಲ ಬಿಟ್ಟು (ಸಿದ್ಧನಾದ ಮೇಲೆ ಅವನು ಈ ಸಾಧನಗಳಿಗಾಗಿ ಪ್ರಯತ್ನಿಸುವದಿಲ್ಲವೆಂದು ತಾತ್ಪರ್ಯ).

೧೯. ಬೆರೆದುಕೊಂಡಿಹ—ಕರಣ ಮೊದಲಾದವುಗಳೇ ತನ್ನ ಆತ್ಮವೆಂದು ತಿಳಿದು ಕೊಂಡಿರುವ.

೨೦. ತಾಪಮೂರು—ಆಧ್ಯಾತ್ಮಿಕ (ಶರೀರದಲ್ಲಿ ಹುಟ್ಟಿದ ರೋಗ ಮೊದಲಾದದ್ದು), ಆಧಿಭೌತಿಕ (ಇತರಪ್ರಾಣಿಗಳಿಂದ ಆದಹಾನಿ), ಆಧಿದೈವಿಕ (ಭೂತಪಂಚಕಗಳಿಂದ) ಆಗುವ ಕೇಡು.

೨೧. ತೋರದಡಗದೆ—ಹುಟ್ಟಿ ತೋರುವದು ಮತ್ತು ನಾಶವಾಗಿ ತೋರದೆ ಹೋಗುವದು ಎಂಬ ವಿಕಾರವಿಲ್ಲದೆ. ಸಹಜವಾಗಿಯೆ—'ಪರ್ವತವು ನಿಂತಿದೆ' ಎಂಬ

ಮೂರುತನು,ಮೂರಾದವಸ್ಥೆಯ,| ಮೂರುಗುಣಗಳ, ಮೂರುಹಮ್ಮಿನ,|
ಮೂರೆನಿಪ ತ್ರಿಪುಟಿಯ, ತ್ರಿವರ್ಗವ, ತ್ರಿಕರಣಂಗಳನು, |
ಮೂರುಕಾಲವ, ಮೂರುಲೋಕವ, | ಮೂರುಶಕ್ತಿಯ, ಮೂರುಗತಿಗಳ |
ಮಾರಿ ತೋರುವ ತುರ್ಯವೇ ಪರಮಾತ್ಮಪದವೆಂದ || ೨೨ ||

ಯ ಈ ಪರಿ ಪರಮಾತ್ಮಪದವ ನಿ | ರೂಪಿಸಲು ಶುಕಮುನಿಯು ಚಿತ್ತದ|
ತಾಪವಡಗೆ, ಮನೋನುರಾಗದಲುಬ್ಬಿ, ಮುನಿಪತಿಯ ||
ಶ್ರೀಪದಾಂಬುಜಕೆರಗಿ, ಭಕ್ತಿರ | ಸೋಪಭೋಗದಿ ನುತಿಸಿದನು ಸ |
ತ್ಯಾಪವರ್ಗಿಕನೆನಿಪ ಸಹಜಾನಂದಗುರುಪದವ || ೨೩ ||

---

ಪ್ರಯೋಗದಂತೆ ನಿತ್ಯವೂ ಸ್ವಭಾವಧರ್ಮದಿಂದ. ಸ್ವಪರಪ್ರಕಾಶನ—ತಾನೂ ಬೆಳಗುತ್ತ ಬೇರೆಯವುಗಳನ್ನೂ ಬೆಳಗುವವನ.

೨೨. ಮೂರುತನು—ಇಲ್ಲಿ ತನುಗಳು ಮೂರಾಗುವದಕ್ಕೆ ಸ್ಥೂಲಸೂಕ್ಷ್ಮಗಳ ಜೊತೆಗೆ ಪರತನುವನ್ನು ಸೇರಿಸಬಾರದು. ಏಕೆಂದರೆ ಇಲ್ಲಿಯ ಬ್ರಹ್ಮವಸ್ತು ಮೂರನೆಯ ತನುವನ್ನು ಮಾರಿದ್ದು. ಅದ್ದರಿಂದ ಇಲ್ಲಿ ಮೂರನೆ ತನು ಅವಿದ್ಯೆ. ಈ ವಿಷಯದಲ್ಲಿ ೩--೬ಲನ್ನು ನೋಡಿ. ಸುಷುಪ್ತಿಯಲ್ಲಿ ನಿಜವಾಗಿ ಎಚ್ಚರಕನಸುಗಳಂಥ ತನುವಿಲ್ಲದಿದ್ದರೂ ಜೀವನಿಗೆ ತನ್ನ ನಿಜವಾದ ಸ್ವರೂಪದ ಜ್ಞಾನವು ಇಲ್ಲದೆ ಇರುವದರಿಂದ ನಿದ್ರೆಯಲ್ಲಿ ಅವನಿಗೆ ಆ ಅಜ್ಞಾನವೇ ಶರೀರವೆಂದು ಶಾಸ್ತ್ರವು ಕಲ್ಪಿಸಿರುವದು. ಆ ಕಲ್ಪಿತಶರೀರವೇ ಇಲ್ಲಿಯ ಮೂರನೇ ತನು. ಮೂರಾದವಸ್ಥೆ—೩ ಅ. ೪೯ ಪ. ದಲ್ಲಿ ಮೂರುಗುಣ—೩ ಅ. ೭೭ ಪ. ದಲ್ಲಿ ಮೂರುಹಮ್ಮು—೪ ಅ. ೧೧ ಪ. ದಲ್ಲಿ ಇವೆ. ತ್ರಿವರ್ಗ—ತಂದೆ, ತಾಯಿ, ಗುರು ಅಥವಾ ಧರ್ಮ, ಅರ್ಥ, ಕಾಮ. ತ್ರಿಕರಣ—ಶರೀರ, ವಾಕ್ಕು, ಮನಸ್ಸು. ಮೂರುಕಾಲ—ವರ್ತಮಾನ, ಭೂತ, ಭವಿಷ್ಯತ್. ಮೂರುಲೋಕ—೬ ಅ. ೨೪ ಪ. ದಲ್ಲಿದೆ. ಮೂರು ಶಕ್ತಿ—ಇಚ್ಛಾಶಕ್ತಿ, ಜ್ಞಾನಶಕ್ತಿ, ಕ್ರಿಯಾಶಕ್ತಿ. ಮೂರುಗತಿ—ದೇವತೋಪಾಸಕರ ದೇವಯಾನ, (ಇದಕ್ಕೆ ಶುಕ್ಲಮಾರ್ಗವೆಂದೂ ಅರ್ಚಿರಾದಿಮಾರ್ಗವೆಂದೂ ಹೆಸರು.) ಇಷ್ಟಾಪೂರ್ತಗಳನ್ನು ಮಾಡಿದವರ ಪಿತೃಯಾಣ, (ಇದಕ್ಕೆ ಕೃಷ್ಣಮಾರ್ಗವೆಂದೂ ಧೂಮಮಾರ್ಗವೆಂದೂ ಹೆಸರು) ಇವೆರಡಕ್ಕೂ ಅರ್ಹರಲ್ಲದ ಕ್ಷುದ್ರಜಂತುಗಳಂತವರ ಹುಟ್ಟು ಸಾವು. (ಇದರಲ್ಲಿಯೇ ನರಕವೂ ಸೇರಿತೆಂದು " ಅನಿಷ್ಟಾದಿಕಾರಿಣಾಮಪಿ ಚ ಶ್ರುತಂ " ಎಂಬ ಬ್ರಹ್ಮಸೂತ್ರದ ಮೇಲಿನ ಭಾಷ್ಯದ ಭಾಮತೀಟೀಕಿನಲ್ಲಿ ಶ್ರೀವಾಚಸ್ಪತಿಮಿಶ್ರರು ಅರ್ಥವನ್ನು ಹೊರಡಿಸಿದ್ದಾರೆ.)

೨೩. ಸತ್ಯಾಪವರ್ಗಿಕನು—ಸತ್ಯಸ್ವರೂಪವಾದ ಮೋಕ್ಷದ ಸಂಬಂಧಿಯಾದವನು.

ವ್ಯೋಮಕೇಶ, ಮಹೇಶ, ಶಂಕರ, । ವಾಮದೇವ, ವರೇಣ್ಯ, ವರಗುಣ।
ಧಾಮ, ವಾಸುಕಿಭೂಷ, ವೃಷಭಾರೂಢ, ವಿಶ್ವೇಶ, ॥
ಭೀಮ, ಭರ್ಗ, ಕಪರ್ದಿ, ಶಿವ, ಸು । ತ್ರಾಮನಮಿತ, ಪಿನಾಕಿ, ಗಿರಿಜಾ ॥
ಕಾಮುಕ, ಶ್ರೀಮಲ್ಲಿಕಾರ್ಜುನ, ಸಲಹು ಮೂಜಗವ ॥ ೨೪ ॥

ಶ್ರೀಮತ್ಪರಮಹಂಸ ಪರಿವ್ರಾಜಕಾಚಾರ್ಯ ಸಹಜಾನಂದಗುರುವರ್ಯ ।
ಪಾದಕಮಲಭೃಂಗಾಯಮಾಣ ಸಹವಾಸಿ ಮಹಲಿಂಗರಂಗ
ವಿರಚಿತವಾದ ಅನುಭವಾಮೃತವೆಂಬ ಗ್ರಂಥದಲ್ಲಿ
ಪರಮಾತ್ಮಪದನಿರೂಪಣವೆಂಬ ಏಳನೆಯಧ್ಯಾಯವು
ಮುಗಿದುದು.

---

೨೪. ಸುತ್ರಾಮನಮಿತ—ಇಂದ್ರನಿಂದ ನಮಸ್ಕಾರವನ್ನು ಪಡೆಯುವ. ಗಿರಿಜಾ ಕಾಮುಕ---ಪಾರ್ವತಿಯ ಪತಿಯಾದ.

---

## ಎಂಟನೆಯ ಅಧ್ಯಾಯ

# ಮಾಯಾಮಿಥ್ಯಾತ್ವಪ್ರಕರಣ

ಸೂ॥ ಸತ್ಯವಾದದ್ವೈತದಲಿ ತೋ । ರಿತ್ತು ಪುಸಿಯಹ ಮಾಯೆಯೆಂದೇ ।
ಕತ್ತವನು ಶುಕಮುನಿಗೆ ಸಾತ್ಯವತೇಯ ಬೋಧಿಸಿದ ॥

ಬರಿದೆ ನಿಂದಿಸಿ ದಕ್ಷ ಹರನನು। ಕೊರೆಸಿಕೊಂಡನು ಕೊರಳ; ಮನ್ಮಥ ।
ದುರುಳತನದಲಿ ಸರಳ ತೊಟ್ಟವನುರಿದನಾ ಕ್ಷಣಕೆ ; ॥
ಮರುಳುಮಾನವಪಶುಗಳರಿಯದೆ । ಜರಿವರೀ ಶ್ರೀಶೈಲಪತಿಯನು ; ।
ಪರಮಪಾತಕರುರುಳ್ವರಂಧತಮಿಸ್ರನರಕದಲಿ ॥ ೧ ॥

ಕ್ರೂರರಿಗೆ, ಕುಪಥರಿಗೆ, ದುರ್ವ್ಯಾ । ಪಾರರಿಗೆ, ದುಷ್ಟರಿಗೆ, ಪಾಪಾ ।
ಚಾರರಿಗೆ, ಪರರತಿಶಯವ ಸೈರಿಸದ ಪಿಸುಣರಿಗೆ, ॥
ಘೋರದುಃಖಾಗಾರವಹ ಸಂ । ಸಾರಸಾಗರಮಗ್ನರಿಂಗವಿ ।
ಚಾರಿಗಳಿಗುಸುರದಿರು ಮರೆದೀ ಅನುಭವಾಮೃತವ ॥ ೨ ॥

ಶ್ರುತಿಗುರುಗಳುಪದೇಶವಾಕ್ಯಮೊ । ಳತಿಶಯದ ವಿಶ್ವಾಸವುಳ್ಳರಿ ।
ಗಿತರಮತದಾಚರಣೆಗೆಳೆಸದ ಶುದ್ಧಮತಿಗಳಿಗೆ, ॥
ಮಿತವಿಹಾರಾಹಾರಪರಿಭಾ । ಷಿತರಿಗಂತರ್ಮುಖದ ಬುದ್ಧಿಯ ।
ಗತಿಯನುಳ್ಳರಿಗೊಲಿದು ಪೇಳೀ ಅನುಭವಾಮೃತವ ॥ ೩ ॥

---

೧. ದಕ್ಷ—ಇವನ ಕಥೆಯು ೨ ಅ. ೫೮ ಪ. ದಲ್ಲಿ ಬಂದಿದೆ. ಮನ್ಮಥ–ಇವನ ಕಥೆಯ ವಿಷಯಕ್ಕೆ ೨ ಅ. ೫೯ ಪ. ವನ್ನು ನೋಡಿ. ಅಂಧತಮಿಸ್ರ—ಏನೂ ಕಾಣದಷ್ಟು ಕತ್ತಲೆಯುಳ್ಳಂಥ "ಅಂಧಂತಮ" ಎಂಬ ನರಕ.

೨. ಪಿಸುಣರು—ಚಾಡಿಕೋರರು. ಘೋರದುಃಖಾಗಾರವಹ–ಭಯಂಕರವಾದ-ದುಃಖಕ್ಕೆ ಮನೆಯಂತಿರುವ (ಈ ಮಾತು ಸಂಸಾರವೆಂಬ ಮಾತಿಗೆ ವಿಶೇಷಣ).

೩. ಗತಿಯನು—ಪ್ರವೃತ್ತಿಯನ್ನು, ಬಲವನ್ನು.

ಬೆಸಸೆನಗೆ ಗುರುರಾಯ, ಮಾಯಿಯ|ದೆಸೆಯೊಳೀ ಮಹಾದಾದಿತತ್ತ್ವ|
ಪ್ರಸರದಿಂ ಬ್ರಹ್ಮಾಂಡತಂಡಗಳುದಿಸಿ ತೋರುತಿರೆ ||
ಉಸುರಬಾರದತರ್ಕ್ಯವಾಗಿ | ರ್ಪಸಮತೇಜೋರಾಶಿಯುದರೊಳು |
ಪಸರಿಸಿರುತಿಹುದೆಂಬುದಿದು ಹೊಸಪರಿಯಲಾ ! ಎಂದ || ೪ ||

ಮಂಜ ಮೊಟ್ಟೆಯ ಕಟ್ಟುತದರೊಳು|ಪಂಜಿನುರಿಯನುಪಿಡಿದ ತೆರದಲಿ,||
ಸಂಜೆಗತ್ತಲೆಯೆನಿಪ ವಸನವನುಡಿಗೆಗಳವಡಿಸಿ ||
ರಂಜಿಸುವ ರವಿಯಂತೆ, ತೇಜಃ | ಪುಂಜವಾಗಿಹ ಬೊಮ್ಮ ಮಾಯಾ |
ಪಂಜರದೊಳಡಗಿರ್ಪುದಿದು ಬೆರಗಾದುದೆನಗೆಂದ || ೫ ||

ಬ್ರಹ್ಮಮಾಯೆಗಳೆರಡು ತಮ್ಮೊಳ | ಗೊಮ್ಮೆಯೂ ಬೇರೆನಿಸದಾವಗ |
ನೆಮ್ಮಿಕೊಂಡಿಹವವರ ಪರಿಯನು ತಿಳುಹಬೇಕೆನಲು ||
ಬ್ರಹ್ಮವೆತ್ತಲೊ! ಮಾಯೆಯೆತ್ತಲೊ! |ಚರ್ಮದೃಷ್ಟಿಗೆ ಮಾಯೆ ತಥ್ಯವು ;|
ನಿರ್ಮಲಾತ್ಮಜ್ಞಾನದೃಷ್ಟಿಗೆ ಮಿಥ್ಯೆ ನೋಡೆಂದ || ೬ ||

ಮಗನೆ,ಮಾಯೆಯಪರಿಯ ತಿಳಿಯಲು|ನಗೆಯಲಾ!ನಾಟಕದಬೊಂಬೆಯ|
ಬಗೆಯೊಳಡಗುತ ತೋರುತಿರ್ಪುದು ಮಿಂಚಿನಂದದಲಿ ; ||
ಬೆಗಡ ಬೀರುತ ನಾಮರೂಪಿನ | ಲೊಗೆದ ಬಹುಭೇದಾವಲಂಬನ |
ಜಗದುದಯವದರಿಂದಲಾದುದು ತ್ರಿಗುಣಮಯವಾಗಿ || ೭ ||

---

೪. ಮಾಯಿಯ ದೆಸೆಯೊಳು—ಮಾಯೆಯ ದೆಸೆಯಿಂದ. ಉಸುರಬಾರದ—ಹೇಳುವದಕ್ಕಾಗದಂಥ (ವಾಕ್ಕಿಗೆ ನಿಲುಕದಂಥ). ಅತರ್ಕ್ಯವಾಗಿರ್ಪ—ಊಹಿಸುವದಕ್ಕೆ ಆಗದಿರುವ (ಮನಸ್ಸಿಗೆ ನಿಲುಕದಂಥ)

೫. ಮಂಜ—ಮಂಜನ್ನು, ಇಬ್ಬನಿಯನ್ನು. ಉಡಿಗೆಗೆ+ಅಳವಡಿಸಿ = ಉಡಿಗೆಯಾಗಿ ಮಾಡಿಕೊಂಡು.

೬. ನೆಮ್ಮಿಕೊಂಡಿಹವು— ಆಶ್ರಯಿಸಿಕೊಂಡಿರುವವು. ಚರ್ಮದೃಷ್ಟಿಗೆ—ಸ್ಥೂಲದೃಷ್ಟಿಗೆ, ವಿಚಾರವಿಲ್ಲದ ದೃಷ್ಟಿಗೆ. ತಥ್ಯವು—ಸತ್ಯವು, ನಿಜವಾದದ್ದು. ನಿರ್ಮಲಾತ್ಮಜ್ಞಾನದೃಷ್ಟಿಗೆ—ನಿರ್ಮಲವಾದ ಜ್ಞಾನವನ್ನು ಪಡೆದವರ ವಿಚಾರದೃಷ್ಟಿಗೆ.

೭. ಬಗೆಯೊಳ್—ರೀತಿಯಿಂದ. ಬೆಗಡ—ಬೆಡಗನ್ನು. ಬಹುಭೇದಾವಲಂಬನಜಗದ—ಬಹಳ ಭೇದಗಳನ್ನು ಅವಲಂಬಿಸಿಕೊಂಡಿರುವ ಜಗತ್ತಿನ.

ಶುದ್ಧವಾದದ್ವೈತಬ್ರಹ್ಮವ । ದಿದ್ದುದಿದ್ದಂತಿದ್ದುದಪ್ರತಿ ।
ಬದ್ಧತೇಜಃಪುಂಜ ; ತಾನೇ ಸ್ವಪ್ರಕಾಶವದು ; ॥
ಸಿದ್ಧವಾಗಿದಿರಿಟ್ಟು ತೋರು । ತ್ತಿದ್ದ ಪರಿಯಲಿ ತನಗೆ ತಾನೇ ।
ವೇದ್ಯವೆಂಬಭಿಸಂಧಿಯಲಿ ಪುಟ್ಟಿದುದು ಪುಸಿಮಾಯೆ ॥ ೮ ॥

ಕೋಟಿಸೂರ್ಯಪ್ರಭೆಯ ಮೀರಿದ । ಸಾಟಿಯಿಲ್ಲದ ಬ್ರಹ್ಮ ತೇಜಃ ।
ಕೂಟದ ಮಹಾಲಹರಿ ; ಮಾಯಾನಾಟಕಿಯ ಹೊಳಹು ॥
ಪಾಟಿಯಲ್ಲದ ನೋಡಿ ತಿಳಿದರೆ । ಬೂಟಕವು ಭ್ರಮಿತರಿಗೆ ಖಡ್ಗದ ।
ನೀಟವಹ ಹೊಗರಂತೆ ; ಚಿಜ್ಜ್ಯೋತಿಯ ವಿಲಾಸವದು ॥ ೯ ॥

ನೆಲ್ಲ ಬೀಜದೊಳೊಗೆದು ತೋರುವ । ಜಳ್ಳಿನಂದದಿ ತಿಳಿಯೆ ನಿಜವಾ।
ಗುಳ್ಳ ಬ್ರಹ್ಮದೊಳಿಲ್ಲವೆನಿಸುವ ಸುಳ್ಳಿನೀ ಮಾಯೆ ; ॥
ಹೊಳ್ಳು ತನ್ನೊಳಗೆಲ್ಲ ನೋಡಲು ; । ಗುಳ್ಳೆಯುದಕದೊಳುದಿಸಿದಂದದಿ, ।
ಸಿಳ್ಳುಗಣ್ಣಿಗೆ ಹಗಲು ಮಂಜಾಗೆಸೆದು ತೋರ್ಪಂತೆ ॥ ೧೦ ॥

ಪುಸಿಯೆನಿಪ ಮಾಯಾಪ್ರಪಂಚವ । ದೆಸೆವ ಬ್ರಹ್ಮದಿ ತೋರಿತೆಂತೆನೆ ।
ಬಿಸಿಲದೊರೆ ಸೂರ್ಯನ ಮರೀಚಿಯೊಳುದಿಸಿ ತೋರ್ಪಂತೆ ; ।

---

೮. ಅಪ್ರತಿಬದ್ಧತೇಜಃಪುಂಜ--ಯಾವದರಿಂದಲೂ ತಿರಸ್ಕರಿಸುವದಕ್ಕಾಗದಂಥ ಪ್ರಕಾಶದ ಸಮೂಹ. ತನಗೆ ತಾನೇ ವೇದ್ಯವೆಂಬಭಿಸಂಧಿಯಲಿ—ತನ್ನನ್ನು ತಾನೆ ಇದಿರಿಟ್ಟಂತೆ ನೋಡಬೇಕೆಂದು ಮನಸ್ಸು ಮಾಡಿದ ಕಾಲದಲ್ಲಿ. (ತನಗೆ ತಾನು ವೇದ್ಯವಾಗುವದು ಆಗದ ಮಾತು. ಅವರೂ ವೇದ್ಯವಾಗುವದಕ್ಕೆ ಎಂದರೆ ಇದಿರಾಗಿ ಕಾಣುವದಕ್ಕೆ ಪ್ರಯತ್ನ ಪಟ್ಟರೆ ಹಾಗೆ ಕಾಣುವದು ಸುಳ್ಳಾದ ರೂಪವೇ ಆಗಿರಬೇಕು. ನೋಡುವವನಾದ ತಾನು ಇದ್ದಂತೆ ಇರಲೇಬೇಕಾಗುವದರಿಂದ ಕಾಣುವದೆಲ್ಲ ಮಾಯಿಕವೆಂದೇ ಅರಿಯಬೇಕು).

೯. ಲಹರಿ—ಪ್ರವಾಹ. ಮಾಯಾ...ಪಾಟಿಯಲ್ಲ—ಮಾಯೆಯೆಂಬ ನಾಟಕಿಯ ಹೊಳಪು (ಬ್ರಹ್ಮಕ್ಕೆ) ಸಮನಲ್ಲ. ಬೂಟಕವು—(ಕತ್ತಿಯನ್ನು ಝಳಪಿಸಿದಾಗ ಅದರ ಹೊಳಪೇ ಒಂದು ಕತ್ತಿಯಂತೆ ಕಾಣುವದಷ್ಟೆ. ಅದು ಹೇಗೆ ಸುಳ್ಳೊ ಹಾಗೆ) ಸುಳ್ಳು. ಚಿಜ್ಜ್ಯೋತಿಯ ವಿಲಾಸವ—ಮಾಯೆಯ ಹೊಳಪು ಕೂಡ ಚಿಜ್ಜ್ಯೋತಿಯ ವಿಲಾಸವೆ.

೧೦. ಹೊಳ್ಳು—ಒಳಗೆ ತಿರುಳಿಲ್ಲದ್ದು.

ಮುಸುಕಿಕೊಂಡಿಹ ಧೂಮವಗ್ನಿಯೊ। ಳೆಸೆದುತೋರ್ಪಂತುಷ್ಣ ನದಿಯೊಳು।
ಪಸರಿಸಿರ್ಪಂದದಲಿ ರಂಜಿಸಿತಸಮತೇಜದಲಿ ॥ ೧೧ ॥

ಜಗದೊಳುತ್ಪಾತಗಳು ನಾನಾ । ಬಗೆಯೊಳುದಿಸುವ ತೆರದಿ, ನೋಡಲು।
ಗಗನದಲಿ ಗಂಧರ್ವನಗರಗಳೆಸೆದು ತೋರ್ಪಂತೆ, ॥
ಗಣಿತದ ಬ್ರಹ್ಮಾಂಡತಂಡಗ । ಳೊಗೆದು ಬ್ರಹ್ಮದೊಳಾದ ಪರಿಯೊಳೆ ।
ಮಗನೆ ತೋರ್ಪುವು ದಿಟಗಳಂದದಿ ಸಟೆಯ ಮಾಯೆಗಳು ॥ ೧೨ ॥

ದಾರು ದಂತಿವಿಕಾರದಂದದಿ । ತೋರಿತಲ್ಲದೆ ದಂತಿಯುಳಿದಾ ।
ದಾರುವನು ತಾ ಬೇರೆ ತೋರಿತೆ ? ನಾಮರೂಪಗಳ ॥
ತೋರಿಕೆಯ ಕಲ್ಪಿತವು ನಿಜವೇ ? । ದಾರುವಿನ ಪರಿ ಬ್ರಹ್ಮ ಜಗದಾ ।
ಕಾರವಾಗಿಯೆ ತೋರಿತಲ್ಲದೆ ಬೇರೆ ಜಗವಿಲ್ಲ ॥ ೧೩ ॥

ಲೋಹಮಯವಹ ಪ್ರತಿಮೆಯಾಸನ, । ವಾಹನವು, ವಸ್ತ್ರಾಭರಣ ಸ ।
ಮ್ಮೋಹವಾಗಿರ್ಪಂತೆ ತೋರ್ಪ ಸಮಸ್ತವಸ್ತುಗಳ ॥

---

೧೧. ಮರೀಚಿ—ಕಿರಣ. ಅಸಮತೇಜದಲಿ—ಬಹಳ ತೇಜೋಮಯವಾದ ಬ್ರಹ್ಮದಲ್ಲಿ.

೧೨. ಉತ್ಪಾತಗಳು—ಪರಕೆಯ ಚುಕ್ಕೆ ಮೊದಲಾದ ಅಪಶಕುನದ ಸೂಚನೆಗಳು. ಇಲ್ಲಿ ಮಾಯೆಗೆ ಉತ್ಪಾತದ ಹೋಲಿಕೆಯನ್ನು ಕೊಟ್ಟಿರುವದರಿಂದ ಮಾಯೆಗೊಳಗಾಗುವದು ಅಮಂಗಲಕರವೆಂದು ಹೇಳಿದಂತಾಯಿತು. ಮತ್ತು ಉತ್ಪಾತಗಳೂ ಗಂಧರ್ವನಗರಗಳೂ ಕಾರಣವಿಲ್ಲದೆ ತೋರುವಂತೆ ಮಾಯೆಯ ಕಾರ್ಯವೂ ಕಾರಣವಿಲ್ಲದೆ ತೋರುವದೆಂದು ತಾತ್ಪರ್ಯ. ಒಗೆದು—ಹುಟ್ಟಿ. ಬ್ರಹ್ಮದೊಳಾದ ಪರಿಯೊಳೆ—ಬ್ರಹ್ಮದಿಂದ ಹುಟ್ಟಿತೆಂಬಂತೆಯೇ (ಅಂದರೆ ಬ್ರಹ್ಮದಿಂದ ಹುಟ್ಟಿಲ್ಲವೆಂದರ್ಥ).

೧೩. ದಾರು—ಕಟ್ಟಿಗೆಯು. ದಂತಿವಿಕಾರದಂದದಿ—ಆನೆಯ ಆಕಾರದ ಹಾಗೆ ಈ ಉದಾಹರಣೆಯನ್ನು ಉಪಯೋಗಿಸಿ ಶ್ರೀ ಸದಾಶಿವಬ್ರಹ್ಮರು ಅದ್ವೈತತಾರಾವಳಿಯಲ್ಲಿ ಹೇಳಿರುವದೇನೆಂದರೆ :—“ದಂತಿನಿ ದಾರುವಿಕಾರೇ । ದಾರು ತಿರೋಭವತಿ ಸೋऽಪಿ ತತ್ರೈವ ॥ ಜಗತಿ ತಥಾ ಪರಮಾತ್ಮಾ । ಪರಮಾತ್ಮನ್ಯಪಿ ಜಗತ್ತಿರೋಧತ್ತೇ”.

೧೪. ರೂಹುನಾಮುಗಳಿಲ್ಲ—ಪ್ರತಿಮೆ, ಆಸನ ಮೊದಲಾದವುಗಳ ರೂಪಗಳೂ ಹೆಸರುಗಳೂ ಎಲ್ಲ (೩೪+) ಅವನು—ಆ ಪ್ರತಿಮೆ, ಆಸನ ಮೊದಲಾದವುಗಳನ್ನು

ರೂಹುನಾಮುಗಳೆಲ್ಲ ಮಾಯಾ । ಮೋಹಮಾತ್ರಗಳೆಂದು ತಿಳಿಯವ ।
ನೂಹಿಸಲು ಬೇರಿಲ್ಲ ; ಸರ್ವವು ಬ್ರಹ್ಮಮಯವೆಂದ ॥ ೧೪ ॥

ಬೆಲ್ಲದಲಿ ಬಹುವಿಧದ ಮಾಟದ । ಬಿಲ್ವ, ಪನಸ, ರಸಾಲ, ದಾಡಿವು, ।
ನೆಲ್ಲಿ ಮೊದಲಾದಖಿಲಫಲಗಳ ನಾಮರೂಪುಗಳು ॥
ಸೊಲ್ಲುಮಾತ್ರಗಳೈಸೆ ! ಸವಿಯಲ । ವೆಲ್ಲ ಮಾಧುರ್ಯಂಗಳಾ ಪರಿ ।
ಯೆಲ್ಲವಿವು ಪರಬೊಮ್ಮವಲ್ಲದೆ ಬೇರೆ ಜಗವಿಲ್ಲ ॥ ೧೫ ॥

ತಂತುವೇ ಪಟ, ಮೃತ್ತಿಕೆಯೆ ಘಟ । ವಂತು ಜಲವೆ ತರಂಗವಾ ಪರಿ ।
ಯೆಂತೆ ಸ್ವರ್ಣವೆ ವಿವಿಧಭೂಷಣವಾಗಿ ತೋರ್ಪಂತೆ ॥
ಅಂತವಿಲ್ಲದಪಾರಬ್ರಹ್ಮದೊ । ಳಿಂತು ಕಾರಣಕಾರ್ಯವೆಂಬುದು ।
ಭ್ರಾಂತಿಯಲ್ಲದೆ ಬೇರೆ ತೋರ್ಪ ಪ್ರಪಂಚವಿಲ್ಲೆಂದ ॥ ೧೬ ॥

ಬಣ್ಣವದು ಚಿನ್ನದಲಿ, ಪರಿಮಳ । ದುನ್ನತಿಕೆ ಪುಷ್ಪದಲಿ, ಮಧುರತೆ ।
ನಿರ್ಣಯಿಸೆ ಕಬ್ಬಿನಲಿಯೆಂತಿಹುದಂತೆ ಸರ್ವದಲಿ ॥
ಪೂರ್ಣವಾಗಿಯೆ ತೋರುತಿಹ ಚೈ । ತನ್ಯವಹ ಪರಬೊಮ್ಮದಲ್ಲಿಯೆ ।
ಭಿನ್ನವೆಲ್ಲವು ಚಿತ್ರಿತಲತಾಪತ್ರದಂತಿಹವು ॥ ೧೭ ॥

ಬೀಜಪಂಚಕದಿಂದಲೀ ಜಗ । ಭೂಜದಂದದಲಾಗಲಾ ನಿಜ ।
ಬೀಜವಹ ಬ್ರಹ್ಮದಲಿ ಜನಿಸಿತು ಬೀಜಪಂಚಕವು ;॥

---

ಬೇರಿಲ್ಲ—ಲೋಹಕ್ಕಿಂತ ಬೇರೆ ಇಲ್ಲ. ಸರ್ವವು ಬ್ರಹ್ಮಮಯವೆಂದ—"ಸರ್ವಂ ಖಲ್ವಿದಂ ಬ್ರಹ್ಮ" (ಶ್ರು.)

೧೫. ಪನಸ—ಹಲಸು. ರಸಾಲ—ಮಾವು. ದಾಡಿವು—ದಾಳಿಂಬೆ. ಸೊಲ್ಲು ಮಾತ್ರಗಳು—ಮಾತುಮಾತ್ರದವುಗಳು. ಎಲ್ಲವಿವು—ಈ ಜಗತ್ತಿನ ಬಗೆಬಗೆಯ ಭೇದಗಳೆಲ್ಲ.

೧೬. ತಂತು—ನೂಲು. ಪಟ—ಬಟ್ಟೆ. ಮೃತ್ತಿಕೆ—ಮಣ್ಣು. ಘಟ—ಗಡಿಗೆ. ಅಂತವಿಲ್ಲದ+ಅಪಾರಬ್ರಹ್ಮ. ಕಾರ್ಯಕಾರಣವೆಂಬುದು—ಜಗತ್ತು ಕಾರ್ಯವೆಂದೂ ಬ್ರಹ್ಮವು ಕಾರಣವೆಂದೂ ಹೇಳುವದು.

೧೮. ಬೀಜಪಂಚಕ—ಪೃಥ್ವಿ, ಜಲ, ಅಗ್ನಿ, ವಾಯು, ಆಕಾಶ—ಈ ಐದು ಭೂತಗಳ ಸೂಕ್ಷ್ಮತನ್ಮಾತ್ರೆಗಳು. ಭೂಜದಂದದಲಿ—ಮರದಂತೆ ವಿಸ್ತಾರವಾಗಿ. ನಿಜಬೀಜವಹ ಬ್ರಹ್ಮದಲಿ—"ಯಚ್ಚಾಪಿ ಸರ್ವಭೂತಾನಾಂ ಬೀಜಂ ತದಹಮರ್ಜುನ" ಎಂಬ

ಸೋಜಿಗವೆ? " ಯದ್ಬೀಜತತ್ಫಲ " । ನೈಜವಾಗಿರೆ ಜೀವಲೋಕವು ।
ತೇಜಿಸುವ ಪರಮಾತ್ಮನಲ್ಲದೆ ಬೇರೆ ಜಗವಿಲ್ಲ ॥ ೧೮ ॥

ಕಟ್ಟುಗೂಳನು ಹೊತ್ತು, ಮಾನವ। ಬಟ್ಟೆಯಲಿ ಕಡುಬಳಲಿ, ಕಡೆಯಲಿ।
ಹೊಟ್ಟೆಯೊಳಗದನಿಟ್ಟು, ಶ್ರಮವನು ಬಿಟ್ಟು ಕಳೆವಂತೆ ॥
ನೆಟ್ಟನಿದು ತಾನೆಂಬ ಭೇದದ । ದೃಷ್ಟಿಯಳಿದೇಕತ್ವವಾಗಲು ।
ಕಷ್ಟಿಯಲ್ಲದೆ ಸುಖಿಯೆ ಆಗಿಹನೆಂದನಾ ಮುನಿಪ ॥ ೧೯ ॥

ಮಿಥ್ಯವಹ ಮಾಯಾಪ್ರಪಂಚವೆ । ತಥ್ಯವಾಗಿಯೆ ತೋರಿ ದೃಶ್ಯವೆ ।
ನುತ್ತ ಹೇಳಿಸಿಕೊಂಬುದದಕಾಶ್ರಯವೆನಿಪ ಸಾಕ್ಷಿ ॥
ಉತ್ತಮನೆ, ದೃಕ್ಕೆನಿಸಿಕೊಂಬುದಿ । ವಿತ್ತೆರನು ಪುಸಿ ; ದೃಕ್ಕು ದೃಶ್ಯಗ ।
ಳಿತ್ತಣವು ! ಸತ್ಯಾದ್ವಯಾನಂದೈಕ ಬ್ರಹ್ಮದಲಿ ॥ ೨೦ ॥

ತನ್ನ ನೆಳಲನು ಕಂಡು ಬಾಲಕ । ನನ್ಯರಕ್ಕಸಿಯೆಂದು ಬೆದರುವ ।
ನಿರ್ಣಯದಿ ತನ್ನಲ್ಲಿ ಕಲ್ಪಿತವಾದ ಮಾಯೆಯಲಿ ॥
ಭಿನ್ನವೆಂಬುದು ಭ್ರಮೆಯ ಹೊರತಿ। ನ್ನನ್ಯವಹುದೇನುಂಟು ? ತಿಳಿಯಲು।
ಪೂರ್ಣವಹ ಪರಬೊಮ್ಮವಲ್ಲದೆ ಬೇರೆ ಜಗವಿಲ್ಲ ॥ ೨೧ ॥

---

ಗೀತೋಕ್ತಿಯಂತೆ ನಿಜವಾದ ಬೀಜಸ್ವರೂಪವಾದ ಬ್ರಹ್ಮದಿಂದ. "ಯದ್ಬೀಜ ತತ್ಫಲ"— ಬೀಜವು ಎಂಥದ್ದೋ ಫಲವೂ ಅಂಥದ್ದೆ. ಪರಮಾತ್ಮನು ಬೀಜವಾಗಿಯೂ ಜಗತ್ತು ಅದರ ಫಲವಾಗಿಯೂ ಇರುವದರಿಂದ ಜಗತ್ತು ಪರಮಾತ್ಮನೇ ಹೊರತು ಬೇರೆ ಅಲ್ಲ ತೇಜಿಸುವ— ಹೊಳೆಯುವ.

೧೯. ಕಟ್ಟುಗೂಳನು—ಬುತ್ತಿಯ ಗಂಟನ್ನು. ಬಟ್ಟೆಯಲಿ--ದಾರಿಯಲ್ಲಿ. ಇದು ತಾನೆಂಬ ಭೇದದ—ಇದು ಬೇರೆ, ತಾನು ಬೇರೆ-ಎಂಬ ಭೇದದ.

೨೦. ಇವು+ಇತ್ತೆರನು— ಇವೆರಡು ರೀತಿಗಳೂ.

೨೧. ಭಿನ್ನವೆಂಬುದು—ಬೇರೆ ಬೇರೆ ಏನೇನೋ ಇರುವದೆಂಬುದು. ಬಾಲಕನು ತನ್ನ ನೆರಳನ್ನು ನೋಡಿ ರಕ್ಕಸಿಯೆಂದು ಬೆದರುವ ಉದಾಹರಣೆಯನ್ನು ಯೋಗವಾಸಿಷ್ಠಕಾರರು ಬಹುಕಡೆ ಉಪಯೋಗಿಸಿದ್ದಾರೆ.

೨೨. ವಿದ್ಯೆ....ಸುಜ್ಞಾನ— ವಿದ್ಯೆಯೂ ಅವಿದ್ಯೆಯೂ ಜ್ಞಾನಗಳೆ. ಅದ್ವಯವು-

ವಿದ್ಯೆಯೆಂಬುದುದವಿದ್ಯೆಯೆಂಬುದು । ಸಿದ್ಧವಹ ಸುಜ್ಞಾನವೆಂತೆನೆ ।
ಬುದ್ಧಿವಂತನೆ ಶುಕ್ತಿರಜತಜ್ಞಾನದಂದದಲಿ ॥
ಅದ್ವಯವು ದೃಗ್ವೃತ್ತಿರೂಪದ । ಲಿದ್ದು ತೋರುವ ಭ್ರಾಂತಿಯಲ್ಲದೆ ।
ನಿರ್ಧರಿಸಲೆರಡುಂಟೆ ? ನಿಜದೊಳಗೊಂದೆ ಕೇಳೆಂದ ॥ ೨೨ ॥

ಮಗನೆ ವಿದ್ಯಾವಿದ್ಯೆಯೆಂಬೀ । ಬಗೆಯೆ ಮಾಯಾರೂಪು; ಮಾಯೆಯು।
ನಗೆಯಲಾ! ಅವಿಚಾರಸಿದ್ಧ ; ವಿಚಾರಿಸಿದೊಡಿಲ್ಲ ; ॥
ವಿಗಡವೆನಿಪಾ ಮಾಯೆ ತತ್ಕಾ । ರ್ಯಗಳು ಸಹಿತಲವೆಲ್ಲ ತಿಳಿವುದು ।
ನಿಗಮವಿದ, ಸುಜ್ಞಾನವದು ತಾನೇಪರಬ್ರಹ್ಮ ॥ ೨೩ ॥

ಕಾಮಿನೀಮಯವಾಗಿಹುದು ಜಗ । ಕಾಮುಕಗೆ ಮಿಗಿಲಾಗಿ; ಲುಬ್ಧಗೆ ।
ಪ್ರೇಮದಿಂ ಧನಮಯವು ಸರ್ವವು; ತಿಳಿಯೆ ಬ್ರಹ್ಮವನು ॥
ಸಾಮರಸ್ಯವು ಸಕಲವೆಲ್ಲವು; । ನಾಮರೂಪಿನ ಭ್ರಮೆಯಳಿದ ನಿ ।
ಸ್ಸೀಮ ನಿಜಸುಖಧಾಮ ನಿರುಪಾಧಿಕಪರಬ್ರಹ್ಮ ॥ ೨೪ ॥

ಒಂದು ಲೆಕ್ಕದ ಮುಂದೆ ಬಿಂದುವ । ನೊಂದನಿಡೆ ಹತ್ತಾದುದಂತಹ ।
ಬಿಂದು ಹತ್ತರಲರ್ಬುದವೆನಿಪುದೊಂದೆ ಸಂಖ್ಯೆಯದು; ॥
ಬಿಂದುವೃದ್ಧಿಯೊಳೊಂದನಂತವು; । ಬಿಂದುವೆನಲವ್ಯಕ್ತವದು ಕೆಡ ।
ಲೊಂದು ನಿಲುವುದದದ್ವಯಾಮೃತಸಿಂಧು ಕೇಳೆಂದ ॥ ೨೫ ॥

---

ಎರಡನೆಯದಿಲ್ಲದ ಬ್ರಹ್ಮವು. ದೃಗ್ವೃತ್ತಿರೂಪದಲಿ—ದೃಷ್ಟಿಯ ವೃತ್ತಿಯ ರೂಪದಿಂದ (ಕಪ್ಪೇಚಿಪ್ಪಿನ ಬೆಳ್ಳಿಯಂತೆ ಎರಡಾಗಿ ತೋರುವದೇ ಹೊರತು ನಿಜವಾಗಿರುವದು ಒಂದೇ.)

೨೩. ಮಾಯೆ ತತ್ಕಾರ್ಯಗಳು ಸಹಿತಲವೆಲ್ಲ—ಮಾಯೆಯನ್ನೂ ಅದರ ಕಾರ್ಯವಾದ ಜಗತ್ತನ್ನೂ. ನಿಗಮವಿದ—ವೇದಾರ್ಥವನ್ನು ತಿಳಿದ ಶುಕನೆ.

೨೪. ಸಾಮರಸ್ಯವು— ಎಲ್ಲವೂ ಒಂದೇ ಆಗಿ ಕಾಣುವದು. ನಿಜಸುಖಧಾಮ—ಶಾಶ್ವತವಾದ ಸುಖದ ಸ್ಥಾನವು.

೨೫. ಒಂದು+ಅನಂತವು—(ಸೊನ್ನೆ ಹೆಚ್ಚಿದರೆ) ಒಂದು ಎಂಬ ಸಂಖ್ಯೆಯು ಲೆಕ್ಕವಿಲ್ಲದಷ್ಟಾಗುವದು. ಅವ್ಯಕ್ತ—(ಬೆಲೆಯು) ಕಾಣಬರದೆ ಇರುವದು. (ಈ ಮಾತಿನ ಪ್ರಯೋಗದಿಂದ ೪ ಅ. ೧೦ ಪ. ದಲ್ಲಿರುವ ಅವ್ಯಕ್ತದ ಉತ್ಪತ್ತಿಯ ವಿಚಾರವು ಸೂಚಿತವಾಗುವದು. ಅವ್ಯಕ್ತವೆಂದರೆ ಮಾಯೆ. ಸೊನ್ನೆಯ ಸಂಬಂಧದಿಂದ

ಬಾಯ ಮಾತಡಗಿದರೆ ಮಾಯೆಗೆ। ಪಾಯವಹುದಾ ಮಾಯೆಯಳಿಯಲು।
ಬೀಯವಹುದೈ ಮನ; ಮನಸ್ಸಿನ ನೆನಹು ಕೆಟ್ಟಾಗ ॥
ಈಯಶೇಷವನದಡಗೆ ನಿಜನಿ। ರ್ಮಾಯ ನಿತ್ಯಾನಂದ ಸಚ್ಚಿ।
ತ್ಕಾಯವಹ ಪರಬೊಮ್ಮವದ್ವಯವಾಗಿ ಮೆರೆದಿಹುದು ॥ ೨೬ ॥

ಪುಸಿಯ ಮಾಯಾಕಾರ್ಯವೆನಿಸಿಹ। ವಿಷಮವಹ ಮನಸಿನ ವಿಕಲದ।
ಲೆಸೆದು ತೋರುವ ನಾಮರೂಪಿನ ವಿಸರವಹ ಭೇದ ॥
ಸಸಿನೆ ಗುರುಮುಖದಿಂದ ತಿಳಿಯಲು। ನಸಿದು ಪೋಪುದು ಸ್ವಪ್ನದಂದದಿ।
ಮಿಸುಪ ತೇಜೋರಾಶಿಯಿರ್ಪುದೇಕರೂಪದಲಿ ॥ ೨೭ ॥

ನಿದ್ರೆಯಲಿ ಮನವಿಲ್ಲದಿರುತಿರೆ। ಶುದ್ಧವಾದಾನಂದ ತೋರ್ಪುದು;।
ನಿದ್ರೆಯಳಿಯಲು ಮರಳಿ ಮನ ಸಂಸಾರಿಯಾಗಿಹುದು; ॥
ನಿರ್ಧರಿಸಲಾ ಮನದಿ ತೋರು। ತ್ತಿರ್ದ ಸುಖದುಃಖಗಳು ಮನವಳಿ।
ದಿರ್ದ ವೇಳೆಯೊಳಿಲ್ಲ; ಮನ ಕೆಡಲದ್ವಯಾನಂದ ॥ ೨೮॥

ಕೃತ್ರಿಮದ ಸರ್ಪವನು ತೊಲಗಿಸ। ಲುತ್ತಮದ ಮಂತ್ರೌಷಧಂಗಳ।
ಬಿತ್ತರಿಸಲದರಿಂದಲಡಗದವೋಲು ಪುಸಿಮಾಯೆ ॥

---

ಒಂದೆಂಬುದು ಅನಂತವಾಗುವಂತೆ ಮಾಯೆಯ ಸಂಬಂಧದಿಂದ ಬ್ರಹ್ಮವು ಅನಂತವಾಗುವದೆಂದೂ ಸೊನ್ನೆಯನ್ನು ತೆಗೆದರೆ ಒಂದೇ ಉಳಿಯುವಂತೆ ಮಾಯಾಸಂಬಂಧವನ್ನು ಬಿಟ್ಟರೆ ಬ್ರಹ್ಮವು ಅದ್ವೈತವಾಗಿರುವದೆಂದೂ ಹೇಳಿದಂತಾಯಿತು).

೨೬. ಬಾಯ....ಗಪಾಯವಹುದು— ಮಾತಾಡುವದನ್ನು ನಿಲ್ಲಿಸಿಬಿಟ್ಟರೆ ಮಾತಿನ ಮೂಲಕವಾಗಿ ಬೆಳೆಯುವಂಥ ಮಾಯೆಗೆ ಹಾನಿಯಾಗುವದು. ಬೀಯವಹುದು—ನಾಶವಾಗುವದು.

೨೭. ವಿಷಮವಹ—ವಿಕಾರವಾಗುವ ಸ್ವಭಾವದ. ವಿಸರ—ಸಮೂಹ. ಭೇದ—ಈ ಕರ್ತೃಪದವನ್ನು 'ನಸಿದು ಪೋಪುದು' ಎಂಬ ಕ್ರಿಯಾಪದಕ್ಕೆ ಅನ್ವಯಿಸಿಕೊಳ್ಳಬೇಕು. ಸಸಿನೆ—ನೆಟ್ಟಗೆ.

೨೮. ಮನ ಕೆಡಲು—ಮನಸ್ಸು ನಾಶವಾದರೆ ಎರಡನೆಯದಿರುವದಿಲ್ಲವೆಂಬರ್ಥದಲ್ಲಿ ಮಾಂಡೂಕ್ಯಕಾರಿಕೆಯು "ಮನಸೋಹ್ಯಮನೀಭಾವೇ ದ್ವೈತಂ ನೈವೋಪಲಭ್ಯತೇ" ಎಂದು ಹೇಳಿದೆ.

೨೯. ಕೃತ್ರಿಮದ—ಬರೀ ತೋರಿಕೆಯ. ಬಿತ್ತರಿಸಲು—ವಿಸ್ತರಿಸಲು.

ಸತ್ಯವಹ ಸುಜ್ಞಾನದಿಂದಲಿ । ಮಿಥ್ಯವಾಗುತ ಕೆಡುವದಲ್ಲದೆ ।
ಮತ್ತೆ ಕೋಟಿವುಪಾಯದಿಂದಲಿ ಕೆಡುವುದಿಲ್ಲೆಂದ ॥ ೨೯ ॥

ಕೆಂಡ ಮನೆಯೊಳಗಿರಲು ಕತ್ತಲೆ । ಯಂಡಲೆವುದಕ್ಷಿಗಳನಂತಾ ।
ಕೆಂಡದಲಿ ದೀವಿಗೆಯ ಬೆಳಗಲು ತಿಮಿರವಳಿವಂತೆ ॥
ಪಂಡಿತನೆ, ಪರಬೊಮ್ಮವಿದ್ದೂ । ಚಂಡವಾಯೆ ವಿಜೃಂಭಿಸುತ್ತಲ ।
ಖಂಡವಹ ಸುಜ್ಞಾನದೀಪವ ಬೆಳಗೆ ಲಯವಹುದು ॥ ೩೦ ॥

ಮಣ್ಣ ಬೆನಕಗೆ ಮಜ್ಜನದೊಳೀ । ತನ್ನ ಮರಣವದೆಂಬ ಗಾದೆಯ ।
ಲಿನ್ನು ಮಾಯೆಗೆ ತನ್ನ ಮೂಲವನರಿಯೆ ಲಯವಹುದು ; ॥
ಮುನ್ನಲಿಲ್ಲವದಾತ್ಮನಿಂ; ತಾ । ತನ್ನ ತಿಳಿಯಲು ಮೇಲೆ ತೋರದು ; ।
ನನ್ನಿ ನಡುವಿದು ಗುಣಫಣಿಯವೊಲು ಭ್ರಾಂತಿಜನ್ಯಕವು ॥ ೩೧ ॥

'ಮಾ' ಎನೆ ನಿಷೇಧಾರ್ಥವಪ್ಪುದು; । ಯೇಯೆನಲದಿಂತಾವಳೊಬ್ಬಳು।
ಯಾಯೆರಡು ವರ್ಣದಲಿ ಮಾಯೆಯದಿಲ್ಲವೆಂದರ್ಥ ; ॥
ಮಾಯೆಯೆಂಬೀ ಶಬ್ದ ತಾನೇ। ಮಾಯೆಯದು ಪುಸಿಯೆಂದು ನುಡಿಯಲು।
ಮಾಯೆಗೆಂತು ಪ್ರತಿಷ್ಠೆ? ಸರ್ವವು ಬ್ರಹ್ಮಮಯವೆಂದ ॥ ೩೨ ॥

---

೩೦. ಅಂಡಲೆವುದು—ಸುತ್ತಿಕೊಳ್ಳುವದು. ತಾತ್ಪರ್ಯವೇನೆಂದರೆ:-ಮಾಯೆಯು ಬ್ರಹ್ಮವನ್ನು ನಿಜವಾಗಿ ಆವರಿಸಿಲ್ಲ. 'ಅದು ಇದೆ' ಎಂಬ ತಪ್ಪು ತಿಳಿವಳಿಕೆಯನ್ನು ಅದಿಲ್ಲವೆಂಬ ಸುಜ್ಞಾನದೀಪವು ಎಂದರೆ ಸರಿಯಾದ ತಿಳಿವಳಿಕೆಯು ಹೋಗಲಾಡಿಸೀತೇ ಹೊರತು ನಿಜವಾಗಿರುವ ಬ್ರಹ್ಮಕ್ಕೂ ಇಲ್ಲದ ಮಾಯೆಗೂ ಯಾವ ಸಂಬಂಧವೂ ಇಲ್ಲವೆಂದು ಭಾವ. ಮಿಥ್ಯಾವಸ್ತು ಸತ್ಯವಸ್ತುವಿಗೆ ವಿರೋಧವಲ್ಲ ; ಮಿಥ್ಯಾವಸ್ತುವಿನ ತೋರಿಕೆಯು ಸತ್ಯವಸ್ತುವಿನ ಜ್ಞಾನಕ್ಕೆ ವಿರೋಧ.

ಮೂಲವನು—(ಹಾವಾಗಿ ತೋರುತ್ತಿರುವದಕ್ಕೆ ಹೇಗೆ ಹಗ್ಗವೇ ಮೂಲವೋ ಹಾಗೆ) ಮಾಯೆಯ ಮೂಲವಾದ ಬ್ರಹ್ಮವನ್ನು. ಮುನ್ನಲಿಲ್ಲವದಾತ್ಮನಿಂದಲಿ-ಅದು ಆತ್ಮಕ್ಕಿಂತ ಮೊದಲಿರಲಿಲ್ಲ. ತಾ ತನ್ನ ತಿಳಿಯಲು—ಮನುಷ್ಯನು ತನ್ನ ಸ್ವರೂಪವನ್ನು ತಾನು ತಿಳಿದುಕೊಂಡರೆ. ನನ್ನಿ—ನಿಜ. ನಡುವೆ+ಇದು. ಗುಣಫಣಿಯವೊಲು—ಹಗ್ಗವು ಹಾವಾಗಿ ತೋರುವ ಹಾಗೆ.

೩೨. 'ಮಾ' ಎನೆ...ವಪ್ಪುದು—ಸಂಸ್ಕೃತದ 'ಮಾ' ಎಂಬ ಮಾತಿಗೆ 'ಇಲ್ಲ' ವೆಂಬರ್ಥ. ಯೇಯೆನ....ಳೊಬ್ಬಳು—ಯೇ ಯೆಂಬುವದು ಸಂಸ್ಕೃತದ

ಎಲೆಲೆ ಮಾಯಾದೇವಿ, ಎನ್ನನು । ಬಳಲಿಸುವೆ ಹೋಗೆನಲು ಬ್ರಹ್ಮವ ।
ಡೆಲೆ ವಿಭುವೆ, ನೀ ಪೂರ್ಣನಾಗಿರೆ ಹೋಗಲೆಡೆಯೆಲ್ಲಿ ? ॥
ತಿಳಿದು ನೋಡಲು ರಜ್ಜುಭುಜಗನ । ವೊಲು ಕಣಾ ನಿನ್ನಲ್ಲಿ ಕಲ್ಪಿತ ।
ಹೊಳೆವುತಳಿವುತಲಿರ್ಪುದೆನಗದು ಸಹಜವಾಗಿಹುದು ॥ ೩೩ ॥

ಏನನೆಂಬೆನು ಮಗನೆ, ಮಾಯಾ। ಮಾನಿನಿಯ ಮಹಿಮೆಯನು ತನ್ನನು।
ತಾನರಿಯದಂದದಲಿ ಮರವೆಯ ತೆರೆಯೊಳಡಗಿಸಿತು; ॥
ಜ್ಞಾನವೆಂಬೀ ಲೋಚನವನ । ಜ್ಞಾನವೆಂಬೀ ತೆರೆ ಮುಸುಕಿ ಚಿ ।
ದ್ಭಾನುವಹೆ ತಾನೆಂಬ ತನು ಕಾಣಿಸದಲಾ! ಎಂದ ॥ ೩೪ ॥

ಕೆಲರು ಮೂಲಪ್ರಕೃತಿಯೆಂಬರು;। ಕೆಲರು ವೈಷ್ಣವಮಾಯೆಯೆಂಬರು ;।
ಕೆಲರು ಪೇಳ್ವರು ಯೋಗನಿದ್ರಾ ರೂಪಿಣಿಯದೆಂದು; ॥
ಕೆಲಬರೀಶ್ವರಶಕ್ತಿಯೆಂಬರು; । ಕೆಲರು ಕಾರಣಳೆಂದು ಮಾಯೆಯ ।
ಹಲವುಪರಿಯಹ ಹೋಲಿಕೆಯೊಳದ ಹೇಳುತಿಹರೆಂದ ॥ ೩೫ ॥

ಮಾಯೆಯನು ಕೊಂಡೇನು ಕೆಲಸ? ತ।ದೀಯಗುಣಸಂಬಂಧತತ್ತ್ವನಿ।
ಕಾಯಸರ್ಗಸ್ಥಿತಿಲಯಂಗಳ ಕೊಂಡು ಫಲವೇನು ? ॥
ಈಯಶೇಷವ ನೇತಿಗಳೆದುಳಿ । ದಾ ಯಥಾರ್ಥಸ್ವಪ್ರಕಾಶವೆ ।
ಕಾಯವಾದರೆ ಸಾಲದೇ ? ಮಿಕ್ಕುದರೊಳಿನ್ನೇನು ? ॥ ೩೬ ॥

---

'ಯಾ' ಎಂಬ ಮಾತಿನ ತದ್ಭವ. 'ಯಾ' ಎಂದರೆ ಇಂಥ ಯಾವಳೊಬ್ಬಳು ಎಂದರ್ಥ. (ಮಾಯಾ ಎಂದರೆ ಯಾವಳು ಇಲ್ಲವೊ ಅವಳೆಂದರ್ಥ. ಎಂದರೆ ಮಾಯೆಯೆಂಬುದು ಇಲ್ಲವೆಂದು ತಾತ್ಪರ್ಯ). ಸರ್ವವು ಬ್ರಹ್ಮಮಯ—" ಸರ್ವಂ ಖಲ್ವಿದಂ ಬ್ರಹ್ಮ "–ಶ್ರುತಿ

೩೩. ಕಲ್ಪಿತ–ನಾನು (ನಿನ್ನಲ್ಲಿ) ಹುಟ್ಟುಗಟ್ಟದವಳಾಗಿರುವವಳು. ಹೊಳೆವುತ+ಅಳಿವುತ--ತಾನೊಬ್ಬಳಿರುವ ಹಾಗೆ ಕಾಣಿಸಿಕೊಳ್ಳುತ್ತಲೂ ಮತ್ತು ತೋರಿ ಹಾರುತ್ತಲೂ.

೩೪. ಲೋಚನ---ಕಣ್ಣು. ಚಿದ್ಭಾನುವಹೆ ತಾನೆಂಬ ತನು-ನಾನು ಜ್ಞಾನಸ್ವರೂಪನಾದ ಸೂರ್ಯನಾಗಿದ್ದೇನೆ ಎಂಬ ತನ್ನ ಸ್ವರೂಪವು.

೩೬. ನೇತಿಗಳೆದು—ಇದೂ ಆತ್ಮವಲ್ಲ ಇದೂ ಅತ್ಮವಲ್ಲವೆಂದು ಬಿಟ್ಟು. ಕಾಯವಾದರೆ----ತನ್ನ ಸ್ವರೂಪವೆಂದಾದರೆ.

ಇಂತು ಮಾಯೆಯ ಪರಿಯನೆಲ್ಲವ। ಭ್ರಾಂತಿಯೆಂದೇ ತಿಳುಹಿ ಮುನಿಪತಿ।
ಯಂತವಿಲ್ಲದ ಸುಖವದದ್ವಯವೆಂದು ಶುಕಮುನಿಗೆ ||
ಸಂತಸದಿ ಬೋಧಿಸಲು ಚಿತ್ತದ । ಚಿಂತೆಯಳಿದು ಸದಾನುಭವವಿ ।
ಶ್ರಾಂತಸಹಜಾನಂದ ಗುರುಪದ ಹೊಂದಿ ಸುಖಿಯಾದ || ೩೭ ||

ಚಂಡತರದೋರ್ದಂಡಮಂಡಲ । ಮಂಡಿತಾಯುಧಷಂಡ, ಬಹಳೋ।
ದ್ದಂಡರಾಕ್ಷಸಖಂಡನೋಚಿತಖಂಡಪರಶುಧರ, ||
ಮಂಡಲೀಕೃತಕುಂಡಲೀಂಪ್ರಪ್ರ । ಚಂಡಕುಂಡಲಗಂಡಮಂಡಲ, ।
ಚಂಡಿಕೇಶ್ವರ, ಮಲ್ಲಿಕಾರ್ಜುನ ಸಲಹು ಮೂಜಗವ || ೩೮ ||

ಶ್ರೀಮತ್ಪರಮಹಂಸ ಪರಿವ್ರಾಜಕಾಚಾರ್ಯ ಸಹಜಾನಂದಗುರುವರ್ಯ
ಪಾದಕಮಲಭೃಂಗಾಯಮಾಣ ಸಹವಾಸಿ ಮಹಲಿಂಗರಂಗ
ವಿರಚಿತವಾದ ಅನುಭವಾಮೃತವೆಂಬ ಗ್ರಂಥದಲ್ಲಿ
ಮಾಯಾಮಿಥ್ಯಾತ್ವಪ್ರಕರಣವೆಂಬ ಎಂಟನೆಯಧ್ಯಾಯವು
ಮು ಗಿ ದು ದು.

---

೩೭. ಅದ್ವಯವೆಂದು----ಎರಡನೆಯದಾಗಿ ಕಾಣುವವುಗಳೆಲ್ಲ ಭ್ರಾಂತಿಯಾದ್ದರಿಂದ ಆತ್ಮವು ತನಗೆರಡನೆಯದಿಲ್ಲದ್ದೆಂದು. ಗುರುಪದ----ಗುರುಗಳ ಪಾದವನ್ನು.

೩೮. ಷಂಡ---ಸಮೂಹ . . ಮಂಡಲೀ ...ಮಂಡಲ-ಸುರಳಿಯಾಗಿ ಸುತ್ತಿಕೊಂಡಿರುವ ಹಾವಿನ ರೂಪವಾದ ಪ್ರಚಂಡವಾದ ಕರ್ಣಾಭರಣದಿಂದ ಹೊಳೆಯುತ್ತಿರುವ ಕೆನ್ನೆಗಳುಳ್ಳವನು.

ಒಂಬತ್ತನೆಯ ಅಧ್ಯಾಯ

# ಜೀವತ್ರಯವಿಚಾರ

ಸೂ॥ ಸಾದರದಿ ಜೀವತ್ರಯಂಗಳ।
ಭೇದವನು ತಿಳಿವಂತೆ ತರುಣದಿ ।
ಬೋಧಿಸಿದನಾ ಬಾದರಾಯಣ ಶುಕಮುನೀಶ್ವರಗೆ ॥

ಜಡೆಯೊಳಗೆ ಜಾಹ್ನವಿಯ, ಮಕುಟದೊ।ಳುಡುಪತಿಯ ಕೊರಳಲ್ಲಿಗರಳವ।
ತೊಡೆಯ ಮೇಲೆ ಮೃಡಾಣಿಯನು, ಕಟಿತಟದಿ ಕೃತ್ತಿಯನು, ॥
ಒಡಲೊಳುರಗನ ತೊಡವ, ಕರದಲಿ । ಜಡಿವ ಶೂಲಕಪಾಲಗಳ, ಜಗ ।
ದೊಡೆಯ ಶ್ರೀಗಿರಿಮಲ್ಲಿಕಾರ್ಜುನ ಬಿಡದೆ ಧರಿಸಿಹನು ॥ ೧ ॥

ಶಠರಿಗನೃತರಿಗಪ್ರಮಾಣರಿ।ಗಟಮುಟರಿಗಪಕೀರ್ತಿಗಂಜದ ।
ವಿಟಚರಿತ್ರರಿಗಲಸರಿಂಗನ್ಯಾಯಶೀಲರಿಗೆ, ॥
ನಟನೆಯಲಿ ನಾಟಕವ ನಟಿಸುವ । ಚಟುಲತರಚಿತ್ತರಿಗೆ, ಬೇಳ್ವಿಯ ।
ಸಟಿಪಟಿಯ ಸದನರಿಗೆ ಪೇಳದಿರನುಭವಾಮೃತವ ॥ ೨ ॥

ಪರಹಿತವ ಮಾಳ್ಪರಿಗೆ, ಪುಣ್ಯಾಸು । ಚರಿತರಿಗೆ, ಪುರುಷಾರ್ಥಪರರಿಗೆ, ।
ತರಹರದ ತಾಳಿಕೆಯ ಬುದ್ಧಿಯ ತಳೆದ ವೃದ್ಧರಿಗೆ, ॥
ಪರಮಶಾಂತಿಯ ತಳೆದ ಚಿತ್ತದ । ಪರಿಯನುಳ್ಳವರಿಂಗೆ, ಪ್ರಾಪ್ತರಿ ।
ಗರುಹುವದು ಗುರುಭಕ್ತರಿಂಗೀ ಅನುಭವಾಮೃತವ ॥ ೩ ॥

---

ಸೂ॥ ಜೀವತ್ರಯಂಗಳು—ವ್ಯಾವಹಾರಿಕ, ಪ್ರಾತಿಭಾಸಿಕ, ಪಾರಮಾರ್ಥಿಕ.

೧. ಕೃತ್ತಿ—ಚರ್ಮ. ತೊಡವ—ಆಭರಣವನ್ನು. ಕಪಾಲ—ತಲೇಬುರಡೆ.

೨. ಅಪ್ರಮಾಣರಿಗೆ—ಯಾವ ಪ್ರಣವನ್ನೂ ಒಪ್ಪದೆ ಇರುವವರಿಗೆ. ವಿಟಚರಿತ್ರರಿಗೆ—ಕಾಮಾಂಧರಾಗಿ ಅಧರ್ಮಾಚರಣೆಯಲ್ಲಿರುವವರಿಗೆ.

೩ ತರಹರದ ತಾಳಿಕೆಯ—ಸೈರಿಸಿಕೊಂಡು ಸಮಾಧಾನದಿಂದಿರುವ. ಪ್ರಾಪ್ತರಿಗೆ—ತಾವಾಗಿ ಬಂದವರಿಗೆ.

ಎಂತು ಹೆಮ್ಮೆಯ ರೂಪು ? ಜೀವರ । ದೆಂತು ದೇಹದೊಳಿರ್ಪರವರಿಗ ।
ದೆಂತು ಬಂದುದು ಜೀವತನದಾರೋಪವದು ಬರಿದೆ ? ॥
ಎಂತು ಜೀವನ್ಮುಕ್ತಿಯಾಗುವ । ದೆಂತು ಜಗದೇಕತ್ವ ? ಮೋಕ್ಷವ ।
ದೆಂತದನು ತಿಳುಹೆಂದು ಬಿನ್ನಯಿಸಿದನು ಶುಕಯೋಗಿ ॥ ೪ ॥

ತನ್ನ ನಿಜವನು ಮರೆದ ಕತದಿಂ । ದನ್ಯದೊಳು ತಾನೆಂಬ ಹೆಮ್ಮೆದು ।
ನನ್ನಿಯಾತುಮಧರ್ಮವಲ್ಲದು; ದೇಹಗುಣವಲ್ಲ ; ॥
ಭಿನ್ನವಾಗಿಹುದೀ ಅಹಮ್ಮೆಂ । ಬುನ್ನತಿಕೆಯಭಿಮಾನರೂಪದು ; ।
ತನ್ನೊಳಗೆ ಚೈತನ್ಯ ಬೆರೆಯಲು ಚೇಷ್ಟೆವಡೆದಿಹುದು ॥ ೫ ॥

ಹೆಮ್ಮೆ ತನುವಿನ ಧರ್ಮವಾದೊಡ । ದೊಮ್ಮೆಯೂ ಧರ್ಮಿಯನುಬಿಡದೇ ।
ನೆಮ್ಮಿಕೊಂಡಿರಬೇಕು ಪೃಥ್ವಿಯ ಗಂಧ ಬಿಡದಂತೆ; ॥
ನೆಮ್ಮಿರಲು ತನು ಮರಣದುರಿಯೊಳು । ಹೆಮ್ಮೆ ತಾ ನೆರೆ ಹುಯ್ಯಲಿಡದೇ ।
ಕೊಮ್ಮೆಯದರಿಂ ಹೆಮ್ಮೆ ತನುವಿನ ಧರ್ಮವಲ್ಲೆಂದ ॥ ೬ ॥

ಆದೊಡಾತ್ಮನ ಧರ್ಮವೆಂದೆನೆ । ಭೇದವಿಲ್ಲದೆ ಚಂದ್ರ ಚಂದ್ರಿಕೆ ।
ಯಾದ ತೆರದಲಿ ನಿತ್ಯವಾಗಿರಬೇಹುದಾತ್ಮನಲಿ ; ॥
ಬೋಧೆವಡೆದಿಹ ಯೋಗಿಗಳಿಗೆ ಸ । ಮಾಧಿಯಾಗಲು ಹೆಮ್ಮೆಳಿದು ನಿರು ।
ಪಾಧಿನಿಜಸುಖ ತೋರ್ಪುದದರಿಂದಾತ್ಮಗುಣವಲ್ಲ ॥ ೭ ॥

ಬ್ರಹ್ಮದಲ್ಲಿದು ರಜ್ಜುಭುಜಗನ । ಧರ್ಮದಂದದಿ ಭ್ರಾಂತಿಕಲ್ಪಿತ ; ।
ಹೆಮ್ಮೆ ತ್ರಿಪುಟಿಯ ರೂಪುದಳೆದು ಪ್ರವರ್ತಿಸುತ್ತಿಹುದು; ॥

---

೪. ಜೀವನ್ಮುಕ್ತಿ—ಬದುಕಿರುವಾಗಲೇ ಆಗುವ ಮುಕ್ತಿ. ಜಗದೇಕತ್ವ—ಬೇರೆ ಬೇರೆಯಾಗಿ ಕಾಣುವದನ್ನೆಲ್ಲಾ ಒಂದೆಂಬ ದೃಷ್ಟಿಯಿಂದ ನೋಡುವದು.

೫. ಅನ್ಯದೊಳು—ದೇಹ ಮೊದಲಾದವುಗಳಲ್ಲಿ. ನನ್ನಿ—ನಿಜ. ಭಿನ್ನವಾಗಿಹುದು—ಆತ್ಮಧರ್ಮಕ್ಕಿಂತ ಮತ್ತು ದೇಹಗುಣಕ್ಕಿಂತ ಬೇರೆಯಾಗಿರುವದು. ಉನ್ನತಿಕೆಯ+ಅಭಿಮಾನರೂಪು+ಅದು. ತನ್ನೊಳಗೆ ಚೈತನ್ಯ ಬೆರೆಯಲು—ತಾನೇ ಚೇತನ್ಯವೆಂಬಂತಾಗಿ.

೬. ಧರ್ಮಿಯನು—ತನಗಾಶ್ರಯವಾದ ದೇಹವನ್ನು.

೭. ಚಂದ್ರಿಕೆ—ಬೆಳದಿಂಗಳು. ಸಮಾಧಿಯಾಗಲು—ಸಮಾಧಿಸ್ಥಿತಿಯು ಪ್ರಾಪ್ತವಾದರೆ.

ಹೆಮ್ಮೆಯಲಿ ಹಿರಿದಾಗವಸ್ಥಾ । ಧರ್ಮದೊಳಗಹಮಹಮೆನುತ್ತಲಿ ॥
ಸುಮ್ಮನೇ ತನ್ನೊಳಗೆ ತಾನೇ ವ್ಯವಹರಿಸುತಿಹುದು ॥ ೮ ॥

ತೋರುವೀ ಹಮ್ಮೀ ಅವಿದ್ಯಾ । ಕಾರಿಯವು ; ಜಾಗರವು ಮೊದಲಹ ।
ಮೂರುತನು ತಾನೆಂದು ಬಗೆದಭಿಮಾನಿಸುತ್ತಿಹುದು; ॥
ಸಾರವಹ ಚೈತನ್ಯ ಹೊಳೆಯಲು । ಮೂರುಜೀವರು ತೋರ್ಪರಂಬರ ।
ನೀರೊಳಗೆ ತೋರ್ಪಂತೆ ಹಮ್ಮಿನ ತಾರತಮ್ಯದಲಿ ॥ ೯ ॥

ಗೋಚರಿಸುವೀ ಹಮ್ಮು ಮಿಗೆ ಸಂ।ಕೋಚಿಸಲು ತನುವಿನಲಿ ಸುಪ್ತಿಯ।
ಥೋಚಿತದ ನಾಡಿಗಳ ಮಧ್ಯದಿ ಪಸರಿಸಲು ಸ್ವಪ್ನ, ॥
ಈ ಚತುರ್ವಿಂಶತಿಗಳಹ ತ । ತ್ತ್ವೋಚಿತದಲಾಪಾದಮಸ್ತಕ ।
ಸೂಚಕವು ಜಾಗರಣೆಯೆನಿಪುದು ಮಗನೆ ಕೇಳೆಂದ ॥ ೧೦ ॥

ನಿರುತ ಹಮ್ಮಿದು ತಾಮಸದಲುರೆ। ಬೆರೆಯೆ ಸುಪ್ತಿ, ರಜೋಗುಣದಿಸಂ ।
ಚರಿಸೆ ಸ್ವಪ್ನವು; ತೀವಿ ಸತ್ತ್ವವ ಧರಿಸೆ ಜಾಗರಣ; ॥

---

೮. ತ್ರಿಪುಟಿ----ನೋಡುವವನು, ಕಾಣುವವುಗಳು, ನೋಟ. ಹಿರಿದಾಗಿ+ ಅವಸ್ಥಾಧರ್ಮದಲಿ. ಅಹಮಹಂ---ನಾನು, ನಾನು.

೯. ಮೂರುತನು---- ಸ್ಥೂಲ, ಸೂಕ್ಷ್ಮ, ಕಾರಣ-ಎಂಬ ಮೂರುತನುಗಳು. ಅಂಬರ ನೀರೊಳಗೆ ಹೊಳೆವಂತೆ----ಇಲ್ಲಿ ಅಂಬರವು ಬ್ರಹ್ಮಕ್ಕೆ ಹೋಲಿಕೆ. ನೀರು ಅವಸ್ಥೆಗಳಿಗೆ ಹೋಲಿಕೆ. ನೀರಲ್ಲಿ ಪ್ರತಿಬಿಂಬಿಸಿದ ಆಕಾಶವು ಹೇಗೆ ಸುಳ್ಳೊ ಹಾಗೆ ಮೂರವಸ್ಥೆಗಳಲ್ಲಿ ಅಭಿಮಾನವನ್ನು ವಹಿಸುವ ಜೀವತ್ವವು ಸುಳ್ಳೆಂದು ತಿಳಿಯಬೇಕು.

೧೦. ಸಂಕೋಚಿಸಲು----ಅವ್ಯಕ್ತರೂಪಕ್ಕೆ ಬರಲು (ಸುಷುಪ್ತಿಯಲ್ಲಿ ಅಹಂಕಾರವು ಯಾವ ವಿಷಯದ ರೂಪದಲ್ಲಿಯೂ ಇರುವದಿಲ್ಲ. ಆಗ ಜೀವನು ಬ್ರಹ್ಮದಲ್ಲಿ ಒಂದಾಗಿರುವನು. ಆದರೆ ಅದು ಅವನಿಗೆ ತಿಳಿದಿರುವದಿಲ್ಲ. ಆದ್ದರಿಂದ ಆ ಅಜ್ಞಾನದಿಂದ ಅವನು ತನ್ನ ಅಹಂಭಾವವು ನಿದ್ರೆಯಲ್ಲಿ ಯಾವ ಕೆಲಸವನ್ನು ಮಾಡದಿದ್ದರೂ ತಾನು ಎಚ್ಚರ ಕನಸುಗಳಲ್ಲಿದ್ದಂತೆಯೇ ಇರುವೆನೆಂಬ ಅಭಿಪ್ರಾಯಪಡುತ್ತಾನೆ. ಚತುರ್ವಿಂಶತಿ—೩ ಅ. ೧೫೦ ಪ. ದಲ್ಲಿ ವಿವರಿಸಿರುವ ೨೫ ತತ್ತ್ವಗಳಲ್ಲಿ ಆತ್ಮನನ್ನು ಹೊರತು ಉಳಿದ ೨೪ ತತ್ತ್ವಗಳು (ಇವುಗಳಿಂದಲೇ ಸ್ಥೂಲಸೂಕ್ಷ್ಮಶರೀರಗಳಾಗಿರುವವು).

೧೧. ರಜೋಗುಣದಿ ಸ್ವಪ್ನವು—-ವಸ್ತುಗಳ ಸಂಸ್ಪರ್ಶವಿಲ್ಲದೆ ಅವುಗಳ ಸಂಸ್ಕಾರವುಳ್ಳ ಮನಸ್ಸಿನ ಚಾಂಚಲ್ಯದಿಂದ ಅನೇಕ ಕಾರ್ಯಗಳನ್ನು ತಾನು ಮಾಡುವಂತೆ

ಹಿರಿದವಿದ್ಯೆಯು ತನುವಿನೊಳು ಬೆರೆ । ದಿರೆ ಸುಷುಪ್ತಿಯೆದೇಳುಹತ್ತರ ।
ಕಿರಿಯ ದೇಹದಿ ಸ್ವಪ್ನ, ಜಾಗರ ಸ್ಥೂಲತನುವಿನಲಿ ॥ ೧೧ ॥

ಈ ವಿಧದವಸ್ಥೆಯಲಿ ಹೊಳೆಯುವ । ಜೀವನೆನಿಸುತ ವಿಶ್ವ, ತೈಜಸ ।
ನೋವಿ ಪ್ರಾಜ್ಞನೆನಿಪ್ಪ ಪೆಸರನು ತಳೆದು ತೋರುವನು; ॥
ಭಾವಿಸಲು ಮೂರಾದವಸ್ಥೆಗ । ಳಾವಗೊಂದಳಿದೊಂದು ತೋರ್ಪವ ।
ವೇ ವಿಚಾರಿಸೆ ಚಕ್ರನೇಮಿಕ್ರಮದಿ ತಿರೆಯೆಂದ ॥ ೧೨ ॥

ಒಂದವಸ್ಥೆಯನನುಭವಿಸುವೀ । ಚಂದದಿಂದಿಹ ಜೀವ ಬೇರಾ ।
ದೊಂದವಸ್ಥೆಯನರಿಯೆನದರಿಂ ಭಿನ್ನ; ಜೀವರನು ॥
ಎಂದಿಗೊಂದೇ ಪರಿಯ ರೂಪಿನೊ । ಳೊಂದಿಯರಿವನವಸ್ಥೆಗಳ ತಾ ।
ಹೊಂದದವರನು ಭವವನರಿಯುಲು ಸಾಕ್ಷಿಯಾಗಿಹನು ॥ ೧೩ ॥

---

ಅನುಭವವಾಗುವ ಸ್ವಪ್ನವು ರಜೋಗುಣದ ಕಾರ್ಯ. ಸತ್ತ್ವವ ಧರಿಸೆ ಜಾಗರಣ— ಬರೀ ಮನಸ್ಸಿನ ಚಾಂಚಲ್ಯದಿಂದಲೇ ಅಲ್ಲದೆ ವಸ್ತುಗಳ ಜ್ಞಾನವು ನಿಜವಾಗಿ ಅವುಗಳ ಸ್ಪರ್ಶದಿಂದಲೇ ಆಗುವ ಜಾಗರವು ಸತ್ತ್ವಗುಣದ ಕಾರ್ಯ. ಹಿರಿದವಿದ್ಯೆಯು ತನು--- ಹೆಚ್ಚಿನ ಅವಿದ್ಯೆಯೆಂಬ ಕಾರಣಶರೀರ. ಏಳುಹತ್ತರ----ಹದಿನೇಳು ತತ್ತ್ವಗಳ (ಪಂಚ ಜ್ಞಾನೇಂದ್ರಿಯ, ಪಂಚಕರ್ಮೇಂದ್ರಿಯ, ಪಂಚಪ್ರಾಣಗಳು, ಮನಸ್ಸು, ಬುದ್ಧಿ ಈ ೧೭). ಕಿರಿಯ ದೇಹ——ಸೂಕ್ಷ್ಮದೇಹ.

೧೨. ಪೆಸರನು ತಳೆದು—'ಬಹಿಃ ಪ್ರಜ್ಞೋ ವಿಭುರ್ವಿಶ್ವೋ ಹ್ಯಂತಃಪ್ರಜ್ಞಸ್ತು ತೈಜಸಃ ॥ ಘನಪ್ರಜ್ಞಸ್ತಥಾ ಪ್ರಾಜ್ಞ ಏಕ ಏವ ತ್ರಿಧಾ ಸ್ಮೃತಃ" ಎಂಬ ಶ್ರೀಗೌಡ ಪಾದೀಯ ಕಾರಿಕೆಯಂತೆ ಜಾಗ್ರದವಸ್ಥೆಯ ಜೀವನಿಗೆ ವಿಶ್ವನೆಂದೂ ಸ್ವಪ್ನಾವಸ್ಥೆಯ ಜೀವನಿಗೆ ತೈಜಸನೆಂದೂ ಸುಪ್ತಾವಸ್ಥೆಯ ಜೀವನಿಗೆ ಪ್ರಾಜ್ಞನೆಂದೂ ಹೆಸರು. ಅವಗ+ ಒಂದಳಿದು+ಒಂದು ತೋರ್ಪವು---ಯಾವಾಗಲೂ ಒಂದವಸ್ಥೆಯು ಹೋದಮೇಲೆಯೇ ಇನ್ನೊಂದವಸ್ಥೆಯು ತೋರುವದು: (ಅದ್ದರಿಂದಲೇ ಯಾವ ಅವಸ್ಥೆಯೂ ನಿಜವಾದ ದ್ದಲ್ಲವೆಂಬುದನ್ನು ಮರೆಯಬಾರದು). ಚಕ್ರನೇಮಿಕ್ರಮದಿ—ಚಕ್ರದ ಹಳಿಯು ಸುತ್ತುವ ಹಾಗೆ.

೧೩. ಜೀವರನು----ಎಚ್ಚರದ ವಿಶ್ವನನ್ನೂ ಕನಸಿನ ತೈಜಸನನ್ನೂ ನಿದ್ದೆಯ ಪ್ರಾಜ್ಞನನ್ನೂ. ಎಂದಿಗೂ+ಒಂದೇ ಪರಿಯ ರೂಪಿನೊಳೊಂದಿ----ಯಾವಾಗಲೂ ಒಂದೇ ರೀತಿಯಲ್ಲಿ ಕಾಣುತ್ತ. ಅವರನುಭವವನರಿಯಲು ಆ ವಿಶ್ವತೈಜಸಪ್ರಾಜ್ಞರ ಅನುಭವಗಳನ್ನು ತಿಳಿಯಲು,

ನಿದ್ರೆಯೊಳಗನುಭವಿಸಿದರ್ಥವ । ನೆದ್ದು ಸ್ಮರಿಸುತ ಪೇಳ್ವನದರಿಂ ।
ಬುದ್ಧಿವಂತನೆ, ಸ್ಮರಣೆಯನುಭವಸಿದ್ಧವಾಗಿಹುದು ; ॥
ಬುದ್ಧಿ ಸಾಧನವಾಗಲದರಿಂ । ದೆದ್ದು ಪೇಳ್ವನು; ನಿದ್ರೆಯೊಳಗಾ ।
ಬುದ್ಧಿಯಿಲ್ಲದ ಕಾರಣದಿ ತಾ ಸುಮ್ಮನಿರುತಿಹನು　　　　॥ ೧೪ ॥

ಅಹಮಿಗೆಯು ಚಿಚ್ಛಾಯೆಗೆಯು ತಿಳಿ । ಸಹಜತಾದಾತ್ಮ್ಯವು; ಶರೀರ ।
ಕ್ಕಹಮಿಗೆಯು ತಾದಾತ್ಮ್ಯ ಕರ್ಮಜ; ಸಾಕ್ಷಿಹಮ್ಮಿಂಗೆ ॥
ವಿಹಿತವಲ್ಲದ ಭ್ರಾಂತಿಜನ್ಯಕ । ವಹುದು; ತಾದಾತ್ಮ್ಯವು ಸದಾಸ ।
ನ್ನಿಹಿತದಿಂ ಬೇರ್ಪಡದು ಚಿಚ್ಛಾಯಕ್ಕಹಂಕೃತಿಗೆ　　　　॥ ೧೫ ॥

ಸುಪ್ತಿಮೂರ್ಛಾಮರಣಕಾಲದಿ । ಕ್ಲುಪ್ತವಹ ನಿಜಕರ್ಮಶಾಂತಿಯ ।
ಲುತ್ತಮನೆ ತಾದಾತ್ಮ್ಯ ಬೇರ್ಪಡುವದು ಶರೀರಕ್ಕೆ ; ॥
ಸತ್ಯವಹ ಸಾಕ್ಷಿಗೆಯು ನಿತ್ಯದಿ । ಬಿತ್ತರಿಪ ಹಮ್ಮಿಗೆಯು ಭ್ರಾಂತಿಯ ।
ಮೊತ್ತವಳಿಯಲು ತೊಲಗುವದು ತಾದಾತ್ಮ್ಯ ಕೇಳೆಂದ　　　　॥ ೧೬ ॥

---

೧೪. ಬುದ್ಧಿ....ಲದರಿಂ---ಎಚ್ಚರದಲ್ಲಿ ಬುದ್ಧಿಯೆಂಬ ಸಾಧನವಿರುವದರಿಂದ.

೧೫. ಚಿಚ್ಛಾಯೆ—ಚಿತ್ಸ್ವರೂಪವಲ್ಲದ್ದು ಚಿತ್ಸ್ವರೂಪದಂತೆ ಕಾಣುವದು. ಸಹಜತಾದಾತ್ಮ್ಯವು----ಇನ್ನೊಂದರ ಸಂಬಂಧವಿಲ್ಲದೆ ಒಂದು ಇನ್ನೊಂದಾಗಿ ಕಾಣುವದು (ನಾನು ನಾನೆಂಬ ಅಹಂಕಾರವನ್ನೆ ಚಿತ್ಸ್ವರೂಪವೆಂದು ತಿಳಿಯುವದು ಇದಕ್ಕೆ ಉದಾಹರಣೆ. ಈ ಅಹಂಕಾರವು ಎಲ್ಲಕ್ಕೂ ಒಳಗಣ ವೃತ್ತಿಯಾದ್ದರಿಂದ ಇದಕ್ಕೂ ಚಿತ್ಸ್ವರೂಪಕ್ಕೂ ಇನ್ನೊಂದರಿಂದ ಸಂಬಂಧವಿಲ್ಲ.) ಕರ್ಮಜ (ತಾದಾತ್ಮ್ಯ)—ಶರೀರವನ್ನು ತನ್ನದೆನ್ನಬಹುದೇ ಹೊರತು ತಾನೇ ಅಲ್ಲವಷ್ಟೆ. ಹೀಗೆ ತಾನಲ್ಲದ ಶರೀರವನ್ನು ನಾನು ನಾನೆಂದು ಅಹಮೆಂಬ ವಸ್ತುವಾಗಿ ತಿಳಿಯುವದು ಕರ್ಮಜ ತಾದಾತ್ಮ್ಯ; ಎಕೆಂದರೆ ಶರೀರವು ತಾನು ಮಾಡಿದ ಕರ್ಮದಿಂದ ಬಂದದ್ದಾಗಿರುವದು. ಅಹಂಕಾರಕ್ಕೂ ಶರೀರಕ್ಕೂ ಕರ್ಮದ ಸಂಬಂಧವಿರುವದು. ಭ್ರಾಂತಿಜನ್ಯಕ....ಸಾಕ್ಷಿಯಾದ ಚೈತನ್ಯವನ್ನು ಅಹಮೆಂಬ ವಸ್ತುವೆಂದು ತಿಳಿಯುವದು ಭ್ರಾಂತಿಯಿಂದಾದದ್ದು. ಬೇರ್ಪಡದು.. ಅಹಂಕಾರವನ್ನು ಚಿತ್ಸ್ವರೂಪವೆಂದು ತಿಳಿಯುವ ಸಹಜ ತಾದಾತ್ಮ್ಯವು ಮಾತ್ರ ಯಾವಾಗಲೂ ಒಂದಕ್ಕೊಂದು ಸಮೀಪದಲ್ಲಿರುವದರಿಂದ ಬೇರೆ ಬೇರೆಯಾಗುವದಿಲ್ಲ.

೧೬. ತಾದಾತ್ಮ್ಯ—ದೇಹಾದಿಗಳೇ ತಾನೆನ್ನುವ ಬುದ್ಧಿ. ಬೇರ್ಪಡುವದು ಶರೀರಕ್ಕೆ–ನಿದ್ರೆ ಮೊದಲಾದ ಕಾಲಗಳಲ್ಲಿ ಕರ್ಮವು ನಡೆಯದೆ ಇರುವದರಿಂದ ಶರೀ

ಆವರಣವಿಕ್ಷೇಪಶಕ್ತಿಗ । ಳಾ ವಿಗಡಮಾಯಾವಿಲಾಸಗ ।
ಳೋವಿ ಲಿಂಗಶರೀರ ತೊಡಗಿ ಸಮಸ್ತ ಸೃಷ್ಟಿಯನು ॥
ತೀವಿ ಸೃಜಿಸುತ್ತಬುಧಿಯಲಿ ಸಂ । ಭಾವಿಸುವ ತೆರೆನೊರೆಗಳವೊಲಿ ।
ರ್ಪಿ ವಿಧವು ವಿಕ್ಷೇಪಶಕ್ತಿಯ ಕೃತ್ಯ ಕೇಳೆಂದ ॥ ೧೭ ॥

ಒಳಗೆ ದೃಗ್ದೃಶ್ಯಗಳ ಭೇಧವ । ಬಳಸಿ, ಬ್ರಹ್ಮನ ಸೃಷ್ಟಿಗಳ ಹೊರ ।
ವಳಯದೊಳಾಗಾವರಿಸಿಕೊಂಡಿಹುದಾವರಣಶಕ್ತಿ ; ॥
ತಿಳಿಯಲೆರಡಾವರಣವಿರುತಿರ । ಲೆಲೆ ಮಗನೆ ಕೆಡೆದಿರ್ಪುವಿಂತೀ ।
ಬಲುಮೆಯುಹ ಸಂಸಾರ ಧರ್ಮಾಧರ್ಮಚಿಂತೆಗಳು ॥ ೧೮ ॥

ಆವರಣವೆಂದೆನಿಪ ನಿದ್ರೆಯ । ದಾವರಿಸಿಕೊಂಡಿರಲು ವಸ್ತುವ ।
ಭಾವಭೇದಭ್ರಾಂತಿರೂಪಿನ ಕನಸು ತೋರಿಸಲು ॥
ದೇವತಿರ್ಯಙ್ಮರ್ತ್ಯಲೋಕಗ । ಳೀ ವಿಧದ ಸಚಾರಾಚರಂಗಳು ।
ವ್ಯಾವಹಾರಿಕಜೀವಗವು ದಿಟದಂತೆ ತೋರುವವು ॥ ೧೯ ॥

---

ರಕ್ಕೂ ಅಹಂಕಾರಕ್ಕೂ ಇರುವ ತಾದಾತ್ಮ್ಯವು ಹೋಗುವದು. ಅಹಂಕಾರಕ್ಕೂ ಸಾಕ್ಷಿಗೂ ಇರುವ ತಾದಾತ್ಮ್ಯವು ಭ್ರಾಂತಿಜನ್ಯಕವಾದ್ದರಿಂದ ಭ್ರಾಂತಿ ಹೋಗುತ್ತಲೇ ಹೋಗುವದು.

೧೭. ಆವರಣ–ಮುಸುಕು. ವಿಕ್ಷೇಪ–ಹೊರಚೆಲ್ಲುವದು. ಈ ವಿಧವು— ಸಮುದ್ರವು ತೆರೆನೊರೆಗಳ ರೂಪದಲ್ಲಿ ಹೊರಚೆಲ್ಲಿರುವಂತೆ ಬ್ರಹ್ಮವು ಜಗದ್ರೂಪದಲ್ಲಿ ಹೊರಚೆಲ್ಲಿರುವದು.

೧೮. ಎರಡಾವರಣವು—ಅಂತಃಕರಣವನ್ನು ಮುಸುಕಿರುವ ಆವರಣವೊಂದು, ಹೊರಗಣ ಜಗತ್ತನ್ನು ಮುಸುಕಿರುವ ಆವರಣವೊಂದು. ಕೆಡೆದಿರ್ಪುವು—(ಸಂಸಾರ ಚಿಂತೆಗಳು) ಅದರಲ್ಲಿ ಬಿದ್ದಿರುವವು. ಇಲ್ಲಿ 'ಕೆಡದಿರ್ಪುವು' ಎಂದೂ ಪಾಠಾಂತರವಿದೆ.

೧೯. ತೋರಿಸಲು–ಈ ಮಾತಿಗೆ ಮುಂದಿನೆರಡು ಚರಣಗಳಲ್ಲಿರುವ ದೇವ..... ಚರಂಗಳ ಎಂಬ ಮಾತುಗಳು ಕರ್ಮಪದಗಳು- ವ್ಯಾವಹಾರಿಕಜೀಪಗೆ....ಎಚ್ಚರದ ಜೀವನಿಗೆ. ಈ ಪದ್ಯವು—"ಯಥಾ ಸ್ವಪ್ನಮಯೋ ಜೀವೋ ಜಾಯತೇ ಮ್ರಿಯತೇಽಪಿ ಚ । ತಥಾ ಜೀವಾ ಅಮೀ ಸರ್ವೇ ಭವಂತಿ ನ ಭವಂತಿ ಚ" ಎಂಬ ಮಾಂಡೂಕ್ಯಕಾರಿಕೆಯ ತಾತ್ಪರ್ಯ.

ಕನಸಿನನುಭವದೊಳಗೆ ತೋರ್ಪ। ಘನತರದ ಸುಖದುಃಖಸಂಕುಲ।
ಕನಸುಕಾಂಬವಗೆಂತು ನಿಜವೆಂಬಂತೆ ತೋರುವವೊ॥
ತನಯ, ಜಾಗ್ರದಿ ತೋರ್ಪ ಸಂಸ್ಕೃತಿ। ಯನುಭವವು ವ್ಯವಹಾರಿಜೀವಗೆ।
ಮನದ ಭ್ರಮೆಯಲಿ ತೋರುವದು ದಿಟವೆಂಬ ರೀತಿಯಲಿ ॥ ೨೦ ॥

ಕನಸು ಕಾಂಬುದು ನಿಮಿಷ; ಕನಸಿನ। ಲನುಭವವು ಬಹುವತ್ಸರಗಳೆಂ।
ದೆನಿಸಿ ತೋರ್ಪುದು ಕನಸಿನೊಳಗಣ ಮನದ ಭ್ರಮೆಯಿಂದ ;॥
ವನಜಭವ ಮೊದಲಾದವರ ಬದು। ಕನಘ, ತಿಳಿಯಲು ನಿಮಿಷ; ಸಂಸೃತಿ।
ಯನುಭವವು ಬಹುಕಾಲದಂತಹುದಾವರಣದಿಂದ ॥ ೨೧ ॥

ಬಾಲಕನೆ, ಚಿದಚಿತ್ಸಮೇಳವ। ಕೇಳು ; ಹೃದಯಗ್ರಂಥಿಯೆಂದದ।
ಹೇಳುವರು ; ಕಾದಿರ್ಪ ಕಬ್ಬಿಣದಂತದನ್ಯೋನ್ಯ ;॥
ಸ್ಥೂಲಜಡತೆಯ ಚಿತ್ತಿನಲ್ಲಿ ನಿ। ರಾಳನಿಜವಸ್ಥೂಲಚಿತ್ತದು।
ತಾಳೆ ಹಮ್ಮನು ವ್ಯಾವಹಾರಿಕಜೀವನೆನಿಸುವನು ॥ ೨೨ ॥

ಇದರಲಿಹುದೀ ಹಮ್ಮು ನಿಜವಾ। ಗೊದವಿಕೊಂಡಿಹ ಸಾಕ್ಷಿಚೈತ।
ನ್ಯದ ಬೆಳಕ ತನ್ನೊಳಗೆ ಧರಿಸುತಲಿಹಪರಂಗಳಲಿ॥
ಕುದಿದು ಕೋಟಲೆಗೊಂಡು ವ್ಯವಹಾ। ರದಲಿ ವಿಹರಿಸುತಿಪ್ಪುದದರಿಂ।
ದದನು ಪೇಳ್ವರು ವ್ಯಾವಹಾರಿಕಜೀವನವನೆಂದು ॥ ೨೩ ॥

---

೨೦ (ಕಾಂಬುದು) ನಿಮಿಷ...ಎಚ್ಚರದ ಒಂದು ನಿಮಿಷ. (ತಿಳಿಯಲು) ನಿಮಿಷ...ಬ್ರಹ್ಮ ಮೊದಲಾದವರ ಜೀವಿತಕಾಲದ ಪರಿಮಾಣವು ಕೂಡ ಅಲ್ಪವೆ. ನಿಜವಾಗಿ ನಿಮಿಷವೂ ಭ್ರಾಂತಿಯೇ ಆದ್ದರಿಂದ ಬಹುಕಾಲ ತೋರುವ ಅನುಭವವೂ ನಿಜವಾಗಿ ಸುಳ್ಳೇ ಎಂದು ತಾತ್ಪರ್ಯ.

೨೨. ಹೃದಯಗ್ರಂಥಿ—ಮನಸ್ಸಿನ ಗಂಟು. ಅನ್ಯೋನ್ಯ—ಒಂದಕ್ಕೊಂದು ಕಾವು, ಕಬ್ಬಿಣ, ಇವುಗಳಲ್ಲಿ ಒಂದರ ಧರ್ಮವು ಮತ್ತೊಂದರಲ್ಲಿ ಏಕಕಾಲದಲ್ಲಿ ತೋರುವ ಹಾಗಿರುವ ಕಾದಕಬ್ಬಿಣದಂತೆ ಚಿತ್ತೂ ಮತ್ತು ಅಚಿತ್ತೂ ಒಂದಕ್ಕೊಂದು ಅಭಿಮಾನ ಮೂಲಕವಾಗಿ ಬೆಸೆದುಕೊಂಡಿರುವದು. ಸ್ಥೂಲಜಡತೆಯ + ಅಚಿತ್ತಿನಲ್ಲಿ—ಸ್ಥೂಲವೂ ಜಡವೂ ಆದ ಅನಾತ್ಮವಸ್ತುಗಳಲ್ಲಿ (ಸ್ಥೂಲದೇಹ ಮೊದಲಾದವುಗಳಲ್ಲಿ). ನಿರಾಳವೂ ನಿಜವೂ ಅಸ್ಥೂಲವೂ ಆದ) ಚಿತ್ತು+ಅದು—ಆ ಆತ್ಮವು. ವ್ಯಾವಹಾರಿಕ—ಎಚ್ಚರದ.

೨೩. ಚೈತನ್ಯದ ಬೆಳಕ ಧರಿಸುತ—ತಾನೇ ಚೈತನ್ಯದಂತೆ ತೋರಿಕೊಳ್ಳುತ್ತ.

ಒಂದು ಹಮ್ಮೀ ಜೀವಭೇದದ । ಲೊಂದಿ ತೋರ್ಪುದು ಹಲವುವಿಧದಲಿ।
ಕಂದ, ಕೇಳಾವರಿಸಿಕೊಂಡಿರಲಾವರಣಶಕ್ತಿ ; ॥
ಒಂದೆ ಜಾಗ್ರದಿ ವ್ಯಾವಹಾರಿಕ । ನೆಂದು, ಸ್ವಪ್ನದಿ ಪ್ರಾತಿಭಾಸಿಕ ।
ನೆಂದು, ಸುಪ್ತಿಲಿ ಪಾರಮಾರ್ಥಿಕನೆಂದು ಪೆಸರದಕೆ ॥ ೨೪ ॥

ಬುದ್ಧಿ ಸುಖದುಃಖೇಚ್ಛೆ, ಯತ್ನನಿ । ಬದ್ಧಧರ್ಮಾಧರ್ಮಭಾವನೆ, ।
ನಿರ್ಧರಿಸಲಾದ್ವೇಷವೆಂಬೀ ನವಗುಣಂಗಳನು ॥
ಹೊದ್ದಿ ಗುಣಿಯೆಂದೆನಿಸಿ ತೋರಿಸು । ತಿರ್ದ ತಾರ್ಕಿಕಸಮ್ಮತನು ಪರಿ ।
ಶುದ್ಧಮತಿ, ಕೇಳ್ ವ್ಯಾವಹಾರಿಕಜೀವನೆನಿಸುವನು ॥ ೨೫ ॥

ಕೇಳವಿದ್ಯಾಭ್ಯಾಸದಿಂದಲಿ । ತಾಳಿ ಕರ್ತೃತ್ವವನು, ಸೂಕ್ಷ್ಮ ।
ಸ್ಥೂಲದೇಹಂಗಳಲಿ ತಾನಿಹೆನೆಂದಹಂಕರಿಸಿ,॥
ಕೀಳುಮೇಲಹ ಕರ್ಮಫಲದಲಿ । ಮೇಲುಕೆಳಗೆಂದೆಂಬ ಲೋಕದೊ ।
ಳಾಳುತೇಳುತ ಸಂಚರಿಸುತಿಹ ವ್ಯಾವಹಾರಿಕನು ॥ ೨೬ ॥

ವ್ಯಾವಹಾರಿಕಜೀವನಿಂತೀ । ವ್ಯಾವಹಾರಿಕವಾದ ಜಗವನು ।
ಪೋವಿ ದಿಟವೆಂದೆಂಬ ಮಾಯಾವರಣವೆಡೆಗೊಂಡು ; ॥

---

(ಚೈತನ್ಯದ ಬೆಳಕು ಹಮ್ಮಿನಲ್ಲಿ ಪ್ರತಿಬಿಂಬಿಸುವದೆಂದು ಅಕ್ಷರಾರ್ಥವನ್ನು ಮಾಡ ಬಾರದು; ಏಕೆಂದರೆ ಚೈತನ್ಯವೆಂಬುದು ಬೆಳಕನ್ನು ಕೊಡುವ ಸ್ಥೂಲವಲ್ಲ; ಹಮ್ಮೂ ಪ್ರತಿಬಿಂಬವನ್ನು ಹಿಡಿದು ಕೊಳ್ಳುವಂಥ ಸ್ಥೂಲವಲ್ಲ).

೨೪. ಪಾರಮಾರ್ಥಿಕನೆಂದು— ಆಗ ಪ್ರತ್ಯಕ್ಷವಾಗಿ ಹಾನಿಯನ್ನು ಮಾಡುವ ಸ್ಥೂಲ ಸೂಕ್ಷ್ಮಶರೀಗಳ ಸೋಂಕಿಲ್ಲದ್ದರಿಂದ ಜೀವನು ನಿಜಸ್ವರೂಪವಾದ ಬ್ರಹ್ಮದಲ್ಲಿ ಸೇರಿಕೊಂಡನಾಗಿರುವದರಿಂದ ಪಾರಮಾರ್ಥಿಕನೆನಿಸಿಸುವನು. ೪-೬೮ನೇ ಪದ್ಯವನ್ನು ನೋಡಿ. ಆದರೆ ಆಗ ಅವನು ತನ್ನನ್ನು ತಾನು ಅರಿತಿರುವದಿಲ್ಲವಾದ್ದರಿಂದ ಬಹುಮಟ್ಟಿಗೆ ಮಾತ್ರ ಜೀವತ್ವವನ್ನು ಕಳೆದು ಕೊಂಡವನಾಗಿ ಬ್ರಹ್ಮವಾದಂತೆ ಇರುವ ನೆಂದು ತಾತ್ಪರ್ಯ.

೨೫. ತಾರ್ಕಿಕಸಮ್ಮತನು — ಇದು ವೈಶೇಷಿಕರ ಮತವೆಂದು ಹಿಂದೆ ೩ ಅ. ೪೯ ಪ. ದಲ್ಲಿ ಹೇಳಿದೆ.

೨೬. ಅವಿದ್ಯಾಭ್ಯಾಸ— ಅತ್ಮನ ನಿಜಸ್ವರೂಪದ ಜ್ಞಾನವಿಲ್ಲದ್ದರಿಂದ ಅನಾತ್ಮಗಳು ಆತ್ಮದಂತೆ ತೋರುವದು. ಮೇಲುಕೆಳಗೆಂದೆಂಬ—ಮೇಲಿನ ಮತ್ತು ಕೆಳಗಿನ ಲೋಕ ಗಳ ವಿವರಣೆಯು ಹಿಂದೆ ೫ ಅ. ೨೫ ಪ. ದಲ್ಲಿ ಬಂದಿದೆ.

ಭಾವಿಸುತ್ತಿರೆ ವ್ಯಾವಹಾರಿಕ । ಜೀವನಲ್ಲಿಯ ನಿದ್ರೆಯೆಂಬೀ ।
ಆವರಣದಲಿ ಪ್ರಾತಿಭಾಸಿಕಜೀವಜಗನಾಯ್ತು　　|| ೨೭ ||

ನೂತನದ ಜಗಜೀವರನು ತಾ । ನೋತು ಕಲ್ಪಿಸಿ ನಿದ್ರೆಯಿಂದದ ।
ನಾ ತತುಕ್ಷಣದಲ್ಲಿ ತೋರುತ್ತಳಿಸುತಿಹನಾಗಿ ||
ಪ್ರಾತಿಭಾಸಿಕನೆನಿಸುವನು ; ಸ್ವ । ಪ್ನಾತಿಶಯದಲಿ ಕಾಣುವದನಾ ।
ಪ್ರಾತಿಭಾಸಿಕಜೀವ ದಿಟವೆಂದಾಗ ಬಗೆದಿಹನು　　|| ೨೮ ||

ತೋರುವೀ ಹವ್ಮಿದು ಪರಾತ್ಮನ । ಸೇರಿ ತಾನಿರಲಾಗಳದರಿಂ ।
ಪಾರಮಾರ್ಥಿಕಜೀವನೆಂದಾರೋಪವಾಯ್ತೈಸೆ ||
ಧೀರ, ತಿಳಿ ಮಾಯಾಂಶವಲ್ಲದು; । ಸಾರತರವಾತ್ಮಾಂಶವದರಿಂ ।
ಪಾರಮಾರ್ಥಿಕಜೀವ ತಾನೇ ಪರಮನಾಗಿಹನು　　|| ೨೯ ||

ಭಾವಿಸಲು ಪರಮಾರ್ಥಜೀವನು । ವ್ಯಾವಹಾರಿಕಜೀವಜಗವನು ।
ಪೋವಿ ಪುಸಿಯೆಂದೆಂಬನವಗದು ತೋರದುದರಿಂದ ; ||
ವ್ಯಾವಹಾರಿಕಜೀವನಾದರೊ । ತೀವಿ ತೋರುವ ಪ್ರಾತಿಭಾಸಿಕ ।
ಜೀವಜಗವನು ಪುಸಿಯೆನುತ ಬಗೆದಿಹನು ಕೇಳೆಂದ　　||೩೦||

ಈ ವಿಧದಿ ಹವ್ಮಿನಲಿ ಭೇಧವ । ಭಾವಿಸಲು ಮಿಗೆ ತೋರ್ಪರೀ ಪರಿ ।
ಜೀವರುಗಳಿಲಿ ಮೂರು ಭೇದದಿ ದೇಹದೊಳಗವರು ; ||
ಆವರಣದಿಂದಾದ ಹವ್ಮಿಗೆ । ಜೀವತನವಳಿವಂದವೆಂತೆನ ।
ಲಾವರಣವಳಿದಲ್ಲದಳಿಯದು ಜೀವತನವೆಂದ　　|| ೩೧ ||

ಸ್ಥೂಲಸೂಕ್ಷ್ಮಶರೀರವಲ್ಲ; ನಿ । ರಾಳ ನಿಜ ತಾನೆಂದು ಸಂಶಯ ।
ಜಾಲವನು ಹರಿದರಿಯೆ ನಿಶ್ಚಯವಾಗಿ ತನ್ನೊಳಗೆ ||

---

೨೭. ಪ್ರಾತಿಭಾಸಿಕ—ಇಲ್ಲದಿದ್ದರೂ ಇದ್ದ ಹಾಗೆ ಕಾಣುವ (ಕನಸಿನ).

೩೦. ನಿದ್ರೆಯ ದೃಷ್ಟಿಯಿಂದ ನೋಡಿದರೆ ಎಚ್ಚರದ ಜಗತ್ತು ಎಷ್ಟುಮಾತ್ರವೂ ಇಲ್ಲದ್ದರಿಂದ ತೀರ ಪುಸಿಯೆಂದೂ ಎಚ್ಚರದ ದೃಷ್ಟಿಯಿಂದ ನೋಡಿದರೆ ಕನಸಿನ ಜಗತ್ತು ರಜ್ಜು ಸರ್ಪದಂತೆ ಪುಸಿಯೆಂದೂ ತಾತ್ಪರ್ಯ.

೩೨. ಸ್ಥೂಲಸೂಕ್ಷ್ಮಶರೀರವಲ್ಲ—ಎರಡುಶರೀರಗಳನ್ನು ಕಳೆಯುತ್ತಲೆ ಆತ್ಮನು ಸಿಕ್ಕುವನೆಂಬದಕ್ಕೆ ೩-೬ಲನ್ನು ನೋಡಿ. ಆದರೂ ಇಲ್ಲಿ ಕಾರಣಶರೀರವನ್ನು ಕಳೆ

ಕೋಳವನು ಕಡಿದಂತೆ, ಸಂಕಲೆ । ಕಾಲಿನುಗಿದಂದದಲಿ ಬಹುಭವ ।
ಮಾಲೆಯನ್ನು ಕಳೆದಾಗ ಜೀವನ್ಮುಕ್ತನಾಗಿಹನು ॥ ೩೨ ॥

ಜಲದೊಳುದಿಸಿದ ಶಕ್ತಿ ತೆರೆನೊರೆ । ಗಳನು ಮಾಡಲ್ಕವರೊಳಗೆ ತ ।
ಜ್ಜಲದ ಮಧುರ, ದ್ರವತ್ವ, ಶೀತಲ ಕೂಡಿತೋರುವವು ; ॥
ಉಳಿಯೆ ನೊರೆಯಾ ಗುಣಗಳಾ ತೆರೆ । ಯೊಳಗೆ ತೋರ್ಪುವು; ತೆರೆಯಡಗಲವು ।
ಬಳಿಕ ಜಲದಲಿ ಮುನ್ನಿನಂದದೊಳಿಹವು ಕೇಳೆಂದ ॥ ೩೩ ॥

ಸತ್ಯವಹ ಸಾಕ್ಷಿಸ್ವರೂಪದ । ಸತ್ತುಚಿತ್ತಾನಂದಗಳು ಬಿಡ ।
ದತ್ತಲಾ ವ್ಯವಹಾರಜಗಜೀವನೊಳು ತೋರುವವು ; ॥
ಮತ್ತೆ ಕೇಳೀ ವ್ಯಾವಹಾರಿಕ । ನತ್ತಲಿಹ ಸಚ್ಚಿತ್ಸುಖಂಗಳು ।
ಬಿತ್ತರಿಸಿ ಮಿಗೆ ಪ್ರಾತಿಭಾಸಿಕನಲ್ಲಿ ತೋರುವವು ॥ ೩೪ ॥

ಪ್ರಾತಿಭಾಸಿಕನಾವರಣವಳಿ । ದಾತನಲ್ಲಿಹ ಸಚ್ಚಿದಾನಂ ।
ದಾತಿಶಯವೇ ಪಾರಮಾರ್ಥಿಕನಲ್ಲಿ ತೋರುವದು ; ॥
ಮಾತದೇನೈ ! ಪಾರಮಾರ್ಥಿಕ । ಗಾತನಲ್ಲಿಪ್ಪಾವರಣ ಕೆಡ ।
ಲೋತು ಮುನ್ನಿದ್ದಂತೆ ಸಾಕ್ಷಿಯಲಿಹನು ಕೇಳೆಂದ ॥ ೩೫ ॥

---

ಯುವದಿರುವದೆಂದು ಮುಂದಿನ ೩೫ನೇ ಪದ್ಯವು ಹೇಳುವದು. ಜಾಲವನು—ಬಲೆಯನ್ನು. ಕಾಲಿಂ + ಉಗಿದಂದದಲಿ—ಕಾಲಿನಿಂದ ಕಳಚಿಕೊಂಡ ಹಾಗೆ. ಬಹುಭವಮಾಲೆಯನು—ಬಹಳವಾದ ಹುಟ್ಟುಸಾವುಗಳ ಸಾಲನ್ನು.

೩೩. ತೆರೆನೊರೆಗಳನು ಮಾಡಲ್ಕೆ—ನೀರಿನಲ್ಲಿ ಎದ್ದ ತೆರೆಯ ನೊರೆಯಲ್ಲಿ ನೀರಿನ ಮಾಧುರ್ಯ, ದ್ರವತ್ವ ಮೊದಲಾದವು ತೋರುತ್ತ ನೊರೆಯಡಗುತ್ತಲೆ ಅವು ತೆರೆಯಲ್ಲಿ ಮಾತ್ರ ಕಾಣಿಸಿಕೊಳುತ್ತ ಅದೂ ಅಡಗುತ್ತಲೇ ಆ ಗುಣಗಳು ನೀರಿನಲ್ಲಿಯೇ ಇರುವವೆಂಬುದು ಆತ್ಮನಲ್ಲಿ ಎದ್ದು ಕಾಣುವ ಮೂರವಸ್ಥೆಗಳಲ್ಲಿ ಆತ್ಮನ ಸಚ್ಚಿನಂದಗಳು ಎಚ್ಚರದಲ್ಲಿ ತೋರುತ್ತಿದ್ದು ಅದುಅಡಗುತ್ತಲೆ ಕನಸಿನಲ್ಲಿ ಕಾಣಿಸಿಕೊಂಡು ಅದೂ ಇಲ್ಲವಾಗುತ್ತಲೆ ಅವು ನಿದ್ರೆಯಲ್ಲಿ ತೋರಿಕೊಂಡು ಅದು ಕಳೆದ ಮೇಲೆ ಆತನಲ್ಲಿಯೇ ಇರುವವೆಂಬರ್ಥಕ್ಕೆ ಹೋಲಿಕೆಯಾಗಿದೆ. ಈ ಅರ್ಥವು ಮುಂದಿನೆರಡು ಪದ್ಯಗಳಲ್ಲಿ ಹೊರಡುವದು.

೩೫. ಪ್ರಾತಿಭಾಸಿಕನಾವರಣವಳಿದು—ಕನಸುಗಾಣುವ ಪ್ರಾತಿಭಾಸಿಕನೆಂಬ ಜೀವನು ಎಚ್ಚರದ ವ್ಯಾವಹಾರಿಕಜೀವನಂತೆ ಮಾಯೆಯೆಂಬ ಮುಸುಕಿನೊಳಗೆ ಸೇರಿ

ಸ್ವಾನುಭವಶ್ರುತಿಗುರುಕರುಣದಿಂ । ದೇನುಸಂಶಯವಿಲ್ಲದೆಯೆ ನಿಜ ।
ತಾನೆನುತ ಪರಮಾರ್ಥವನೆ ತಾ ತಿಳಿದು ನಿಶ್ಚಯಿಸಿ, ॥
ತಾನೆನಿಸುವನು ಪಾರಮಾರ್ಥಿಕ; । ಸಾನುರಾಗದಿ ಸಾಕ್ಷಿಯೊಡನೆಯ ।
ನೂನಸಾಯುಜ್ಯವನು ಪಡೆವನು ಮಗನೆ ಕೇಳೆಂದ　　|| ೩೬ ||

ಪಾರಮಾರ್ಥಿಕಜೀವ ಗುರುವಿನಪಾರ । ಕರುಣವ ಪಡೆದು, ಘನಮಾ ।
ಯಾರಹಿತನೆಂದೆನಿಸಿ, ಸಂಸೃತಿಶರಧಿಯನು ದಾಟಿ, ॥
ಸಾರಜೀವೇಶೈಕ್ಯಪರಮೋ । ದಾರಸುಖಸಾಮ್ರಾಜ್ಯಸುಖ ಕೈ ।
ಸೇರಿ ಪರಮಾನಂದಪದದಲಿ ನಿಂದು ಸುಖಿಯಹನು　　|| ೩೭ ||

ನಿದ್ರೆಯಳಿದರೆ ಕನಸ ಕಾಣುತ । ಲಿದ್ದ ಬಗೆ ಪುಸಿಯಾದ ತೆರದಲಿ ।
ಬದ್ಧನಹ ವ್ಯವಹಾರಜೀವನು ಶಮೆದಮೆಗಳಿಂದ ॥
ಶುದ್ಧವಾಗಿಯೆ ಶ್ರುತಿಗುರುಗಳಿಂ । ದದ್ವಯಾನಂದೈಕ್ಯನಾಗಲ ।
ಬದ್ಧವಹುದೈ ಜೀವಭಾವವು ಮಗನೆ ಕೇಳೆಂದ　　|| ೩೮ ||

ಕನಸಿನಂದದಿ ತೋರ್ಪುದೆಲ್ಲವು । ಮನದ ವಿಕೃತಿಯದೈಸೆ ; ನೋಡಲು ।
ಘನಪರಂಜ್ಯೋತಿಪ್ರಕಾಶವು ಸಚ್ಚಿದದ್ವಯವು; ॥
ಅನುಭವದಲರಿದೀ ಪ್ರಕಾರದಿ । ನೆನಹಡಗಿ ನಿಶ್ಚಿಂತನಾದೊಡೆ ।
ನಿನಗೆ ಸಹಜಾನಂದ ತೋರುವದೆಂದನಾ ಮುನಿಪ　　|| ೩೯ ||

ಮೂರವಸ್ಥೆಗಳಲ್ಲಿ ಬಹುಸಂ । ಚಾರದಿಂ ವಿಕರಿಪುದಹಂಕೃತಿ ; ।
ನೀರ, ನಿಜವಾದರಿವದಕೆ ತಾ ಸಾಕ್ಷಿಯಾಗಿಹುದು ॥

---

ದವನಾಗಿಯೇ ಇರುವನಷ್ಟೆ ; ಆ ಮುಸುಕು ಹೋದಮೇಲೆ. ಪಾರಮಾರ್ಥಿಕ ಗಾತನಲ್ಲಿಪ್ಪಾವರಣ—ನಿದ್ರೆಯಲ್ಲಿರುವ ಜೀವನಿಗೆ ಅವನಲ್ಲಿರುವ ಅವಿದ್ಯೆಯೆಂಬ (ತನ್ನನ್ನು ತಾನು ತಿಳಿಯದಿರುವದೇ) ಮುಸುಕು.

೩೬. ನಿಜ—ಆತ್ಮಸ್ವರೂಪನು. ತಾನೆನಿಸುವನು ಪಾರಮಾರ್ಥಿಕ—ತಾನು ಬ್ರಹ್ಮನೆನಿಸುವನು.

೩೭. ಪಾರಮಾರ್ಥಿಕಜೀವ—ಹಿಂದಿನ ೨೪ನೇ ಪದ್ಯವನ್ನು ನೋಡಿ.

೪೦. ಕುರುಹಿಟ್ಟು ನೋಡಲು ಸಹಜವಾಗಿಹುದು—ಅವಸ್ಥಾತ್ರಯಕ್ಕೆ ಸಾಕ್ಷಿಯಾಗಿರುವ ಸ್ವರೂಪವನ್ನೇ ಲಕ್ಷ್ಯದಲ್ಲಿಟ್ಟುಕೊಂಡು ನೋಡಿದರೆ ಆ ಆಧಾರಸ್ವರೂಪವಾದ ಸಹಜಾನಂದವು ವ್ಯಕ್ತವಾಗುವದು.

ಸಾರತರಚಿದ್ಗಗನ ಹಮ್ಮಿನ । ತಾರತಮ್ಯದಿ ಹೊಳೆಯುತಿರಲದು ।
ಧೀರರಿಗೆ ಕುರುಹಿಟ್ಟು ನೋಡಲು ಸಹಜವಾಗಿಹುದು ॥ ೪೦ ॥

ತೆರೆಹೊಡೆಯಹೊಯಿಲಿಂದಹುಟ್ಟಿದ। ನೊರೆಮರಳಿತಾತೆರೆಯೊಳಡಗಲು, ।
ತೆರೆ ಜಲದಿ ಮಿಗೆ ಲೀನವಾಗಲು ನಿಸ್ತರಂಗಾಬ್ಧಿ ; ॥
ಕರಣಗೋಚರವಿಷಯತತಿಯದು । ಕರಣದೊಳಗಿರ್ದಂತಡಗಲಾ ।
ಕರಣವರಿವಿನೊಳಡಗೆ ಸಹಜಾನಂದವಾಗಿಹುದು ॥ ೪೧ ॥

ಮಿಥ್ಯವಹ ಕರಣದಲಿ ತೋರ್ಪ ಸ । ಮಸ್ತಸಚರಾಚರವು ಕರಣದ ।
ವೃತ್ತಿಯಳಿಯಲು ಸ್ವಪ್ನವಳಿದಂತಳಿಯುತಿರಲಾಗ ॥
ನಿತ್ಯನಿರುಪಾಧಿಕವೆನಿಸುವೇ । ಕತ್ವವಾಗಿಯೆ ತೋರ್ಪುದೈ ; ತಿಳಿ ।
ಮುಕ್ತಿಪದ, ಕೈವಲ್ಯ, ಸಹಜಾನಂದವೆಂದದನು ॥ ೪೨ ॥

ಒಂದು ದೀವಿಗೆ ವರ್ತಿಭೇದಗ । ಳಿಂದ ಹಲವಾದಂತೆ, ನೋಡಲ ।
ದೊಂದು ಬೀಜವ ಬಿತ್ತೆ ಬಹುತರ ಬೀಜವಾದಂತೆ, ॥
ಒಂದು ವಸ್ತುವುಪಾಧಿಭೇದಗ । ಳಿಂದ ನಾನಾಭೇದವಾದುದು; ।
ಕಂದ, ಕೇಳ್ವುದುಪಾಧಿಯಳಿಯಲದೇಕವಾಗಿಹುದು ॥ ೪೩ ॥

ತನ್ನ ಸಂಸ್ಕೃತಿಯಾದವಸ್ಥೆಯೊ । ಳನ್ಯರೆನಿಪಾಭಾಸಜೀವರಿ ।
ಗುನ್ನಯಿಸೆ ಸಂಸಾರ ತನ್ನಿೀ ಭ್ರಾಂತಿಯಿಂದಹುದು ; ॥
ತನ್ನವಿದ್ಯಾನಾಶವಾಗಲು । ತನ್ನ ಮುಕ್ತಿಯದೆಂತು ತನಗಹು ।
ದನ್ಯರಿಗೆ ತನ್ನಂತೆ ಮುಕ್ತಿ ಯಥಾರ್ಥವಹುದೆಂದ ॥ ೪೪ ॥

---

೪೧. ಈ ಪದ್ಯದಲ್ಲಿ ಕವಿಯು ಆತ್ಮನಿಗೆ ನಿಸ್ತರಂಗಾಬ್ಧಿಯನ್ನೂ ಕರಣಗಳಿಗೆ ತೆರೆಯನ್ನೂ ವಿಷಯಗಳಿಗೆ ನೊರೆಯನ್ನೂ ಹೋಲಿಸಿರುವನು.

೪೩. ವರ್ತಿಭೇದಗಳಿಂದ— ಬೇರೆ ಬೇರೆ ಬತ್ತಿಗಳಿಂದ.

೪೪. ತನ್ನ . . ದವಸ್ಥೆಯೊ—ತನ್ನ ಸಂಸ್ಕಾರಕ್ಕೆ ಅನುಗುಣವಾಗಿ ಆಗುವ ಎಚ್ಚರದ ಅಥವಾ ಕನಸಿನ ಅವಸ್ಥೆಯಲ್ಲಿ. ಆಭಾಸಜೀವರಿಗೆ—ಜೀವರಂತೆ ತೋರುತ್ತಿರುವವರಿಗೆ (ಕನಸಿನಲ್ಲಿ ಎಷ್ಟೋ ಜೀವರು ಸಂಸಾರಿಗಳಾಗಿ, ಹುಟ್ಟಿಸಾಯುವವರಾಗಿ ತೋರುವರಷ್ಟೆ. ಅವರಿಗೆ ಆ ಸಂಸಾರಬಂಧವು ನಮ್ಮ ಕನಸೆಂಬ ಭ್ರಾಂತಿಯಿಂದಲೆ). ತನ್ನ+ಅವಿದ್ಯಾನಾಶ.

ಜೀವನೊಬ್ಬನವಿದ್ಯೆಯಿಂದಲಿ । ಭಾವಿಸಲು ಬಹುಜೀವರಾಗಿಯೆ ।
ತೀವಿ ತೋರುತ್ತಿಹರು ಸ್ವಪ್ನಪದಾರ್ಥದಂದದಲಿ ; ॥
ಈ ವಿಧದವಿದ್ಯೆಯನು ಗುರುವಿನ । ಪಾವನಾಂಘ್ರಿಯ ಪಿಡಿದು ಕೆಡಿಸಲು ।
ಜೀವತನವಳಿದಾಗ ಜಗವೇಕತ್ವವಾಗಿಹುದು ॥ ೪೫ ॥

ಸಕಲಜೀವರ ಕರಣಸಾಕ್ಷಿಯು । ಯುಕುತಿಯಿಂದರಿವಂದವೆಂತೆನೆ ।
ವಿಕರಿಸುವ ಬುದ್ಧಿಯನು ತನ್ನೊಳು ಕಂಡ ಸಾಕ್ಷಿಯನೆ ॥
ನಿಖಿಳದೊಳಗೊಂದೇ ಪರಿಯೊಳೇ । ಪ್ರಕಟವಾಗಿಪ್ಪರಿವೆನುತ್ತದ ।
ನಕಟ ! ತಿಳಿವುದು ಚೋದ್ಯವೇ ? ತನ್ನಂತೆ ಸರ್ವದಲಿ ॥ ೪೬ ॥

ಒಂದು ಹಳ್ಳಿಯ ಮೇಲೆ ತೋರಿದ । ಚಂದವಾದಾಕಾಶ ಗಿರಿ, ಪುರ, ।
ಸಿಂಧು ಮೊದಲಾದಖಿಲದೇಶಂಗಳಲಿ ಕಂಡಂತೆ ॥
ಕುಂದು ಹೆಚ್ಚುಗಳಿಲ್ಲದಮಲಾ । ನಂದಸಂವಿದ್ಗಗನವೇ ತಾ ।
ನೊಂದೆ ಪರಿಯಲಿ ಸಕಲಬುದ್ಧಿಗೆ ಸಾಕ್ಷಿಯಾಗಿಹುದು ॥ ೪೭ ॥

ಈ ಪರಿಯ ಜೀವತ್ರಯಂಗಳ । ರೂಪಭೇದವನೊಲಿದು ಶುಕಗೆ ನಿ ।
ರೂಪಿಸಿದ ಕರುಣದಲಿ ದ್ವೈಪಾಯನಮುನೀಶ್ವರನು ; ॥
ಚಾಪಲತೆಯಳಿದಂತರಂಗದ । ತಾಪವಡಗಲು ಶುಕನು ಪ್ರೇಮದಿ ।
ದೀಪವನು ಬೆಳಗಿದನು ಸಹಜಾನಂದಗುರುಪದಕೆ ॥ ೪೮ ॥

ಭೂತಪತಿ, ಭುವನೇಶ, ಭೈರವ, । ಮಾತರಿಶ್ವಾಶನವಿಭೂಷಣ, ।
ವೀತಿಹೋತ್ರವಿವಸ್ವದಮೃತಮರೀಚಿಲೋಚನನೆ, ॥

---

೪೫. ಜೀವನೊಬ್ಬ+ಅವಿದ್ಯೆಯಿಂದಲೆ—ಈ ವಿಧದ ಅವಿದ್ಯೆಯನು.

೪೭. ಸಿಂಧು—ಸಮುದ್ರ. ಆಕಾಶವು ಹಳ್ಳಿಯ ಮೇಲೆ ಬೆಟ್ಟದ ಮೇಲೆ ಹೀಗೆಲ್ಲ ಇರುವಂತೆ ಕಂಡರೂ ಒಂದೇ ಆಕಾಶವು ಎಲ್ಲ ಕಡೆಯಲ್ಲಿಯೂ ಹೇಗಿರುವದೊ ಹಾಗೆ ಬೇರೆ ಬೇರೆ ಪ್ರಾಣಿಗಳ ಬುದ್ಧಿಗಳಲ್ಲಿ ಬೇರೆ ಬೇರೆ ಸಾಕ್ಷಿ ಇರುವಂತೆ ಕಂಡರೂ ಸರ್ವರ ಬುದ್ಧಿಯ ಸಾಕ್ಷಿಯೂ ಒಬ್ಬನೇ ಎಂಬು ತಿಳಿಯಬೇಕೆಂದು ತಾತ್ಪರ್ಯ.

೪೮. ದ್ವೈಪಾಯನ—ವ್ಯಾಸರು (ಯಮುನಾನದಿಯಲ್ಲಿದ್ದ ಒಂದು ದ್ವೀಪದಲ್ಲಿ ಹುಟ್ಟಿದವರು).

೪೯. ಮಾತ . . ಭೂಷಣ—ಹಾವುಗಳನ್ನು ಅಭರಣವಾಗಿ ಉಳ್ಳವನು.

**ಪ್ರೇತನಿಲಯನಿವಾಸ, ನಿಗಮಾ । ತೀತ, ನಿತ್ಯಾನಂದ, ಗಿರಿಜಾ ।**
**ಪ್ರೀತ, ಶ್ರೀಗಿರಿನಾಥ ರಕ್ಷಿಸು ಜಗವನಗಚಾಪ ॥೪೯॥**

**ಶ್ರೀಮತ್ಪರಮಹಂಸ ಪರಿವ್ರಾಜಕಾಚಾರ್ಯ ಸಹಜಾನಂದಗುರುವರ್ಯ**
**ಪಾದಕಮಲಭೃಂಗಾಯಮಾಣ ಸೆಹವಾಸಿ ಮಹಲಿಂಗರಂಗ**
**ವಿರಚಿತವಾದ ಅನುಭವಾಮೃತವೆಂಬ ಗ್ರಂಥದಲ್ಲಿ**
**ಜೀವತ್ರಯವಿಚಾರವೆಂಬ ಒಂಬತ್ತನೆಯಧ್ಯಾಯವು**
**ಮು ಗಿ ದು ದು.**

---

ವೀತಿ . . . . ಲೋಚನನೆ--ಸೂರ್ಯ, ಚಂದ್ರ, ಅಗ್ನಿ ಇವರನ್ನು ಕಣ್ಣಾಗಿ ಉಳ್ಳವನು. ಪ್ರೇತನಿಲಯನಿವಾಸ--ಶ್ಮಶಾನದಲ್ಲಿ ವಾಸಮಾಡುವವನು. (ಜಗವ + ) ನಗಚಾಪ (ಅಥವಾ ಜಗವನು + ಅಗಚಾಪ)-- ಮೇರುಪರ್ವತವನ್ನು ಧನುಸ್ಸಾಗಿ ಉಳ್ಳವನು.

## ಹತ್ತನೆಯ ಅಧ್ಯಾಯ

# ಜೀವನ್ಮುಕ್ತಿನಿರೂಪಣ

ಸೂ ॥ ಸತ್ಯಸಹಜಾನಂದವಹ ನಿಜ ।
ಮುಕ್ತಿಯನುಭವಗೊಳ್ವ ಯೋಗಿಚ ।
ರಿತ್ರವನು ಶುಕಮುನಿಗೆ ಸಾತ್ಯವತೇಯ ಬೋಧಿಸಿದ ॥

ಪ್ರೇತಭೂಮಿಯೊಳಾಡುತಸ್ಥಿ । ವ್ರಾತವಾಲೆಯ ಸೂಡುತಾವಗ ।
ಭೂತವೇತಾಳಾದಿಗಳ ಕೂಡೊಲಿದು ನರ್ತಿಸುವ ॥
ಈ ತೆರದಮಂಗಲಚರಿತ್ರನು । ಪ್ರೀತಿಯಿಂದಲಿ ತನ್ನ ನೆನೆವರಿ ।
ಗೋತು ಜಯಮಂಗಲವನೀವನು ಶ್ರೀಗಿರೀಶ್ವರನು ॥ ೧ ॥

ಢಾಳಕರಿಗರ್ಥಾರ್ಥಿಗಳಿಗೆ, ಕ । ರಾಳಕಾಮುಕರಿಂಗೆ, ಕಲಹಕೆ ।
ಕಾಲ ಕೆರೆವ ಕಠೋರರಿಗೆ, ಕಡುಕೋಪಶೀಲರಿಗೆ, ॥
ಕಾಳುಗೂಳರಿಗಾತ್ಮ ನಿಷ್ಠುರ । ಕಾಳುಗೆಡಿಪ ಕುತರ್ಕಿಗಳಿಗೆಲಿ ।
ಜಾಳುಬೋಳುಗಳಿಂಗೆ ಪೇಳದಿರನುಭವಾಮೃತವ ॥ ೨ ॥

---

ಸೂ ॥ ಮುಕ್ತಿಯ +ಅನುಭವಗೊಳ್ವ.

೧. ಸೂಡುತ—ಅಲಂಕರಿಸಿಕೊಳ್ಳುತ್ತ. (ಈತೆರದ + )ಅಮಂಗಲಚರಿತ್ರನು —ಈಶ್ವರನು ವ್ಯವಹಾರದೃಷ್ಟಿಯಿಂದ ಅಮಂಗಲಚರಿತ್ರನಾದರೂ ಪರಮಾರ್ಥದೃಷ್ಟಿಯಿಂದ ಯಾವ ಅಮಂಗದ ಲೇಪವೂ ತನಗೆ ಹತ್ತುವದಿಲ್ಲವೆಂದು ಉದಾಹರಣೆಯಾಗಿರುವಷ್ಟು ಮಂಗಲಕರವಾಗಿರುವ ಅಂತಃಸ್ವರೂಪವುಳ್ಳವನು.

೨. ಢಾಳಕರಿಗೆ—ದಂಭಗಾರರಿಗೆ. ಕಾಳುಗೂಳರಿಗೆ—ಕಾಡಾದ ಅಂದರೆ ಕೀಳಾದ ಕೂಳನ್ನು ತಿನ್ನುವವರಿಗೆ (ತಿನ್ನ ಬಾರದ್ದನ್ನು ತಿನ್ನುವವರಿಗೆಂದರ್ಥ). ಕಾಳುಗೆಡಿಪ—ಹೀನವಾಗಿ ಮಾಡುವ. ಜಾಳುಬೋಳುಗಳಿಂಗೆ—ಒಳಗೇನೂ ಹುರಳಿಲ್ಲದೆ ಒಣಮಾತನ್ನಾಡುವವರಿಗೆ.

೩. ಶಿಕ್ಷಿತರಿಗೆ—ಗುರುಹಿರಿಯರ ಅಧೀನರಾಗಿ ಬೆಳೆದವರಿಗೆ. ಶಿವಾಗಮ . . ದೀಕ್ಷೆಪಡೆದವರಿಗೆ—ಇಲ್ಲಿ ಕವಿಯು ಶಿವಾಗಮಕ್ಕೂ ಶಿವಮಂತ್ರಕ್ಕೂ ಪ್ರಾಧಾನ್ಯವನ್ನು

ಶಿಕ್ಷಿತರಿಂಗೆ, ಶಿವಾಗಮಂಗಳ । ಪೇಕ್ಷೆಯುಳ್ಳವರಿಂಗೆ, ಶಿವಪಂ।
ಚಾಕ್ಷರಿಯ ಮಂತ್ರೋಕ್ತವಿಧಿಯಲಿ ದೀಕ್ಷೆಪಡೆದರಿಗೆ, ॥
ಮೋಕ್ಷಕಾಂಕ್ಷಕರಿಂಗೆ, ಮೌನದ । ಲಕ್ಷರಬ್ರಹ್ಮವನು ತಿಳಿದು ನಿ ।
ರೀಕ್ಷಿಸುವ ನಿಪುಣರಿಗೆ ಪೇಳೀ ಅನುಭವಾಮೃತವ ॥ ೩ ॥

ತನು ಕರಣ ಮೊದಲಾದುವನಿತನು । ಘನವಿವೇಕದಿ ನೇತಿಗಳೆದುಳಿ ।
ದನುಪಮದ ಶೇಷಿತ ನಿರಾಕರಿಸಲ್ಕಶಕ್ಯವಲಾ ! ॥
ಎನುತ ನನ್ನೊಳು ನಾನೆ ನನ್ನನು । ನೆನೆದು ಚಿನ್ಮಯನಾದೆನೆನಗೇ ।
ಕನಘ, ಸಹಜಾನಂದ ತೋರದದೇನು ? ಹೇಳೆಂದ ॥ ೪ ॥

ತನಯ ತತ್ತ್ವವ ತಿಳಿದ ಮಾತ್ರದಿ । ತನುವು ತಾನೆಂದೆಂಬ ವಾಸನೆ ।
ಮನಕೆ ಬಿಡದದರಿಂದ ಭೂಮಿಕೆಗಳನು ದೃಢವಾಗಿ ॥
ಅನವರತವಭ್ಯಾಸದಿಂದಲಿ । ಮನನವನು ಮಾಡುತ್ತಲಿರುತಿರ ।
ಲನಘ, ಪರಮಾನಂದವಹುದ್ಯೆ ಕ್ಲೇಶವಳಿದಾಗ ॥ ೫ ॥

ಕ್ಲೇಶಪಂಚಕವೆನಲವಿದ್ಯಾ । ಕ್ಲೇಶವೊಂದಸ್ಮಿತೆಯೆರಡು ; ಕೇ ।
ಳಾಸೆವಡೆದಿಹ ರಾಗ ಮೂರಾ ದ್ವೇಷವದು ನಾಲ್ಕು ; ॥
ಈಸರಲಿ ಬಿಡದಭಿನಿವೇಶದಿ । ಸೂಸಿ ಸುಳಿಯುತ ತೊಡರಿ ಸುಖದ ವಿ ।
ನಾಶವೈದನೆಯಾದ ಕಡೆಯಾಕ್ಲೇಶವೆನಿಸುವದು ॥ ೬ ॥

ತನ್ನನರಿಯದುದೇ ಅವಿದ್ಯೆಯ । ದನ್ಯದೊಳು ತಾನೆಂಬುದಸ್ಮಿತೆ ।
ಯುನ್ನತದ ಭೋಗಾಭಿಲಾಷೆಯೆ ರಾಗವೆನಿಸುವದು ; ॥

---

ಕೊಟ್ಟಿರುವದು ಅವುಗಳಲ್ಲಿ ಅವನ ಪ್ರೇಮವಿಶೇಷವನ್ನು ತೋರಿಸುವದೆಂದು ಮಾತ್ರ ಗ್ರಹಿಸಬೇಕು. ಹಾಗಲ್ಲದಿದ್ದರೆ ಉಳಿದ ದೇವತೆಗಳ ಉಪಾಸಕರು ಮುಕ್ತಿಗೆ ಅರ್ಹರೇ ಅಲ್ಲವೆಂದು ಹೇಳಿದಂತಾಗುವದು. ಜ್ಞಾನಿಗಳೆಂದಿಗೂ ಹಾಗೆ ಹೇಳುವದಿಲ್ಲ. ಮುಖ್ಯವಾಗಿ ಸಚ್ಛಾಸ್ತ್ರಗಳ ಮೇಲೆಯೂ ಸನ್ಮಂತ್ರಗಳ ಮೇಲೆಯೂ ಆದರವುಳ್ಳವರಾದರಾಯಿತು. ಮೌನದಲ್ಲಿ—ಶ್ರವಣಮಾಡಿದ ಅರ್ಥವನ್ನು ಮನಸ್ಸಿನಲ್ಲಿ ಯುಕ್ತಿಯಿಂದ ಹೊಂದಿಸಿಕೊಳ್ಳುತ್ತ. ನಿರೀಕ್ಷಿಸುವ—ಆ ಬ್ರಹ್ಮವನ್ನೇ ಅನುಸಂಧಾನಮಾಡುವ.

೪. ಚಿನ್ಮಯನಾದೆನು—ಜ್ಞಾನಸಸರೂಪನಾದೆನೆಂದು ತಿಳಿದೆನು.

೬. ಈಸರಲಿ—ಇವೆಲ್ಲವುಗಳಲ್ಲಿಯೂ

ಮುನ್ನಲದು ಪ್ರತಿಕೂಲಮಾದೊಡೆ । ನನ್ನಿಯದರಿಂ ದ್ವೇಷವಿವರೊಳು ।
ಗನ್ನಗತಕದಿ ತೊಡರಿ ಬಿಡದಿಹುದಭಿನಿವೇಶವದು ॥ ೭ ॥

ಕ್ಲೇಶಪಂಚಕದಿಂದ ಜೀವನು। ಮೋಸದಿಂದಜ್ಞಾನವೆಡೆಗೊಳ ।
ಲಾಸೆಬಟ್ಟನ್ಯದೊಳು ಭೋಗಾಪೇಕ್ಷೆಯನು ಮಾಡಿ ॥
ದ್ವೇಷದಿಂದುರಿದುರಿದು ಬೇವುತ । ಗಾಸಿಯಾಗಲು ಮತ್ಸರದಿ, ಬಹು ।
ವಾಸಿಸಂಥಗಳಿಂದ ಸುಖ ಮೈದೋರದಿಹುದೆಂದ ॥ ೮ ॥

ಭೋಗಲೋಭರಿಗಹುದು ಹೆಂಗಳ । ಮೇಗೆ, ಧನಗೃಹಗಳಲಿ ಕೇಳ್ಕೆ ।
ರಾಗದ ವಿಕಾರಗಳು—ಕಾಮಕ್ರೋಧಲೋಭಗಳು ; ॥
ಆಗಲವರುರೆ ಸಿಲುಕಿ, ದುಃಖದ । ಸಾಗರದೊಳೋಲಾಡಿ, ಸೌಖ್ಯವ ।
ನೀಗಿ ಕಳೆವರು ಮೋಹಮದಮತ್ಸರದ ಬೇಗೆಯಲಿ ॥ ೯ ॥

ಅಷ್ಟಮದ ತಲೆಗೇರಿ, ಹೆಮ್ಮೆಯ।ಬಟ್ಟೆಯಲಿ ತಾ ಬೆರೆತು, ತಟ್ಟನೆ ।
ಕೆಟ್ಟನುಡಿಯಲಿ ಗುರುಹಿರಿಯರೆಂದೆಂಬುವರ ಜರಿದು, ॥
ದುಷ್ಟಸಂಗವ ಮಾಡಿ, ದುರಿತದ । ಬಟ್ಟೆಯನು ಹತ್ತಿರ್ದ ಮನುಜನು ।
ಕಟ್ಟಳಿಲ್ಲದ ದುಃಖದೊಳಗೋಲಾಡುತಿಹನೆಂದ ॥ ೧೦ ॥

ಕರುಣ, ಭಯ, ಶಂಕಾ, ಜುಗುಪ್ಸೆಗ । ಳುರುತರದ ಕುಲ, ಜಾತಿ,ಶೀಲ,।
ಸ್ಫುರಿತಲಜ್ಜೆಗಳೆಂಬ ಬಲುಹುರಿಯಷ್ಟಪಾಶದಲಿ ॥
ಬರಿಯ ಭ್ರಮೆಯಲಿ ಬದ್ಧರಾದರು । ಸುರನರೋರಗರವರಿಗೊಮ್ಮೆಯು ।
ದೊರಕಲರಿವುದೆ ಸೌಖ್ಯ ? ದುಃಖದಿ ಬೇಯುತಿಹರೆಂದ ॥ ೧೧ ॥

ಹಸಿವುತೃಷೆಗಳು ಪ್ರಾಣವನು ಬಾ । ಧಿಸುವವಂತಾ ಶೋಕಮೋಹಗ ।
ಳಿಸೆದು ಮನವನು; ತಿಳಿ ಜರಾಮರಣಗಳು ದೇಹವನು ; ॥
ಬಸವಳಿದು ಬಹುದುಃಖದುಬ್ಬೆಯ । ವಶಕೆ ಸಿಕ್ಕಿ ಷಡೂರ್ಮಿಗಳಲು ।
ಬ್ಬಸದೊಳೊಮ್ಮೆಯು ಕಾಣದಳಲುವರೇನ ಹೇಳುವೆನು ! ॥ ೧೨ ॥

---

೯. ಭೋಗಲೋಭರಿಗೆ—ಭೋಗದಲ್ಲಿ ಅತ್ಯಾಸಕ್ತಿಯುಳ್ಳವರಿಗೆ.

೧೦. ಅಷ್ಟಮದ—೪೯ ಅ. ೨ ಪ. ದಲ್ಲಿ ಬಂದಿದೆ. ಕಟ್ಟಳಿಲ್ಲದ—ಮಿತಿಯಿಲ್ಲದ

೧೧. ಅಷ್ಟಪಾಶ—೧ ಅ. ೨೨ ಪ. ದಲ್ಲಿಯೂ ವಿವರಿಸಿದೆ.

ಪುತ್ರ, ವಿತ್ತ, ಕಳತ್ರವೆನಿಸುವ । ವೀ ತ್ರಿತಯವಪ್ಪೀಷಣಂಗಳ ।
ಚಿತ್ರವೆನಿಸುವ ಲೋಭಮೋಹವುನ್ಮತ್ವದಲಿ ಸಿಲುಕಿ ॥
ಅತ್ಯಧಿಕದುಃಖಾರ್ಣವದ ತಾ । ಪತ್ರಯಗಳಲಿ ಬೆಂದು, ಕರ್ಮದ ।
ಮೊತ್ತದಲಿ ಜಳ್ಳಾಗೆ ಸುಖ ಮೈದೋರದಿಹುದೆಂದ ॥ ೧೩ ॥

ಲೋಕವಾಸನೆ, ದೇಹವಾಸನೆ, । ಬೇಕೆನಿಪ ಬಹುಶಾಸ್ತ್ರವಾಸನೆ, ।
ಸಾಕೆನಿಸದಿಹ ಪುತ್ರಮಿತ್ರರ ಬಯಕೆಯೆಂದೆಂಬ ॥
ಆ ಕುವಾಸನೆಗಳೊಳು ಮಿಗೆ ಮನ । ತಾಕಿಕೊಂಡಿರುತಿರಲು ಬಳಿಕಲ ।
ನೇಕ ಗಾಸಿಗಳಾಗಿ ಸುಖ ಮೈದೋರದಿಹುದೆಂದ ॥ ೧೪ ॥

ವೇದ, ಶಾಸ್ತ್ರ, ಪುರಾಣ, ಸಂಹಿತೆ । ಯಾದಿಯಾದವನೋದಲದರಿಂ ।
ದಾದ ಫಲವೇನದರ ಸಾರವನರಿಯದೇ ಬರಿದೆ ? ॥
ಬೂದಿಯೊಳಗಣ ಹೋಮದಂದದಿ । ವಾದದಲಿ ಹೊಡೆದಾಡಿ ಹೊಟ್ಟೆಯ ।
ಕಾದ ಕಿಚ್ಚಿಗೆ ಕಲಿಯೆ ಸುಖ ಮೈದೋರದಿಹುದೆಂದ ॥ ೧೫ ॥

ಕ್ಷೀರದೊಳು ಹುಳಿಗಲಸಿದಂದದಿ, । ಸಾರಸುಧೆ ವಿಷವೆರಸಿದಂದದಿ, ।
ತೋರವಹ ಬೆಲ್ಲದಲಿ ಬೇವೆಡೆಗೊಂಡ ತೆರನಂತೆ, ॥
ಪಾರಮಾರ್ಥಿಕವಪ್ಪ ಸುಖಸಾ । ಕಾರಸಾಗರದೊಳಗೆ ಮಿಶ್ರಿತ ।
ಘೋರತರ ಸಂಸಾರದುಃಖವಿದೆಂದನಾ ಮುನಿಪ ॥ ೧೬ ॥

ಇಂತು ನಿಜಸುಖ ಸಕಲದುಃಖಾ । ಕ್ರಾಂತವಾಗಿರೆ ಮಗನೆ, ನಿನಗಿ ।
ನ್ನೆಂತು ನಿತ್ಯಾನಂದ ತೋರ್ಪುದು ಚಪಲಚಿತ್ತದಲಿ ? ॥
ಸಂತತವು ಸಚ್ಛಾಸ್ತ್ರಗುರು ಪೇ । ಳ್ದಂತರಿಯಲೇಕಾಗ್ರಚಿತ್ತದ ।
ಲಂತವಿಲ್ಲದ ಸೌಖ್ಯ ತೋರುವದೆಂದನಾ ಮುನಿಪ ॥ ೧೭ ॥

---

೧೨. ಮನವನು ಮತ್ತು ದೇಹವನ್ನು ಎಂಬ ಕರ್ತೃಗಳಿಗೂ ಬಾಧಿಸುವವು ಎಂಬ ಕ್ರಿಯೆಯನ್ನು ಅನ್ವಯಿಸಿಕೊಳ್ಳಬೇಕು. ಉಬ್ಬೆ—ಸೆಕೆಯ ಬೇಗೆ. ಷಡೂರ್ಮಿಗಳು—ಆರು ಅಲೆಗಳು (ಮುಪ್ಪು, ಸಾವು, ಹಸಿವು, ಬಾಯಾರಿಕೆ, ಶೋಕ, ಮೋಹ).

೧೩. ಈಷಣ—ಅಪೇಕ್ಷೆ (ಮಕ್ಕಳಪೇಕ್ಷೆ, ಹಣದಪೇಕ್ಷೆ, ಹೆಂಡತಿಯಪೇಕ್ಷೆ). ತಾಪತ್ರಯ —೭ ಅ. ೨೦ ಪ. ದಲ್ಲಿದೆ.

೧೬. ತೋರವಹ—ದೊಡ್ಡದಾದ. ಮಿಶ್ರಿತ—ಕೂಡಿರುವದು.

ಸತ್ಯಸಹಜಾನಂದಸಾಗರ । ವೆತ್ತ ನೋಡಿದಡತ್ತ ತುಂಬಿರ ।
ಲತ್ತಲಿತ್ತಲು ತುಳುಕಿ ಸೂಸುವ ತುಂತುರಿನ ತೆರದಿ ॥
ಸತ್ಯಲೋಕಾದಭ್ಯವಪ್ಪೀ । ಸಪ್ತಲೋಕಂಗಳಲಿ ಪಿಷಯಸು।
ಖಿತ್ವವೀ ಪರಿ ತೋರುತಿಹುದೀ ನಿತ್ಯಮುಕ್ತನಲಿ ॥ ೧೮ ॥

ಯಮ,ನಿಯಮ ಮೊದಲಾದ ಯೋಗ।ಕ್ರಮದೊಳಭ್ಯಾಸವನು ಮಾಡಲು।
ಶಮದಮೆಗಳಳವಟ್ಟು, ಚಿತ್ತದ ವೃತ್ತಿಗಳು ಕೆಟ್ಟು, ॥
ಭ್ರಮೆಯಡಗಿ, ವಿಷಯೇಚ್ಛೆಯಲಿ ನಿ।ರ್ಮಮತೆಯಾಗಿ,ಸಮಸ್ತದಲಿ ಮನ।
ವಿಮಲವಾಗಿರೆ ನಿತ್ಯಸುಖ ಪ್ರತಿಫಲಿಸಿ ತೋರುವದು ॥ ೧೯ ॥

ಚಿಂತೆಯಿಲ್ಲದ ಹೊತ್ತಿನಲಿ ಕೇ । ಳಂತರಂಗದ ವೃತ್ತಿಗಳನುಳಿ ।
ದಂತಿದಿಂತಿಂತೆನ್ನದೇ ಏಕಾಂತಮಾಗಿರಲು ॥
ಅಂತವಿಲ್ಲದ ಸುಖವು ತೋರ್ಪುದ । ದೆಂತೆನಲು ನಿಶ್ಚಲದಲಿಪ್ಪ ಜ।
ಲಾಂತದಲಿ ಬಿಂಬಿಸುವ ಛಾಯಾಕಾಂತನಂದದಲಿ ॥ ೨೦ ॥

ಬೇಸರಿಕೆಯಿಲ್ಲದೆ, ಸಮಸ್ತದೊ । ಳಾಸೆಯೇನಂಕುರಿಸಿ ತೋರದೆ, ।
ವಾಸನೆಯ ತೊಡಕೇನು ಹೊದ್ದದೆ, ದುಃಖಸುಖವೆಂಬ ॥
ಲೇಶಮಾತ್ರವು ಪೊಳೆಯದಿಹ ವಿಷ । ಯಾಸಕತಿಯಳಿದಿರಲು ನಿಜಸುಖ ।
ಸೂಸಿ ಸಂತತ ತೋರುತಿಹುದೈ ಮಗನೆ ಕೇಳೆಂದ ॥ ೨೧ ॥

ಸುಳಿದು ಜಾಗ್ರತ್ಸ್ವಪ್ನಗಳಲತಿ । ಬಳಲಿ ದುಃಖಿಸ ಬುದ್ಧಿ ಪುಣ್ಯದ ।
ಬೆಳವಿಗೆಯಲೊಮ್ಮೊಮ್ಮೆ ಸುಷುಪ್ತಾವಸ್ಥೆಯಾದಾಗ ॥
ಬೆಳಗುತಿಹ ನಿಜಸುಖದೊಳಗೆ ತಾ । ಮುಳುಗಿ ಸುಖಿಸುತ್ತಿರ್ಪುದದರಿಂ ।
ತಿಳಿಯೆ ಸಹಜಾನಂದವಂತಿಂತೆಂಬುದರಿದೆಂದ ॥ ೨೨ ॥

---

೧೮. ಸಪ್ತಲೋಕಂಗಳು— ೧೦ ಅ. ೧೮ ಪ. ದಲ್ಲಿರುವ ಮೇಲಿನ ೭ ಲೋಕಗಳು. ನಿತ್ಯಮುಕ್ತನಲಿ—ನಿತ್ಯಮುಕ್ತವಾದ ಬ್ರಹ್ಮದಲ್ಲಿ ಸಪ್ತಲೋಕಗಳು ತೋರಿ ಅದರಲ್ಲಿ ವಿಷಯಸುಖಿತ್ವವು ಸಹಜಾನಂದದ ತುಂತುರಿನಂತೆ ತೋರುತ್ತಿರುವದೆಂದು ತಾತ್ಪರ್ಯ.

೧೯. ಯಮ—ಈ ಅಂಗಗಳಿಗೆ ೨ ಅ. ೩೬ ಪ. ವನ್ನು ನೋಡಿ. ಶಮದಮೆ—ಮನಸ್ಸೂ ಮತ್ತು ಇಂದ್ರಿಯಗಳೂ ಹಿಡಿತದಲ್ಲಿರುವದು.

೨೦. ಛಾಯಾಕಾಂತ—ಛಾಯಾದೇವಿಯ ಗಂಡನಾದ ಸೂರ್ಯ.

ರಾಗವುದಿಸದೆ ಮನಕೆ, ತನುವಿಗೆ । ರೋಗವೆಂಬುದು ಹೊದ್ದದೇ, ಉ ।
ದ್ವೇಗವೆಂಬೀ ತೊಡಕು ತೋರದೆ, ಹಸಿವುತೃಷೆಯೆಂಬ ॥
ಬೇಗೆಯಸುವನು ಬಾಧಿಸದೆ, ದೃಢ । ವಾಗಿ ವಾಸನೆಯಡಗಲಾ ಸುಖ ।
ಸಾಗರದೊಳುಲುಹಡಗಿದಂತಿಹುದೆಂದನಾಮುನಿಪ ॥ ೨೩ ॥

ಕತ್ತಲೆಯ ಕಾಲಾಟವಡಗಿರ । ಲೆತ್ತ ನೋಡಿದೊಡತ್ತ ಬೆಳಕಿನ ।
ಮೊತ್ತವೆಡೆಗೊಂಡಿಪ್ಪ ತೆರದಲಿ ಸಂಸೃತಿಯ ದುಃಖ ॥
ಉತ್ತರಿಸಿ ಹೋದಾಗ ನಿಜಸುಖ । ವೊತ್ತರಿಸಿ ಹೊರಹೊಮ್ಮಿ ತೋರುವ ।
ದುತ್ತಮನೆ, ಇದು ನಿತ್ಯಸುಖವೆಂದರಿತುಕೋ ಎಂದ ॥ ೨೪ ॥

ಉಮ್ಮಳಿಸುತಡಿಗಡಿಗೆ ಸಂಸೃತಿ । ಬಿಮ್ಮನಿಂದೊಳಗೊಳಗೆ ತೋರುವ ।
ಹಮ್ಮಳಿಯೆ ಪರಿವೇಷವಡಗಿದ ಸೂರ್ಯನಂದದಲಿ ॥
ಬ್ರಹ್ಮಸುಖವೊತ್ತರಿಸಿ ಪೊಳೆವುದು । ನಿರ್ಮಲನಿರಾತಂಕನಿಶ್ಚಲ ।
ಧರ್ಮವಾದಪರೋಕ್ಷದನುಭವ ಬುದ್ಧಿಯೊಳಗೆಂದ ॥ ೨೫ ॥

ಸುರತಕಾಲದಿ ಪುರುಷ ಮಾಡುವ । ಹಿರಿದು ಸಂಕ್ಲೇಶವದು ಕಾಮಿನಿ ।
ಯರಿಗೆ ಹಿತವಾಗದನವರು ಸುಖವೆಂದು ಕಾಂಬಂತೆ ॥
ಭರಿತಪರಮಾನಂದದೊಳು ತಾ । ಬೆರೆದು ತನ್ಮಯನಾಗಿರಲು ಸಂ ।
ಸರಣದುಃಖವದೆಲ್ಲ ಸುಖಮಯವಾಗಿ ತೋರುವದು ॥ ೨೬ ॥

ಸುರತಸುಖದಲಿ ದೇಹಭಾವವ । ಮರೆದು ತನ್ಮಯವಾಗಿ ತೋರುವ ।
ತೆರದಲಪರೋಕ್ಷಾನುಭವವಾದದ್ವಯಾನಂದ ॥
ಭರಿತವಾಗಿಹ ಯೋಗಿಯನ್ಯವ । ಮರೆದು ತಾದಾತ್ಮ್ಯದಲಿ ಸತ್ತಾ ।
ಸ್ಫುರಣಮಾತ್ರವೆ ಆಗಿ ನಿಶ್ಚೇಷ್ಟೆಯಲಿ ನಿಂದಿಹನು ॥ ೨೭ ॥

---

೨೨. ಇಲ್ಲಿ ೩-೬ಲನೇ ಪದ್ಯದ ಅರ್ಥವನ್ನು ನೆನಪಿಗೆ ತಂದುಕೊಳ್ಳಬೇಕು.

೨೩. ಉಲುಹು—ಸದ್ದು.

೨೪. ಉತ್ತರಿಸಿ—ದಾಟಿ, ಕಳೆದು.

೨೫. ಉಮ್ಮಳಿಸುತ್ತ-ಉಕ್ಕುತ್ತ. ಪರಿವೇಷ-ದುಂಡಗೆ ಸುತ್ತಲೂ ಮೂಡಿದರೇಖೆ.

೨೭. ಸತ್ತಾಸ್ಫುರಣ—ತಾನೊಬ್ಬನಿದ್ದೇನೆಂಬ ಅರಿವು. ಈ ಪದ್ಯವು " ತದ್ಯಥಾ ಪ್ರಿಯಯಾ ಸಂಪರಿಷ್ವಕ್ತೋ ನ ಬಾಹ್ಯಂ ಕಿಂಚನ ವೇದ ನಾಂತರಮೇವಮೇವಾಯಂ

ಸುಖದ ಸೋನೆಯೆನಿಪ್ಪ ತಾನೇ। ನಿಖಿಲವಾದಿಂದ್ರಿಯಗಳಲಿ ವ್ಯಾ।
ಪಕನೆನಿಸುತಿಹ; ಪುಣ್ಯಫಲದಿಂದೆತ್ತಲಾನೊವ್ಮೆ ॥
ಸಕಲತನುಕರಣಗಳು 'ಹಾ !' ಎಂ।ದಕಟ ತನ್ಮಯವಾಗೆ ಸುಖದೊಳು।
ವಿಕಲಮತಿಗಳು ವಿಷಯಸುಖವೆಂದೆಂಬರದನೆಂದ ॥ ೨೮ ॥

ಎತ್ತಲಾನೊವ್ಮೊವ್ಮೆ ದುಃಖದಿ । ಸುತ್ತಿ ಸುಳಿದಾಡುತ್ತ ಬಳಲಿದ ।
ಚಿತ್ತ ನಿದ್ರೆಯ ಹೊಂದಿ ವೈಮರೆದಿದ್ದ ಕಾಲದಲಿ ॥
ನಿತ್ಯಸುಖವುಚ್ಚಳಿಸಿ ಹೊಳೆಯಲು । ಮತ್ತದನು ನಿದ್ರೆಯೊಳಗನುಭವಿ ।
ಸುತ್ತ ನಿದ್ರಾನಂದವೆಂಬರು ಮರುಳರೆಲೆ ಕೇಳು ॥ ೨೯ ॥

ಅದು ನಿಮಿತ್ತದಲಾತ್ಮಸುಖ ತನ । ಗುದಿಸುವದು ನಿಸ್ಸಂಗವಳವಡೆ ।
ವಿದಿತವಾದೈದನೆಯ ಭೂಮಿಕೆಯಲ್ಲಿ ಸಾಧಕಗೆ ; ॥
ಪುದಿದ ಚಿದಚಿತ್ತುಗಳ ಭೇದವ । ವಿಧಿಸಿ ತಿಳಿಯಲು ಮೋಕ್ಷವೆರಡರ ।
ಲೊದವಿಕೊಂಡಿರೆ ಬಂಧವದು ; ಶುಕಯೋಗಿ ಕೇಳೆಂದ ॥ ೩೦ ॥

ಅನ್ನಮಯ ಮೊದಲಾದ ಕೋಶಗ । ಳನ್ಯವಲ್ಲೆಂಬಾತ್ಮಬುದ್ಧಿಯೆ ।
ಬನ್ನ ಬಡಿಸುವ ಬಂಧನವು ; ತಾನಲ್ಲವೆಂದೆಂಬ ॥
ಭಿನ್ನಬುದ್ಧಿಯೆ ಮೋಕ್ಷ; ನಿಜ ಚೈ । ತನ್ಯರೂಪಗೆ ನಿತ್ಯಮುಕ್ತಗ ।
ನನ್ಯಗಾತ್ಮಂಗಿಲ್ಲ, ಬುದ್ಧಿಗೆ ಬಂಧಮೋಕ್ಷಗಳು ॥ ೩೧ ॥

---

ಪುರುಷಃ ಪ್ರಾಜ್ಞೇನಾತ್ಮನಾ ಸಂಪರಿಷ್ವಕ್ತೋ ನ ಬಾಹ್ಯಂ ಕಿಂಚನ ವೇದ ನಾನ್ತರಂ' ಎಂಬ ಬೃಹದಾರಣ್ಯಶ್ರುತಿಯ ಅನುವಾದ.

೩೦. ಇಲ್ಲಿ ೩-೬ಲನೇ ಪದ್ಯದ ವಿವರಣೆಯನ್ನು ನೆನಪಿಗೆ ತಂದುಕೊಳ್ಳಬೇಕು. ಆತ್ಮಸುಖತನಗುದಿಸುವದು—ನಿಸ್ಸಂಗವೆಂಬ ಮೂರನೆಯ ಭೂಮಿಕೆಯಾದ ಮೇಲೆ ನಾಲ್ಕನೆಯದಾದ ವಾಸನಾಕ್ಷಯದಲ್ಲಿ ಜ್ಞಾನವಾಗಿ ಐದನೆಯದಾದ ಆನಂದಿನಿಯಲ್ಲಿ ಅದರ ಸುಖವು ತೋರುವದು. ಮೋಕ್ಷ—ಚಿತ್ತು ಮತ್ತು ಅಚಿತ್ತು (ಜಡ) ಇವೆರಡರ ಭೇದವನ್ನು ತಿಳಿದು ಅಚಿತ್ತನ್ನು ಬಿಟ್ಟು ಚಿತ್ತನ್ನು ಹಿಡಿಯುವದು. ಬಂಧ-ಚಿತ್ತೂ ಅಚಿತ್ತೂ ಇವೆರಡರ ಭೇದವನ್ನರಿಯದೆ ಒಂದನ್ನು ಇನ್ನೊಂದನ್ನಾಗಿ ಅರಿತು ವ್ಯವಹರಿಸುವದು.

೩೧. ಆತ್ಮಂಗಿಲ್ಲ—(ಬಂಧಮೋಕ್ಷಗಳು) ಆತ್ಮನಿಗಿಲ್ಲ (ಬುದ್ಧಿಗೆ ಸಂಬಂಧಪಟ್ಟವುಗಳು).

ದೇಹವೇ ತಾನೆಂದು ಮಾಯಾ । ಮೋಹಪಾಶದಿ ಬದ್ಧನಾಗಿಹ ; ।
ದೇಹವದು ಘಟದಂತೆ ಭೌತಿಕವಂತು ತಾನಲ್ಲ ; ॥
ದೇಹಧರ್ಮವನರಿವ ಸಾಕ್ಷಿಯೆ । ಸೋಹಮೆನಿಪಾ ಪ್ರತ್ಯಗಾತ್ಮನು, ।
ಮೋಹರಹಿತನು, ನಿತ್ಯಮುಕ್ತನು ಮಗನೆ ಕೇಳೆಂದ ॥ ೩೨ ॥

ದೇಹವದು ಜಡನಾತ್ಮನಜಡನು ; । ದೇಹವದು ಸಾವಯವವಾತ್ಮನ
ನೂಹಿಸಲು ನಿರವಯವ ; ದೇಹವಪಾತ್ರವಧ್ರುವವು, ॥
ಓಹೊ ! ಪಾವನನಾತ್ಮ ನಿತ್ಯನು ; । ದೇಹಕರ್ಮದಿ ಬದ್ಧನಾತ್ಮನು ।
ಮೋಹರಹಿತನು ನಿತ್ಯಮುಕ್ತನು ; ಮಗನೆ ಕೇಳೆಂದ ॥ ೩೩ ॥

ಅರಿಯದಜ್ಞರು ತನುವು ತಾವೆಂ । ದರಿವರಾ ಅಸುಸಹಿತಲಾತ್ಮನು ।
ಹೊರವಡಲು ಹೆಣನೆನಿಸಿ ಹೇಳಿಸಿಕೊಂಬುದಾಕ್ಷಣಕೆ ; ॥
ಪರಮಚೈತನ್ಯಾತ್ಮ ತಾನೆಂ । ದರಿಯೆ ಮುಕ್ತನು ; ತಿಳಿಯದೀ ತನು ।
ಕರಣಗಳು ತಾನೆಂದು ಬಗೆಯಲು ಬದ್ಧನಾಗಿಹನು ॥ ೩೪ ॥

ನಿತ್ಯಮುಕ್ತಗೆ ಬಂಧಮೋಕ್ಷಗ । ಳೆತ್ತಣದು ? ' ಜಗಭರಿತ ಬಂದಪ ।
ನಿತ್ತ, ಮುಚ್ಚಿಹೆ ಕದವ ತೆಗೆ'ಯೆಂದೆಂಬ ಕಥೆಯಂತೆ ॥
ಸತ್ಯಸಹಜಾನಂದನದ್ವಯ । ಪ್ರತ್ಯಗಾತ್ಮನೆನಿಪ್ಪ ಪರಮಗೆ ।
ಮಿಥ್ಯವಹೆ ಮಾಯಾಪ್ರಬಂಧವದಿಲ್ಲ ನೋಡೆಂದ ॥ ೩೫ ॥

ಬುದ್ಧಿಯುಳಿದೊಡನಳಿದವೋಲಿಹ; । ಬುದ್ಧಿ ತೋರಲು ತೋರಿದಂತಿಹ; ।
ಬುದ್ಧಿ ಜಡವಾಗಿರಲು ಜಡವಾದಂತೆ ತಾನಿಹನು ; ॥
ಬುದ್ಧಿಗಾತ್ಮವಿವೇಕವಳಿದರೆ । ಬದ್ಧನಾಗಿಹನರಿಯೆ ಮುಕ್ತನು; ।
ಬುದ್ಧಿಯದು ಸವಿಕಾರಿಯಾತ್ಮನು ತಿಳಿಯಲವಿಕಾರಿ ॥ ೩೬ ॥

---

೩೨. ಅಂತು ತಾನಲ್ಲ—ತಾನು ಅಂದರೆ ಆತ್ಮವು ಘಟದಂತೆ ಭೌತಿಕವಲ್ಲ.

೩೪. ಆತ್ಮನು—ಜೀವನು. ಅರಿಯೆ—ತಿಳಿದುಕೊಂಡರೆ.

೩೫. ಜಗ . . . . ತೆಗೆ—'ಎಲ್ಲೆಲ್ಲಿಯೂ ತುಂಬಿಕೊಂಡಿರುವವನು ಬಂದನು, ಕದವನ್ನು ತೆಗೆ' ಎಂಬ ಮಾತುಗಳು ಒಂದಕ್ಕೊಂದು ಹೊಂದುವದಿಲ್ಲ. ಏಕೆಂದರೆ ಅವನು ಎಲ್ಲೆಲ್ಲಿಯೂ ತುಂಬಿಕೊಂಡಿರುವದರಿಂದ ಕದವನ್ನು ತೆಗೆದುಕೊಂಡು ಒಳಕ್ಕೆ ಹೋಗಬೇಕಾಗಿಲ್ಲ; ಮೊದಲಿಂದಲೂ ಅವನು ಅಲ್ಲಿಯೂ ಇರುವನು.

ಬುದ್ಧಿ ಮಾಡಿದ ಸುಕೃತ ದುಷ್ಕೃತ । ಹೊದ್ದದಾತ್ಮನನೆಂತೆನಲು ಕದ ।
ಡಿದ್ದ ನೀರೊಳು ಹೊಳೆವ ಸೂರ್ಯಗೆ ಕಂಪಕಲುಷಗಳು ॥
ಹೊದ್ದಿದಂತಿಹುದೈಸೆ ; ನಿಜವಾ । ಗಿದ್ದ ಸೂರ್ಯನಿಗುಂಟೆ ? ಆ ಪರಿ ।
ಬುದ್ಧಿಸಾಕ್ಷಿಯು ಬುದ್ಧಿಕೃತದಿಂ ಬದ್ಧವಲ್ಲೆಂದ　　॥ ೩೭ ॥

ಆದೊಡೀ ಆತ್ಮಂಗೆ ಗುರುಮುಖ । ಬೋಧೆಯೇಕೇದೆನಲವಿದ್ಯೋ ।
ಪಾಧಿಯಿಂದಾತ್ಮಂಗೆ ಮಿಥ್ಯಾರೂಪಸಂಸಾರ ॥
ಆದ ಕತದಿಂದದನಳಿಪೊಡೀ । ಬೋಧೆಯಲ್ಲದೆ ನಿತ್ಯಮುಕ್ತಗೆ ।
ಬೋಧೆಯೇತಕೆ ? ಸ್ವಪ್ರಕಾಶಾನಂದವಿಗ್ರಹಗೆ　　॥ ೩೮ ॥

ಅದುನಿಮಿತ್ತದಿ ಬುದ್ಧಿ ಮಾಡಿದ । ವಿಧಿಗಳೆಲ್ಲವು ಬುದ್ಧಿಗಲ್ಲದೆ ।
ಸದಮಲಾನಂದಾತ್ಮಗಿಲ್ಲೆಲೆ ನಿರಭಿಮಾನಂಗೆ ; ॥
ಬುಧರು ಬುದ್ಧಿಯ ಯೋಗದಭ್ಯಾ । ಸದಲಿ ಸಹಜಾನಂದಸಂವಿ ।
ತ್ಪದದೊಳೈಕ್ಯವ ಮಾಡಿ ಮುಕ್ತಿಯ ಪಡೆದು ಸುಖಿಸುವರು　　॥ ೩೯ ॥

ಜಲದೊಳಗೆ ಜಲರುಹ, ಪರಾಗಾ । ವಳಿಯೊಳಗೆ ಪವಮಾನ, ಘನಸಂ
ಕುಲದೊಳಗೆ ನಭ, ದ್ರವ್ಯನಿಕರದಿ ಪಾದರಸದಂತೆ ॥
ಹೊಳೆಯುತಿಹ ಮಹದಾದಿತತ್ತ್ವಗ । ಳೊಳಗೆ ಹೊರಗೆಂದೆಂಬುದೆಲ್ಲವ ।
ಬಳಸಿ ತಾ ನಿರ್ಲೇಪನಾಗಿಹನಾತ್ಮ ನೋಡೆಂದ　　॥ ೪೦ ॥

ಋಷಿಯೆ ಕೇಳವಿಕಾರಿಯಾತ್ಮನು; । ಘಸಣೆಯವಗಿನ್ನಿಲ್ಲ ; ಜೀವನು ।
ಹುಸಿಯೆನಿಪನದರಿಂದಲವಗದು ಮುನ್ನಲೇ ಇಲ್ಲ ; ॥
ಎಸೆವಹಂಕೃತಿ ಘಟದವೊಲು ಜಡ । ವುಸುರಬಾರದದಕ್ಕೆ ಕಷ್ಟವ ; ।
ವಿಷಮವಹ ಸಂಸಾರವಿವರೊಳಗಾರಿಗಹುದೆಂದ ?　　॥ ೪೧ ॥

---

೩೬. ಅರಿಯೆ---ಆತ್ಮಸ್ವರೂಪವನ್ನು ತಿಳಿದರೆ. ತಿಳಿಯಲು---ವಿಚಾರಮಾಡಿ ನೋಡಿದರೆ.

೩೭. ಕಂಪಕಲುಷಗಳು----ನಡುಗುವಿಕೆ ಮತ್ತು ಹೊಲಸು.

೩೯. ಬುದ್ಧಿಯ----ಬುದ್ಧಿಯನ್ನು.

೪೦. ಘನಸಂಕುಲದೊಳಗೆ--ಮೇಘಗಳ ಗುಂಪಿನಲ್ಲಿ.

೪೧. ಋಷಿಯೆ---ಶುಕಋಷಿಯೆ. ಘಸಣೆ---ಸಂಸಾರದ ತಾಪತ್ರಯದ ತಿಕ್ಕಾಟ.

ಆದೊಡೀ ಸಂಸಾರವಾರಿಂಗೆ । ಬಾಧಕವದಾಯ್ತೆನಲು ಪುಸಿಯು ವಿ ।
ವಾದವೆಲ್ಲಿಯ ಮಾಯೆ ? ಆದರಿಂ ಸಂಸ್ಕೃತಿಯು ಮಿಥ್ಯ ; ॥
ಕಾದಿ ಬೂಸಿಯ ಹೊಯ್ದುಕೊಂಬರು । ವಾದದಲಿ ಶಾಸ್ತ್ರಿಗಳು ಬರಿದೇ ।
ಓದಿ ಮರುಳಹ ಕೂಸಿಭಟ್ಟನ ಗಾದೆಯಂದದಲಿ ॥ ೪೨ ॥

ಕೇಳು ಬಂಜೆಗೆ ಮಕ್ಕಳಿಪ್ಪ । ತ್ತೀಳು ಮಂದಿಗಳೆಂದು ತಿಳಿಯಲು ।
ಕಾಳಲಾ ಸಂಸಾರವಕಟಾ ! ಗಗನಲತೆಯಲ್ಲಿ ॥
ಹೇಳಲರಿಯದ ಕುಸುಮದಂದದಿ । ಲೀಲೆ ದಿಟವಿದು ; ಶಶವಿಷಾಣದ ।
ಪೋಲು ಭಾವಿಸೆ ಮಿಥ್ಯ ; ವಾದಿಗಭೇದ್ಯವಹುದೆಂದ ॥ ೪೩ ॥

ತನ್ನನರಿಯದವಿದ್ಯೆಯಿಂದು । ತ್ಪನ್ನವಾದೀ ಮನದ ಕಲ್ಪನೆ ।
ಭಿನ್ನಭೂತವ್ರಾತರೂಪವ ತೋರಿಸುತ್ತಿಹುದು ; ॥
ತನ್ನನರಿಯದವಿದ್ಯೆಯಿಂದಹ । ಭಿನ್ನಕಲ್ಪನೆಯುಳಿಯೆ ಸಂಸೃತಿ ।
ನಿರ್ಣಯಿಸಲಿನ್ನಾರಿಗದ್ವಯಪೂರ್ಣ ಬ್ರಹ್ಮದಲಿ ? ॥ ॥ ೪೪ ॥

ಉನ್ನತಸ್ತನನಿಮ್ನನಾಭಿಯ । ಕನ್ನೆಯನು ಚಿತ್ರಿಸಲು ಹಲಿಗೆಯ ।
ಲುನ್ನತಸ್ತನ ನಿಮ್ನನಾಭಿ ಸಮತ್ವವೆಂಬಂತೆ ॥

---

೪೩. ಈ ಪದ್ಯದಲ್ಲಿ ಕವಿಯು ಸಂಸಾರವನ್ನು ಬಂಜೆಯ ಮಕ್ಕಳಿಗೂ ಆಕಾಶದ ಹೂವಿಗೂ ಮೊಲದ ಕೋಡಿಗೂ ಹೋಲಿಸಿರುವದರಿಂದ ಅದು ಎಷ್ಟು ಮಾತ್ರವೂ ಇಲ್ಲವೇ ಇಲ್ಲವೆಂದು ಹೇಳಿದಂತಾಯಿತು. 'ಜಗತ್ತು ಕಾಣುವದಲ್ಲ!' ಎಂದರೆ ಇದು ಎಚ್ಚರದ ವಾಸನೆ. ಎಚ್ಚರದ ಮತ್ತು ಕನಸಿನ ಜಗತ್ತಿಗೆ ರಜ್ಜುಸರ್ಪವೂ ಶುಕ್ತಿ ರಜತವೂ ಹೋಲುವವು. ಜಗತ್ತು ಇಲ್ಲವೇ ಇಲ್ಲವೆಂಬ ಈ ಪದ್ಯದ ಹೋಲಿಕೆಗಳ ಸುಷುಪ್ತಿಯ ಅನುಭವವನ್ನು ಲಕ್ಷ್ಯದಲ್ಲಿಟ್ಟುಕೊಂಡು ಹೇಳಿದ್ದು. ಸುಷುಪ್ತಿಯ ಜೀವನು ಎಚ್ಚರದ ಜಗತ್ತನ್ನು ಸುಳ್ಳೆನ್ನುವನೆಂಬ ಈ ಅರ್ಥವನ್ನು ಈ ಕವಿಯು ೯ ಅ. ೩೦ ಪ. ದಲ್ಲಿ ತಾನೆ ಸೂಚಿಸಿರುವನು. ವಾದಿಗಭೇದ್ಯವಹುದು---ಸಂಸಾರವೇ ಇಲ್ಲವೆಂದು ತಿಳಿಯಬೇಕೇ ಹೊರತು ಸಂಸಾರವು ಆತ್ಮನಿಗೊ ಅಹಂಕಾರಕ್ಕೊ ಎಂದು ಮುಂತಾಗಿ ವಾದಿಸುತ್ತ ಹೋದರೆ ಕೊನೆಮುಟ್ಟುವದಿಲ್ಲವೆಂದರ್ಥ.

೪೪. ಭಿನ್ನಭೂತವ್ರಾತರೂಪವ---ಬೇರೆಬೇರೆಯಾಗಿರುವ ನೆಲ, ಜಲ, ಮೊದಲಾದ ಭೂತಗಳ ಸಮೂಹದ ರೂಪವನ್ನು. ಸಂಸೃತಿ . . . . ನ್ನಾರಿಗೆ--ಪೂರ್ಣಬ್ರಹ್ಮವು ಅದ್ವಯವಾಗಿ ಉಳಿದುಕೊಳ್ಳುವದರಿಂದ ಸಂಸಾರವು ಯಾರಿಗೂ ಇಲ್ಲವೆಂದರ್ಥ.

ಪೂರ್ಣವಾದಾ ಬ್ರಹ್ಮದಲಿ ಹೀ । ನೋನ್ನತಿಯದೆಲ್ಲಿಯದು ? ಸಕಲವು ।
ನಿರ್ಣಯಿಸೆ ಪುಸಿ ; ನಾಮರೂಪಿನ ಶಬ್ದಮಾತ್ರವದು　　॥ ೪೫ ॥

ಇಲ್ಲದುದನುಂಟೆಂದು ಮತ್ತಿ । ನ್ನಿಲ್ಲವೆಂದೆನಲೇಕೆ ? ಮಗುಳದ ।
ನುಳ್ಳದುದನುಂಟೆಂದು ಸಾಧಿಸಿ ಬರಿದೆ ಬಳಲಿಸುವ ॥
ಜುಳ್ಳುನುಡಿಗಳ ನುಡಿಯಲೇತಕೆ ? । ಇಲ್ಲವಿದು ನಾನಾತ್ವವದು ದಿಟ ।
ವುಳ್ಳು " ದೇಕೋವೇವ " ನೆಂದೊರಲುವವು ಶ್ರುತಿಸಿಕರ　　॥ ೪೬ ॥

ಈ ವಿಧದಲಿದಿರಿಟ್ಟು ತೋರುವ । ದಾವುದದು ತಾನಲ್ಲ; ತೂಷ್ಣೀಂ ।
ಭಾವವೇ ಪರಮಾತ್ಮಪದವದು ತಮ್ಮ ನಿಜವೆಂದು ॥
ಭಾವವಳಿದುಳಿದುಳಿಮೆಯುಹ ನಿಜ । ತಾವುತಾವಾಗಿರ್ದ ಯೋಗಿಗ ।
ಳಾವವಸ್ಥೆಯೊಳಿರ್ದರೋ ತಿಳಿಯಲ್ಕಸಾಧ್ಯವಲಾ !　　॥ ೪೭ ॥

ಬ್ರಹ್ಮವಿದು ನೋಡೆಂದು ತೋರಲು । ಬ್ರಹ್ಮ ಮೊದಲಾದವರಿಗಳವೇ; ।
ಹಮ್ಮು ಮೊದಲಾದಖಿಳವಲ್ಲದುದೆಂದು ಪೇಳುವರು ; ॥
ತಮ್ಮ ನಿಜವದು ಬೇರೆ ವಸ್ತುವೆ ? । ತಮ್ಮ ತಮ್ಮನುಭವಕೆ ಗೋಚರ ;
ತಮ್ಮ ಹೆಗಲೇರುತ್ತ ತಾವೇ ನಡೆಯಲಳವಹುದೇ ?　　॥ ೪೮ ॥

ಬುದ್ಧಿಯಿಂ ಪರವಸ್ತುವಹೆಯೆಂ । ದುದ್ಧರಿಸಿ ಗೀತೆಯಲಿ ಪಾರ್ಥಗೆ ।
ಸಿದ್ಧವತ್ಕರಿಸಿದನು ತಿಳಿ ನೀನೆಂದು ಶ್ರೀಕೃಷ್ಣ ; ॥
ನಿರ್ಧರಿಸಲಿದು ಬ್ರಹ್ಮವೆಂದೆಲೆ । ಬುದ್ಧಿವಂತನೆ ತೋರಿದನೆ ? ತಾ ।
ನನ್ವಯಸ್ವಾತ್ಮೈಕವೇದ್ಯವೆನಿಪ್ಪ ವಸ್ತುವನು　　॥ ೪೯ ॥

---

೪೬. ಇಲ್ಲದುದ . . ನಲೇಕೆ---ಜಗತ್ತು ಮಿಥ್ಯವೆಂದಾದ ಮೇಲೆ ಅದು ಹೀಗೆ ಹೀಗೆ ಸೃಷ್ಟಿಯಾಯಿತೆಂದು ಮುಂತಾಗಿ ಇರುವವರ ಹಾಗೆ ವರ್ಣಿಸಿ ಆಮೇಲೆ ನೇತಿಗೆ ನೇತಿಯೆಂದು ಅದನ್ನು ಅಲ್ಲಗಳೆಯುವದೇಕೆ ? ಉಳ್ಳದುದ . . . ನುಡಿಯಲೇತಕೆ —ಇರುವ ಬ್ರಹ್ಮದ ವಿಷಯವನ್ನು ಹೇಳುವದಿನ್ನೇನು ? ಏಕೋವೇವ---ಈ ಶ್ರುತಿಯ ವಿಷಯಕ್ಕೆ ಪರಿಶಿಷ್ಟವನ್ನು ನೋಡಿ.

೪೮. ಬ್ರಹ್ಮವಿದು---ಇದಿರಲ್ಲಿರವದು ಬ್ರಹ್ಮವು. ಬ್ರಹ್ಮ---ಚತುರ್ಮುಖಬ್ರಹ್ಮ

೪೯. ಬುದ್ಧಿಯಿಂ ಪರವಸ್ತುವಹೆ—ಈ ಅರ್ಥದಲ್ಲಿರುವ ಗೀತಾವಾಕ್ಯವು ಯಾವ ದೆಂದರೆ:— ಇನ್ದ್ರಿಯಾಣಿ ಪರಾಣ್ಯಾಹುರಿನ್ದ್ರಿಯೇಭ್ಯಃ ಪರಂ ಮನಃ । ಮನಸ

ಶ್ರುತಿಗುರುಗಳಿಂ ಮಥಿಸಿ ನೆರೆ ನಿ । ಶ್ಚಿತವಿದೆಂಬನುಭವಪ್ರಮಾಣವೆ ।
ಮತಿಯಧೀನವದೆನಿಸಿಕೊಂಡೇ ತೋರುತಿರ್ಪಗ ॥
ಇತರಮೆನಿಸ ಪ್ರಮಾಣವೆಂತೋ ! । ಮತಿಗವಿಷಯನು ; ವಾಗಗೋಚರ।
ಸುತನೆ, ಆತ್ಮವಿದೆಂದು ತೋರಿಸಲಳವೆ ಪೇಳೆಂದ ॥ ೫೦ ॥

ಮತಿಗಗೋಚರವಾದ ವಸ್ತುವ । ನಿತರವೆನಿಪ ಪ್ರಮಾಣಗಳು ನಿ ।
ಶ್ಚಿತವ ಮಾಡೆ ಸಮರ್ಥವಲ್ಲವತೀಂದ್ರಿಯವದಾಗಿ ; ॥
ಶ್ರುತಿಗಳರುಪಿದ ತೆರದಿ, ಸದ್ಗುರು । ಕೃತಮಹಾನುಗ್ರಹದಿ, ತಿಳಿಯ ।
ಲ್ಕತುಲವಾದಪರೋಕ್ಷದನುಭವದಿಂವಲಮ ವೇದ್ಯ ॥ ೫೧ ॥

ಜ್ಞಾನದಾಶ್ರಯದಿಂದ ಪ್ರತ್ಯ । ಕ್ಷಾನುಮಾನಾದಿಪ್ರಮಾಣವು ; ।
ಜ್ಞಾನವನು ನೆರೆ ಬಿಟ್ಟವಕ್ಕೆ ಸ್ವತಂತ್ರವಿಲ್ಲವೆನೆ ॥
ಜ್ಞಾನದಾಧೀನಂಗಳವರಿಂ । ಜ್ಞಾನದಿಂದಧಿಕ ಪ್ರಮಾಣಗ ।
ಳೇನುಮಿಲ್ಲಾ! ಜ್ಞಾನ ತಾನೇ ಸ್ವಾನುಭವವೇದ್ಯ ॥ ೫೨ ॥

ಅದ್ವಯಾನಂದಾಮೃತಾಬ್ಧಿಯೊ । ಳದ್ದಿ ತಾನಾಗಿದ್ದು ತೋರುವ ।
ಸಿದ್ಧ ಸುಮ್ಮನೆಯಿದ್ದು ಪ್ರೋಪನು ಮೂಕನಂವದಲಿ; ॥
ಉದ್ಧರಿಸಿ ಶ್ರುತಿಶಿರಗಳಾತ್ಮನ । ಹೊದ್ದಲರಿಯವೆ ತಾವೆ ತಮ್ಮೊಳು ।
ಬದ್ಧಮೌನದಲಿರ್ಪುವದರಿಂ ವಾದವೇಕೆಂದ ॥ ೫೩ ॥

---

ಸ್ತು ಪರಾ ಬುದ್ಧಿರ್ಯೋ ಬುದ್ಧೇಃ ಪರತಸ್ತು ಸಃ ॥ ಉದ್ಧರಿಸಿ---ಎತ್ತಿಹೇಳಿ, ಅದ್ವಯ ಸ್ವಾತ್ಮೈಕವೇದ್ಯ—ಎರಡನೆಯದಿಲ್ಲದ್ದು ಮತ್ತು ತನಗೆ ಮಾತ್ರವೇ ತಿಳಿಯುವಂಥದ್ದು.

೫೦. ಮಥಿಸಿ—ಕಡೆದ ಹಾಗೆ ವಿಚಾರಮಾಡಿ.

೫೨. ಜ್ಞಾನದಾಶ್ರಯದಿಂದ—ಜ್ಞಾನವಿದ್ದರೆ ಮಾತ್ರ.

೫೩. ಅದ್ದಿ---ಮುಳುಗಿ. ತಾನಾಗಿದ್ದು—ತಾನೇ ತಾನಾಗಿದ್ದು. ಸಿದ್ಧ—ಸಿದ್ಧಿಯನ್ನು ಪಡೆದವನು. ಉದ್ಧರಿಸಿ—ಮೇಲಕ್ಕೆತ್ತಿ (ಆತ್ಮನು ವಿಷಯಗಳ ಗಡಿಬಿಡಿಯಲ್ಲಿ ತಲವನ್ನು ಹಿಡಿದಿರುವನು. ವೇದಗಳು ಕೂಡ ಅವನನ್ನು ಮೇಲಕ್ಕೆತ್ತಿ ತಂದು ತೋರಿಸಲಾರವೆ ಹೋದವೆಂದರ್ಥ). ಬದ್ಧಮೌನದಲಿ—ಮಾತಾಡದೆ ಇರುವ ವ್ರತವನ್ನು ಹಿಡಿದುಕೊಂಡು.

ಕೂಗಿದರೆ ತನ್ನಂತೆ ಮಾರ್ದನಿ । ಯಾಗೆ ಕೂಗುತಲಿಹುದು ಪರ್ವತ ।
ವಾಗಲದು ತಾ ಸುಮ್ಮನಿರ್ದೊಡೆ ಸುಮ್ಮನಿಪ್ಪಂತೆ ॥
ಆಗಹೋಗದ ಬಯಲ ಬಳಲಿಕೆ । ಯಾಗೆ ಹೋರುವ ವಾದಿಯೊಡನೆಲೆ ।
ಮೂಗನಾಗಿಹುದೊಳ್ಳಿತೈ ಶುಕಯೋಗಿ ಕೇಳೆಂದ ॥ ೫೪ ॥

ಪ್ರಬಲದುರ್ಬಲವೆಂಬ ಶ್ರುತಿಶಿರ । ವಭಿನಯಿಸುವೀ ವಾಕ್ಯದೊಳಗೆಲೆ ।
ಪ್ರಬಲವೇ ಸಿದ್ಧಾಂತ ; ದುರ್ಬಲ ಸಾಧುವಾದವವು ; ॥
ಪ್ರಬಲವದು ಮೂರ್ಖರಿಗಸಾಧ್ಯವ । ದಬಲರಾ ದುರ್ಬಲದ ಶ್ರುತಿಗಳ ।
ನಿಬಿಡವಾಗಿಯೆ ಸಾಧಿಸುವರೈ ಮಗನೆ ಕೇಳೆಂದ ॥ ೫೫ ॥

ಪುತ್ರರನು ಪಡೆಯಲ್ಕೆ ಯಾಗವ । ನುಕ್ತವಿಧಿಯೊಳು ಮಾಡಬೇಕೆಂ ।
ದತ್ಯಧಮರಿಗೆ ಪೇಳ್ವುದಾ ದುರ್ಬಲದ ಶ್ರುತಿವಾಕ್ಯ ; ॥
ಉತ್ತಮರುಗಳ ಕುರಿತು ನುಡಿದವು । ಸತ್ಯವಿಜ್ಞಾನವನೆ ಸಾಧಿಸಿ ।
ಮುಕ್ತಿಯನು ಪಡೆಯೆಂದು ಪ್ರಬಲಶ್ರುತಿಶಿರಗಳೊಲಿದು ॥ ೫೬ ॥

ಅಪ್ರಮೇಯನಸಂಗನದ್ವಯ । ನಪ್ರತರ್ಕ್ಯನನಾಮರೂಪನು ।
ಮಪ್ರತಿಮನವ್ಯಯನತೀಂದ್ರಿಯ ವಾಙ್ಮನೋದೂರ ॥
ಸ್ವಪ್ರಕಾಶವು ಬ್ರಹ್ಮವೆಂದದ । ನೀ ಪ್ರಕಾರದಿ ಹೇಳುತಿರುತಿಹ ।
ವಾ ಪ್ರಬಲಶ್ರುತಿಶಿರಗಳಾ ನಿರುಪಾಧಿರೂಪನನು ॥ ೫೭ ॥

---

೫೪. ಆಗಹೋಗದ—ಆಗದ ಮತ್ತು ಹೊಗುದ. ಬಳಲಿಕೆಯಾಗೆ—ಬಳಲಿಕೆಯಾಗುವ ಹಾಗೆ.

೫೫. ಅಭಿನಯಿಸುವ—(ವಾಕ್ಯದಿಂದ) ತಿಳಿಯಪಡಿಸುವ. ಪ್ರಬಲವೇ—ಪ್ರಬಲವಾದ ಶ್ರುತಿಯ ಮಾತೇ. ಸಾಧುವಾದ—ಮಾಡಬಹುದಾದದ್ದೆಂದು ಮಾತ್ರ ಹೇಳುವ ಮಾತು. ಪ್ರಬಲವು—ಪ್ರಬಲಶ್ರುತಿಯ ಅರ್ಥವನ್ನು ಅನುಭವಿಸುವದು.

೫೬. ಉಕ್ತವಿಧಿಯೊಳು—ಶಾಸ್ತ್ರದಲ್ಲಿ ಹೇಳಿರುವ ಕ್ರಮದಿಂದ. ಅತ್ಯಧಮರಿಗೆ—ಆತ್ಮಜ್ಞಾನವನ್ನು ಪಡೆಯುವ ವಿಷಯದಲ್ಲಿ ಬಹಳ ಕಡಿಮೆಯ ಸಾಮರ್ಥ್ಯವುಳ್ಳವರಿಗೆ.

೫೭. ಅಪ್ರಮೇಯನು—ಯಾವ ಪ್ರಮಾಣದಿಂದಲೂ ತಿಳಿಯುವದಕ್ಕಾಗದವನು. ಅಪ್ರತರ್ಕ್ಯ—ತರ್ಕದಿಂದ ಸಾಧಿಸುವದಕ್ಕೆ ದಕ್ಕದವನು. ಅಪ್ರತಿಮನು—ಸಮಾನರಿಲ್ಲದವನು.

ನಾಮರೂಪವಿಕಾರವಿಲ್ಲದ । ನಾಮಯಗೆ ನಾಮಗಳ ಕಲ್ಪನೆ ।
ನೇಮದಿಂದಿರಲಾದುದೆಂತೈ ತಂದೆ ? ಹೇಳೆನಲು ॥
ಪ್ರೇಮದಿಂ ಪೇಳಿದನು ಮುನಿಪತಿ । ಯೀ ಮಹಾಮಾಯೆಯೊಳು ಸಂಗವ।
ದಾ ಮಹಿಮಗಿಲ್ಲೆಂದು ಪೇಳುತ್ತಿರ್ಪ ಶ್ರುತಿಮತವ ॥ ೫೮ ॥

ಸ್ವಾನುಭವ ಮೊದಲಾದ ಬುದ್ಧಿ । ಜ್ಞಾನಗಳಿಗಿಂದಧಿಕವದು ಪ್ರ ।
ಜ್ಞಾನವೇ ಪರಬೊಮ್ಮವೆನೆ ಋಗ್ವೇದಗತವಾಕ್ಯ ; ॥
ಈ ನಿಖಿಲದೊಳಹೊರಗೆ ಸತ್ಯ । ಜ್ಞಾನಸುಖಮಯವಪ್ಪ ಬ್ರಹ್ಮವೆ ।
ತಾನೆನಲಥರ್ವಣಶಿರೋಗತವಾಕ್ಯದರ್ಥವದು ॥ ೫೯ ॥

ಕಳೆದು ಪದಗಳ ವಾಚ್ಯವೆರಡನು। ಉಳಿದ ಲಕ್ಷ್ಯವೆ ನೀನೆನುತ ಗುರು ।
ತಿಳುಹಲಂತದು ಸಾಮಶಿರಗತತತ್ತ್ವಮಸಿವಾಕ್ಯ ; ॥
ಒಳಗೆ ಬುದ್ಧಿಗೆ ಸಾಕ್ಷಿಯಾಗಿಯೆ । ಬೆಳಗುತಿರ್ಪ ಆತ್ಮನೇ ಕೇ ।
ಳಿಲೆ ಯಜುರ್ಗತವಾಕ್ಯದಲಿ ಪರಬೊಮ್ಮನೆನಿಸುವನು ॥ ೬೦ ॥

ದೇಶಕಾಲಸಮಸ್ತವಸ್ತುಗ । ಳೈಸರಲಿ ಪರಿಪೂರ್ಣಪರಮಾ ।
ಕಾಶನನವಚ್ಛಿನ್ನನಪ್ಪುದರಿಂದನಂತಾಖ್ಯ ; ॥
ಭಾಸಿಸುತ್ತಿಹುದಖಿಲತೇಜೋ । ರಾಶಿಗಳನದರಿಂ ಪರಂಜ್ಯೋ ।
ತಿಸ್ಸ್ವರೂಪವು ; ಸಕಲಕಾತ್ಮವಿದೆಂದು ಸರ್ವಾತ್ಮ ॥ ೬೧ ॥

ನಳಿನಸಖನೊಲು ತನ್ನ ತಾನೇ । ಬೆಳಗುತಿಹ ಕತದಿಂ ಸ್ವಯಂಪ್ರಭ ;।
ತಿಳಿಯಲನ್ಯವ ತನ್ನನುಭಯಿವ ಬೆಳಗುವದರಿಂದ ॥

---

೫೮. (ವಿಕಾರವಿಲ್ಲದ + )ಅನಾಮಯಗೆ— ನಿರ್ದೋಷನಿಗೆ.

೫೯. ಬುದ್ಧಿಜ್ಞಾನಗಳಿಗಿಂತ—ಬುದ್ಧಿಯಿಂದ ತಿಳಿಯುವ ಜ್ಞಾನಗಳಿಗಿಂತ ಪ್ರಜ್ಞಾನವೇ ಪರಬೊಮ್ಮ—(ಶ್ರು) "ಪ್ರಜ್ಞಾನಂ ಬ್ರಹ್ಮ". ಬ್ರಹ್ಮವೇ ತಾನು—(ಶ್ರು) "ಅಹಂ ಬ್ರಹ್ಮಾಸ್ಮಿ."

೬೦. ಉಳಿದ ಲಕ್ಷ್ಯವೆ ನೀನು—(ಶ್ರು) "ತತ್ತ್ವಮಸಿ". ಈ ಆತ್ಮನೇ ಪರಬೊಮ್ಮ—(ಶ್ರು) "ಅಯಮಾತ್ಮಾ ಬ್ರಹ್ಮ."

೬೧. ಪರಮಾಕಾಶನು—ಆಕಾಶಕ್ಕಿಂತ ಹೆಚ್ಚಿನವನು. ಅನವಚ್ಛಿನ್ನನು—ಇನ್ನೊಂದರಿಂದ ಪರಿಮಿತಿಯನ್ನು ಪಡೆದಿಲ್ಲದವನು. ಅನಂತ—ಕೊನೆಯಿಲ್ಲದವನು.

ಅಲಘುಮತಿ, ಸ್ವಪರಪ್ರಕಾಶಕನು ; । ಪ್ರೊಳೆಯುತಿರ್ಪನ್ಯಪ್ರಕಾಶವ ।
ಬೆಳಗುವದರಿಂ ಸುಪ್ರಕಾಶನು ಮಗನೆ ಕೇಳೆಂದ　　॥ ೬೨ ॥

ಬುದ್ಧಿ ಮೊದಲಾದಿಂದ್ರಿಯಗಳಿಗೆ । ವೇದ್ಯನಲ್ಲದರಿಂದತೀಂದ್ರಿಯ ; ।
ಶುದ್ಧಸಂವಿತ್ತಾಗಿ ಶುದ್ಧನು ಜ್ಞಾನಮಯನೆನಿಸಿ ; ॥
ಬದ್ಧಮಾಯಾವರಣವಾವನ । ಹೊದ್ದದದರಿಂ ನಿತ್ಯಮುಕ್ತನು ; ।
ವೇದ್ಯನಲ್ಲವನೇತರಿಂದಲು, ಬೋಧ್ಯನಲ್ಲೆಂದ　　॥ ೬೩ ॥

ಪರಿಪರಿಯ ಜಡದೃಶ್ಯಸಾಧನ । ದಿರವ ನೋಳ್ಪುದೆ ದೃಕ್ಕಚೇತನ ।
ಕರಣಗಳ ಚೇಷ್ಟಿಸುತಲಿರೆ ಚೈತನ್ಯವೆನಿಸುವದು ; ॥
ಕರಣವಿಡಿದೀ ಬಾಹ್ಯಗಳನರಿ । ವರಿವೆ ಕೇಳ್ವೆ ಜ್ಞಾತೃ ; ಮೇಣೆ ।
ಚ್ಚರಕನಸುನಿದ್ದೆಗಳ ಹೊದ್ದದೆ ತೋರ್ಪುದೇ ಸಾಕ್ಷಿ　　॥ ೬೪ ॥

ಕೋಶಪಂಚಕಗಳ ವಿವೇಕದ । ಶೇಷಿತವೆ ಪ್ರತ್ಯಕ್ಕು ; ತಿಳಿಯಲ ।
ಶೇಷತತ್ತ್ವಾಧಾರವೇ ಕೂಟಸ್ಥನೆನಿಸುವದು ; ॥
ನಾಶವಿರಹಿತವವ್ಯಯವು ; ನಿ । ರ್ವಾಸನೆಯೆ ನಿಜ; ನಿಶ್ಚಲತ್ವದಿ ।
ಸೂಸದಿಹುದೇ ಸ್ಥಾಣು ; ನಿರುಪಾಧಿಯೆ ನಿರಾಲಂಬ　　॥ ೬೫ ॥

---

೬೨. ಸ್ವಪರಪ್ರಕಾಶನು----ತನ್ನನ್ನೂ ಅನ್ಯವನ್ನೂ ಎರಡನ್ನೂ ಪ್ರಕಾಶಿಸುವವನು. ಅನ್ಯಪ್ರಕಾಶವ---ಸೂರ್ಯಮೊದಲಾದವರ ಪ್ರಕಾಶವನ್ನು. "ಸುಪ್ರಕಾಶನು" ಎಂಬಲ್ಲಿ ಬಹುಕಡೆ "ಸ್ವಪ್ರಕಾಶನು" ಎಂದಿದೆ.

೬೩- ಬೋಧ್ಯನಲ್ಲ----ಇತರರಿಗೆ ಬ್ರಹ್ಮಸ್ವರೂಪವನ್ನು ತಿಳಿಸುವದು ಸಾಧ್ಯವಲ್ಲ. (ಬ್ರಹ್ಮಸ್ವರೂಪವು ತನಗಿಂತ ಅನ್ಯವಲ್ಲವಾದ್ದರಿಂದ ತಿಳಿಸುವದಕ್ಕಾಗುವದಿಲ್ಲವೆಂದು ತಾತ್ಪರ್ಯ. ಹಾಗಾದರೆ ಉಪದೇಶದ ಕಾರ್ಯವೇನೆಂದರೆ ಬ್ರಹ್ಮಜ್ಞಾನಕ್ಕೆ ದಾರಿಯನ್ನು ಕೊಡದೆ ತುಂಬಿಕೊಂಡಿರುವ ವಿಷಯಜ್ಞಾನವನ್ನು ತುಚ್ಛವೆಂದು ಹಿನ್ನೆಟ್ಟಿಸುವದಿಷ್ಟೆ.

೬೪. ಅಚೇತನಕರಣಗಳ ಚೇಷ್ಟಿಸುತಲಿರೆ— ಅಚೇತನವಾದ ಇಂದ್ರಿಯಗಳಿಂದ ಕೆಲಸವನ್ನು ಮಾಡಿಸಿದರೆ. ಎಚ್ಚರ . . . . ಹೊದ್ದದೆ— ಎಚ್ಚರಕನಸುನಿದ್ದೆಗಳ ಕರಣಗಳಿಗೇ ಅಂದರೆ ಇಂದ್ರಿಯಗಳಿಗೇ ಹೊರತು ಆತ್ಮನಿಗಲ್ಲವಾದ್ದರಿಂದ ಆತ್ಮನನು ಅವು ಆವರಿಸಲಾರವು.

೬೫. ಅಶೇಷತತ್ತ್ವಾಧಾರವೇ— ಎಲ್ಲ ತತ್ತ್ವಗಳಿಗೂ (ಪಂಚಭೂತಗಳಿಗೂ) ಆಧಾರವಾದದ್ದೆ. ಕೂಟಸ್ಥನು— ವಿಕಾರವಿಲ್ಲದೆ ಏಕರೂಪಾಗಿರುವ ಬ್ರಹ್ಮ. ಸೂಸದಿಹುದೇ----ಹೊರಗೆ ಹರಿದು ಹೋಗದಿರುವದೇ.

ತನುವೊಳಗೆ ಬೆರೆದಿರಲು ಜೀವನು; । ವಿಮಲಸತ್ತ್ವದಲೀಶ್ವರನು ; ಸಂ।
ಕ್ರಮಿಸದುಭಯತ್ಯಾಗದಿಂ ಪರಮಾತ್ಮನೆನಿಸುವನು ; ॥
ಅಮಮ ! ಕ್ಷರವಕ್ಷರವೆನಿಸುವೀ । ಕ್ರಮದ ಪುರುಷದ್ವಯವ ಮೀರ್ದು ।
ತ್ತಮಪುರುಷನೆನಿಪುನ್ನತವೆ ಕೇಳ್ಪ ಪರಬ್ರಹ್ಮ ॥ ೬೬ ॥

ಸತ್ತ್ವರಜತಮವೆನಿಪ ಬುದ್ಧಿಯ । ವೃತ್ತಿಗಳವಸ್ಥಾತ್ರಯಗಳಿಂ ।
ದುತ್ತಮನೆ ತಿಳಿ ವಿಶ್ವ, ತೈಜಸ, ಪ್ರಾಜ್ಞನೆನಿಸುವನು ; ॥
ಮತ್ತವುಗಳನು ಮೀರ್ದ ತುರ್ಯಾ । ವಸ್ಥೆಯುಲಿ ಹೇಳುವರು ನಿರ್ಮಲ ।
ಚಿತ್ತು ಸಹಜಾನಂದವೆಂದದ ಬಲ್ಲ ಯೋಗಿಗಳು ॥ ೬೭ ॥

ಮಿಥ್ಯಜಡದುಃಖಸ್ವರೂಪದಿ । ವರ್ತಿಸುವ ಮಾಯೆಯನು ಕುರಿತಿದು ।
ಸತ್ತು ಚಿತ್ತಾನಂದವೆಂಬೀ ಪೆಸರ ತಳೆದಿಹುದು ; ॥

---

೬೬. ಸಂಕ್ರಮಿಸದೆ----ಗುಣಗಳೊಡನೆ ಸೇರದೆ. ಉಭಯತ್ಯಾಗದಿಂ.---ಜೀವತ್ವವನ್ನೂ ಈಶ್ವರತ್ವವನ್ನೂ ಕಳೆಯುವದರಿಂದ. ಕ್ಷರ . . . . ದ್ವಯವ----ಕ್ಷರವೆನಿಸುವ ಜೀವನೆಂಬ ರಾಶಿಯನ್ನೂ ಅಕ್ಷರವೆನಿಸುವ ಈಶ್ವರನೆಂಬ ರಾಶಿಯನ್ನೂ. ಗೀತೆಯಲ್ಲಿ ಕ್ಷರ ಮತ್ತು ಅಕ್ಷರ ಎಂಬ ಮಾತುಗಳಿಗೆ "ಕ್ಷರಸ್ಸರ್ವಾಣಿ ಭೂತಾನಿ ಕೂಟಸ್ಥೋಽಕ್ಷರ ಉಚ್ಯತೇ" ಎಂಬ ಶ್ಲೋಕದ ಭಾಷ್ಯದಲ್ಲಿ ಶ್ರೀ ಶಂಕರಭಗವತ್ಪಾದರು ಮಾಡಿರುವ ಅರ್ಥದ ತಾತ್ಪರ್ಯವೇನೆಂದರೆ:----ಅನಾತ್ಮಗಳಲ್ಲಿ ಕ್ಷರ ಮತ್ತು ಅಕ್ಷರ ಎಂಬೆರಡು ರಾಶಿಗಳಿವೆ. ಈ ರಾಶಿಗಳಿಗೆ ಪುರುಷ ಎಂದು ಹೆಸರು. ಕಾರ್ಯಪ್ರಪಂಚವೇ ಕ್ಷರ. ಕ್ಷರವೆಂದರೆ ನಾಶವಾಗುವಂಥದ್ದು. ಇದಕ್ಕೆ ಕಾರಣವಾಗಿರುವ ಮಾಯೆಯೇ ಅಕ್ಷರ.(ನಾಶವಿಲ್ಲದ್ದು) ಜ್ಞಾನದ ಹೊರತು ಬೇರೆ ಇತರದಿಂದಲೂ ನಾಶವಾಗತಕ್ಕದ್ದಲ್ಲವಾದ್ದರಿಂದ ಅದು ಅಕ್ಷರ. ಕ್ಷರ ಮತ್ತು ಅಕ್ಷರ ಎಂಬ ಯಾವ ಉಪಾಧಿಯ ಸಂಬಂಧವೂ ಇಲ್ಲದ ಶುದ್ಧವಾದ ಆತ್ಮನೇ ಪುರುಷೋತ್ತಮನೆಂಬ ಪರಮಾತ್ಮನು. ಇಲ್ಲಿ ಕವಿಯು ಕ್ಷರವೆಂಬ ಮತ್ತು ಅಕ್ಷರವೆಂಬ ಉಪಾಧಿಗಳುಳ್ಳ ಚೈತನ್ಯವನ್ನು ಲಕ್ಷ್ಯದಲ್ಲಿಟ್ಟು ಕ್ಷರವೆಂದರೆ ಜೀವನೆಂದೂ ಅಕ್ಷರವೆಂದರೆ ಈಶ್ವರನೆಂದೂ ಉಪಯೋಗಿಸಿದ್ದಾನೆ.

೬೭. ವೃತ್ತಿಗಳ+ಅವಸ್ಥಾತ್ರಯಗಳಿಂದ. (ಸತ್ತ್ವದ ವೃತ್ತಿ ಎಚ್ಚರ ; ರಜದ ವೃತ್ತಿ ಕನಸು, ತಮದ ವೃತ್ತಿ ನಿದ್ದೆ.)

೬೮. ಇದು ಸತ್ತು ಚಿತ್ತಾನಂದವು---(ಮಾಯೆಯು ಮಿಥ್ಯವಾಗಿಯೂ ಜಡವಾಗಿಯೂ ದುಃಖರೂಪವಾಗಿಯೂ ಇರುವದರಿಂದ ಅದರಿಂದ ಬಿಡಿಸಿ ತಿಳಿಯುವದಕ್ಕಾಗಿ) ಬ್ರಹ್ಮಕ್ಕೆ ಸತ್ತು ಚಿತ್ತು ಆನಂದ ಎಂಬ ಹೆಸರು.

ಮತ್ತೆ ಬಹುವಿಧವಾದುಪಾಧಿಯ । ಕೃತ್ಯದಲಿ ಬಹುವಿಧಗಳಾಗಿಯೆ ।
ವರ್ತಿಸೀ ವಸ್ತುವಿಗೆ ನೋಡಲನಂತನಾಮಗಳು ॥ ೧೮ ॥

ನೇಮವಿಲ್ಲದನಾಮ ನಿಜ ನಿ । ಸ್ಸೀಮ ನಿರುಪಮ ನಿತ್ಯ ನಿರ್ಮಲ ।
ಕಾಮಕರ್ಮತಮೋನಿರಸ್ತ ನಿರಂಗ ನಿರ್ಗುಣಗೆ ॥
ಭ್ರಾಮಕಗಳೀ ನಾಮರೂಪಗ । ಳಾ ಮಹಾಬ್ರಹ್ಮದಲಿ ಕಲ್ಪನೆ ।
ನೇಮದಿಂದಿರ್ದಪುದು ತೂಷ್ಣೀಂಭಾವರೂಪಂಗೆ ॥ ೧೯ ॥

ಮಗನೆ, ಲೌಕಿಕವೈದಿಕಗಳೆಗೆ।ಷ್ಟಿಗೆ ತಿಳಿಯೆ ಭೇದಂಗಳೆಂತಾ ।
ಬಗೆಯಲೊಬ್ಬಗೆ ಬ್ರಹ್ಮಚರ್ಯಾದ್ಯಾಶ್ರಮಗಳಿಂದ ॥
ನೆಗಳಿದೀ ನಾಮಗಳ ಕಲ್ಪನೆ । ಯೊಗೆದ ತೆರದಲಿ, ಬ್ರಹ್ಮದಲಿ ಕೆ ।
ಳಗಣಿತದ ನಾಮಗಳುಪಾಧಿಕೃತಂಗಳಾಗಿಹವು ॥ ೨೦ ॥

ಮೂಡಲುದಿಸಿದ ರವಿಯು ಪಡುವಲು।ಮೂಡಿತೆಂಬೀ ದಿಗ್ಭ್ರಮೆಯೊಳಿಹ।
ಮೂಢರಿಗೆ ತಿಳಿ ಪಡುವಲಲ್ಲಿದು ಮೂಡಲೆಂಬಂತೆ ॥
ಬೇಡನಾತ್ಮಗಳೆಲ್ಲವನು ಬಿಡು ; । ನೋಡಿವೆಲ್ಲಕ್ಕಾತ್ಮನೆಂಬುದ ।
ನಾಡಿ ಶ್ರುತಿಗಳು ಪೇಳ್ವವಿದು ನೀನೆಂದು ತೋರಿದವೆ ? ॥ ೨೧ ॥

ನಡೆವ ನಾವೆಯ ನದಿಯೊಳಗೆ ತಾ । ನಡೆವುದೆಂದೇ ಬಗೆಯದಾಚೆಯ ।
ತಡಿಯ ಮರಗಳು ನಡೆದು ತನಗಿದಿರಾಗಿ ಬಹವೆಂಬ ॥

---

೧೯. ನೇಮವಿಲ್ಲದ ( + ಅನಾಮ )-ಯಾವ ವಿಧಿಗೂ ಒಳಪಡದಂಥ. ಕಾಮ ..ನಿರಸ್ತ-ಕಾಮವೂ ಕರ್ಮವೂ ತಮೋಗುಣವೂ ಇಲ್ಲದೇ ಇರುವಂಥ. ನೇಮದಿಂದ-ತಪ್ಪದೆ. ತೂಷ್ಣೀಂಭಾವರೂಪಂಗೆ-ಸುಮ್ಮನಿರುವ ಸ್ವಭಾವದ ಬ್ರಹ್ಮಕ್ಕೆ (ಇದು ಪೂರ್ವಾರ್ಧದ ಕೊನೆಯಲ್ಲಿರುವ ನಿರ್ಗುಣಗೆ ಎಂಬುದಕ್ಕೆ ವಿಶೇಷಣ).

೨೦. ಲೌಕಿಕ ..ಭೇದಂಗಳು-ಒಬ್ಬನು ಲೌಕಿಕವಾದ ಪಾಠಪ್ರವಚನವನ್ನು ಮಾಡುವಾಗ ಉಪಾಧ್ಯಾಯನೆನಿಸಿಕೊಳ್ಳುವನು. ಅವನೇ ಯಜ್ಞವನ್ನು ಮಾಡುವಾಗ ದೀಕ್ಷಿತನೆನಿಸಿಕೊಳ್ಳುವನು. ಹೀಗೆ. (ಬಗೆಯಲಿ, +) ಒಬ್ಬಗೆ ಬ್ರಹ್ಮಚರ್ಯಾದ್ಯಾಶ್ರಮಗಳಿಂದ......ತೆರದಲಿ-ಒಬ್ಬಗೆ ಬ್ರಹ್ಮಚಾರಿಯಾಗಿರುವಾಗ ಒಂದು ಹೆಸರಿದ್ದರೆ ಸಂನ್ಯಾಸಿಯಾದಾಗ ಬೇರೆ ಹೆಸರಾಗುತ್ತದೆ. ಇದರಂತೆ.

೨೧. ಬೇಡ+ಅನಾತ್ಮಗಳೆಲ್ಲವನು

ಜಡಮತಿಗೆ ಭ್ರಮೆ ಬೇಡವೆಂದದ । ಬಿಡಿಸುವಂದದಿ ಶ್ರುತಿಗಳೆಲ್ಲವು ।
ಜಡವದಲ್ಲದುದಾತ್ಮನೆಂದವು ; ತೋರವಿದಿರಿಟ್ಟು ॥ ೭೨ ॥

ಮಿಥ್ಯವಹ ವೇದಾಂತವೆಲ್ಲವು । ತಥ್ಯವಡೆದರ್ಥವನೆ ಪೇಳ್ವವು ; ।
ಮೃತ್ತಿಕೆಶಿಲಾದಾರುಪ್ರತಿಮೆಗಳೆಲ್ಲ ದೇವತೆಯ ॥
ಶಕ್ತಿಯನು ಪಡೆದಿರ್ದ ತೆರೆದಲ । ಸತ್ಯವನಿತಾಸಂಗ ಸ್ವಪ್ನದಿ ।
ತಥ್ಯವಹ ಸುಖಪಾದ ತೆರವಲಿ ಮಗನೆ ಕೇಳೆಂದ ॥ ೭೩ ॥

ಕತ್ತಲೆಯಲಿಹ ವಸ್ತುವನು ಕೈ । ಬತ್ತಿಯಲಿ ಕಾಣುತ್ತ, ಕಡೆಗಾ ।
ಬತ್ತಿಯನು ಬಿಸುಟಂತೆ ಶಾಸ್ತ್ರವನೆಲ್ಲವನು ತಿಳಿದು, ॥
ವಸ್ತುನಿರ್ದೇಶವನು ಪಡೆದವ । ಶಾಸ್ತ್ರವನಪೇಕ್ಷಿಸುವನೇತಕೆ ?।
ಸ್ವಸ್ಥನಾಗಿಯೆ ನಿಸ್ತರಂಗಾಂಬೋಧಿಯಂತಿಹನು ॥ ೭೪ ॥

ಕೇಳು ಜೀವನ್ಮುಕ್ತಿಗೈದೇ । ಮೇಳವಿಸಿ ತೋರ್ಪ ಪ್ರಯೋಜನ ; ।
ತೂಳಿದೀ ಸಂಶಯವಿಪರ್ಯಾಸವನು ನೆರೆ ಕೆಡಿಸಿ ॥
ಮೇಲೆ ನಿಶ್ಚಲವಾಗಿ ನಿಂದ ನಿ । ರಾಳ ನಿಜ ಸುಜ್ಞಾನವನು ಪರಿ ।
ತಪಾಲಿಸು ಬಿಡದಿರ್ಪುದೇ ಮೊದಲ ಪ್ರಯೋಜನವು ॥ ೭೫ ॥

---

೭೨. ಬಗೆಯದೆ+ಅಚೆಯ. ಜಡವದಲ್ಲನುದಾತ್ಮನೆಂದವು-ಜಡವಲ್ಲದ್ದು ಆತ್ಮನೆಂದು ಹೇಳಿದವು. ತೋರವಿದಿರಿಟ್ಟು-ಇದು ಆತ್ಮನೆಂದು ಆತ್ಮನನ್ನು ಎದುರಿಗಿಟ್ಟು ತೋರಿಸುವದಿಲ್ಲ.

೭೩. ಮಿಥ್ಯವಹ ವೇದಾಂತ-ಜಗತ್ತೆಲ್ಲ ಮಿಥ್ಯವಾದ ಮೇಲೆ ಜಗತ್ತಿನೊಳಗೊಂದಾಗಿರುವ ವೇದಾಂತವೂ ಮಿಥ್ಯವೇ ಆಗಿರಬೇಕಷ್ಟೆ; ಹೀಗೆ ತಾನು ಮಿಥ್ಯವಾದರೂ ಅದು ಸತ್ಯವಾದ ಅರ್ಥವನ್ನೆ ಹೇಳುವದೆಂದು ತಾತ್ಪರ್ಯ. ತಥ್ಯವಹ-ನಿಜವಾದ.

೭೪. ಕೈಬತ್ತಿಯಲಿ-ದೀಪವನ್ನು ಹಚ್ಚಿದ ಬತ್ತಿಯನ್ನು ಕಯ್ಯಲ್ಲಿ ಹಿಡಿದುಕೊಂಡು. ವಸ್ತುನಿರ್ದೇಶವನು ಪಡೆದವ-ಬ್ರಹ್ಮಸ್ವರೂಪವು ಹೀಗಿರುವದೆಂದು ತಿಳಿದುಕೊಂಡವನು. ಶಾಸ್ತ್ರವದೇತಕೆ ?-ಇದೇ ಅರ್ಥವನ್ನೇ ಶ್ರೀಶಂಕರಭಗವತ್ಪಾದರು ವಿವೇಕಚೂಡಾಮಣಿಯಲ್ಲಿ "ವಿಜ್ಞಾತೇಽಪಿ ಪರೇ ತತ್ತ್ವೇ ಶಾಸ್ತ್ರಾಧೀತಿಸ್ತು ನಿಷ್ಫಲಾ" ಎಂಬ ಮಾತಿನಿಂದ ಹೇಳಿದ್ದಾರೆ.

೭೫. ಐದು-ಜೀವನ್ಮುಕ್ತಿಗೆ ಜ್ಞಾನರಕ್ಷೆ, ತಪಸ್ಸು, ಸರ್ವಸಂವಾದ (ಎಲ್ಲರಿಂದಲೂ ಗೌರವವನ್ನು ಪಡೆಯುವದು), ದುಃಖಸಂಕ್ಷಯ ಮತ್ತು ಸುಖಾವಿರ್ಭಾವವೆಂಬ ಐದು

ಎರಡನೆಯದೆನಿಸಿಪ ಪ್ರಯೋಜನ। ನಿರುತ ಕರಣೇಂದ್ರಿಯಗಳುಪಸಂ
ಹರಣೆಯೆನಿಸುವ ತಪದ ಪೆರ್ಚುಗೆಯಂತದನು ಬಿಡವೆ ॥
ಪರಮನಿಷ್ಠೆಯೊಳಿರಲು ಲೌಕಿಕ। ಕುರುತರದ ವೈದಿಕಕೆ ಸಮ್ಮತ।
ದಿರವು ಮೂರನೆಯ ಪ್ರಯೋಜನ ಮಗನೆ ಕೇಳೆಂದ ॥ ೭೬ ॥

ಬ್ರಹ್ಮನಿಷ್ಠೆಯೊಳಿರಲು ಬಹುದು। ಸ್ವಕರ್ಮ ನಾಶನವಾಗಿ, ತನಗೆ ಷ।
ಡೂರ್ಮಿಗಳು ಮೊದಲಾದ ದುಃಖದ ಧ್ವಂಸವದು ನಾಲ್ಕು ; ॥
ನಿರ್ಮಮತೆನಿಸ್ಸಂಗವಳವಡೆ। ಹಮ್ಮಳಿದು ನಿರುಪಾಧಿಸೌಖ್ಯದ।
ಪೇರ್ಮೆ ಕೇಳ್ಳೈ ಮಗನೆ, ಐದನೆಯ ಪ್ರಯೋಜನವು ॥ ೭೭ ॥

ತನ್ನನರಿದ ಮಹಾನುಭಾವನಿ। ಗಿನ್ನಳಿದ ಭೂಮಿಕೆಗಳೇಕೆನೆ।
ನಿರ್ಣಯಿಸಲ್ಕೈದು ಪ್ರಯೋಜನ ಸಿದ್ಧಿಸುವದಾಗಿ ; ॥
ತನ್ನೊಳಗೆ ತಾನಾಗಿ ರಮಿಸುತ। ಭಿನ್ನಭಾವನೆಯಳಿದು ನಿಜಚೈ।
ತನ್ಯಮಾತ್ರವೆ ಆಗಿ ಸಹಜಾನಂದನಾಗಿಹನು ॥ ೭೮ ॥

ಗುರುಕರುಣಬೋಧಾನುಭವಸಾ। ಗರದಲೋಲಾಡುತ್ತ, ಮಾಯೆಯ।
ಪರಿಹರಿಸಿ, ಪರಮೇಶ್ವರನು ತಾನಾಗಿ ಸಕಲದಲಿ ॥
ಬೆರೆಸಿ, ನಿಜ ನಿರ್ದ್ವಂದ್ವ ನಿರ್ಗುಣ। ನಿರುತಪರಮಾನಂದರಾಜ್ಯದ।
ಸಿರಿಯ ಸೊಂಪಿನ ಸೊಗಸಿನಲಿ ಸೊಬಗೆನಿಸಿ ಮೆರೆದಿಹೆನು ॥ ೭೯ ॥

ಬ್ರಹ್ಮ ವಿಷ್ಣು ಮಹೇಶ್ವರಾದಿಗ। ಳೊಮ್ಮೆಯಾ ತಮ್ಮ ಸ್ವರೂಪವ।
ಬ್ರಹ್ಮವೆಂದೇ ಬಗೆದು ಮಾಯಾವರಣವಳಿದಿಹರು ; ॥
ಹಮ್ಮಳಿದ ನಿಜಯೋಗಿಯಾ ಪರಿ। ಬ್ರಹ್ಮವೇ ತಾನಾಗಿ ತನ್ನನು।
ಬ್ರಹ್ಮವೆಂದೇ ದೃಢದೊಳಿರ್ಪನು ಮಗನೆ ಕೇಳೆಂದ ॥ ೮೦ ॥

---

ಪ್ರಯೋಜನಗಳೆಂದು ಶ್ರೀಮನ್ನಿಜಗುಣಶಿವಯೋಗಿಗಳೂ ಹೇಳಿರುತ್ತಾರೆ. ತೂಳಿದ-ಬಲವಾಗಿ ಬೇರುಬಿಟ್ಟು, ವ್ಯಾಪಿಸಿದ.

೭೬. ಸಿರುತ-ಯಾವಾಗಲೂ. ಕರಣೇಂದ್ರಿಯಂಗಳ- ಅಂತಃಕರಣದ ಮತ್ತು ಇಂದ್ರಿಯಗಳ. ಲೌಕಿಕ……ಸಮ್ಮತ-ವ್ಯವಹಾರದ ಜನರಿಗೂ ಪರಮಾರ್ಥದ ಜನರಿಗೂ ಒಪ್ಪಾಗಿರುವದು.

೭೭. ಷಡೂರ್ಮಿಗಳು--೧೦ ಅ. ೧೨ ಪ. ವನ್ನು ನೋಡಿ.

ಕೇಳಖಂಡಬ್ರಹ್ಮದಲಿ ಸ | ಮ್ಮೇಳದಿಂ ತಾದಾತ್ಮ್ಯವಡೆದ ನಿ |
ರಾಳಯೋಗಿಯ ಲಕ್ಷಣವ ಹೇಳುವೆನು ; ಸಕಲವಲಿ ||
ತಾಳಿ ಸಮತೆಯ, ಪೂರ್ಣಭಾವವ | ತೂಳಿ, ಭೋಗಿಸದಾವ ವಿಷಯವ, |
ಲೀಲೆಯಿಂದಾತ್ಮಾನುಭವದಲಿ ತೃಪ್ತನಾಗಿಹನು || ೮೧ ||

ವಿರತಿಯೆನಿಸುವ ಮುಗ್ಧೆಯೊಡನತಿ | ಸರಸಸಲ್ಲಾಪವನು ಮಾಡುತ|
ಲಿರುತ, ಗುರುಪದಭಕ್ತಿಯೆನಿಸುವ ತರುಣಿಯೊಡನಾಡಿ ||
ನಿರುತ ಶ್ರುತಿಯೆಂದೆನಿಪ ಪ್ರೌಢೆಯೊ | ಳಿರುಳುಹಗಲಾಸಕ್ತಿದೋರುತ, |
ಹಿರಿಯಳೆನಿಸುವ ಮುಕ್ತಿಯೊಡನೇಕಾಂತದಿಂದಿಹನು || ೮೨ ||

ಹಮ್ಮಳಿದ ನಿಜಯೋಗಿ ಮುಂದಣ | ಜನ್ಮಕರ್ಮಗಳಳಿದು, ತನುವಿನ
ಧರ್ಮಮಾತ್ರದಿ ವ್ಯವಹರಿಪ ಪ್ರಾರಬ್ಧವಶದಿಂದ ; ||
ನಿರ್ಮಮತೆ, ನಿಸ್ಸಂಗ, ನಿರ್ಗುಣ | ಬ್ರಹ್ಮವೇ ತಾನಾಗಿ ತನ್ನೊಳು |
ಸುಮ್ಮನಿರುತಿಹನಾತನಿರುವವನರಿಯಲಳವಲ್ಲ || ೮೩ ||

ಪ್ರಾರಬುಧವಶದಿಂದ ತನುಸಂ | ಚಾರವಪ್ಪುದು ; ಚಿತ್ತವಾತ್ಮನಿ |
ಚಾರದಲಿ ನಿಶ್ಚಿಂತವಾಗಿಹುದಂತರಂಗದಲಿ ; ||

---

೮೧. ತೂಳಿ–ಮನಸ್ಸಿನಲ್ಲಿ ತುಂಬಿಕೊಂಡು. ಆವ ವಿಷಯವ–ಯಾವ ವಿಷಯವನ್ನೂ.

೮೨. ಪ್ರೌಢೆಯೊಳ್–ಪ್ರೌಢಳಾದ ಸ್ತ್ರೀಯಲ್ಲಿ.

೮೩ ವ್ಯವಹರಿಪ-ವ್ಯವಹರಿಸುವನು ಪ್ರಾರಬ್ಧವಶದಿಂದ–ಪ್ರಾರಬ್ಧವು ಶರೀರಾಭಿಮಾನಿಯಾದ ಜೀವನಿಗೇ ಹೊರತು ಬ್ರಹ್ಮಕ್ಕಲ್ಲ ಜೀವನ್ಮುಕ್ತನು ಶರೀರ ಮೊದಲಾದವುಗಳ ಮೇಲಿನ ನಾನು ನನ್ನದೆಂಬ ಅಭಿಮಾನರೂಪವಾದ ಜೀವತ್ವವನ್ನು ದಾಟಿ ಯಾವ ಕರ್ಮದ ಸಂಬಂಧವೂ ಇಲ್ಲದ ಬ್ರಹ್ಮನಾಗಿರುವನು. ಆದ್ದರಿಂದ ಜೀವನ್ಮುಕ್ತನಿಗೆ ಪ್ರಾರಬ್ಧವಿಲ್ಲ. ಆದರೂ ದೇಹವನ್ನು ಆತ್ಮವಾಗಿ ತಿಳಿಯುವ ಬಹಿರ್ಮುಖರಾದ ಜನರ ಸ್ವಭಾವಕ್ಕನುಸರಿಸಿ ಮಾತ್ರ. ಜ್ಞಾನಿಗೂ ಪ್ರಾರಬ್ಧವನ್ನು ಹೇಳುವದುಂಟು. ಇದು ಸ್ಥೂಲದೃಷ್ಟಿಯ ಮಾತೆಂದು ಶ್ರೀ ಶಂಕರಭಗವತ್ಪಾದರು ಅಪರೋಕ್ಷಾನುಭೂತಿಯಲ್ಲಿ "ದೇಹಸ್ಯಾಪಿ ಪ್ರಪಂಚತ್ವಾತ್ಪ್ರಾರಾಬ್ಧಾವಸ್ಥಿತಿಃ ಕುತಃ | ಅಜ್ಞಾನಿಜನಬೋಧಾರ್ಥಂ ಪ್ರಾರಬ್ಧಂ ವಕ್ತಿ ವೈ ಶ್ರುತಿಃ||" ಎಂಬ ಶ್ಲೋಕದಲ್ಲಿ ಸ್ಪಷ್ಟವಾಗಿ ಸೂಚಿಸಿರು

ಬೇರೆ ತಾ ನಿಸ್ಸಂಗನಾಗಿಯೆ । ದೂರನಾಗಿಹ ದುಃಖಸುಖಸಂ ।
ಸಾರಧರ್ಮಂಗಳಿಗೆ ಸಾಕ್ಷಿಕನಂತೆ, ಶುಕಯೋಗಿ　　　　　　॥ ೮೪ ॥

ಬಂದ ಸುಖದುಃಖಗಳನಹುದ । ಲ್ಲೆಂದು ಬಿಟ್ಟವನಲ್ಲ ; ಮುಂದಹು ।
ದೊಂದನೂ ಕೆಳ ಬಯಸ ; ಹೋದುದ ನೆನೆಯನದರಿಂದ ॥
ಕಂದ, ಬಾಲಕರೊಡನೆ ಬಾಲಕ । ರಂದದಲಿ, ಹಿರಿಯರಲಿ ಹಿರಿಯರ ।
ಚಂದದಲಿ, ತೋರುವನು ಸೋಪಾಧಿಕದ ಮಣಿಯಂತೆ　　　　　　॥ ೮೫ ॥

ತನ್ನ ಯೋಗಕ್ಷೇಮದಳತೆಯ । ಮನ್ನಿಸನು ; ಜಗದನುಸರಣೆಯನು ।
ಮುನ್ನಲರಿಯನು ; ಕೇಳವರಿಗವರಂತೆ ತೋರುವನು ; ॥
ಸನ್ನುತನೆ ತಿಳಿ, ಹಾನಿವೃದ್ಧಿಗ । ಳನ್ನು ತಾ ಮನದಲ್ಲಿ ನೆನೆಯನು ; ।
ನಿರ್ಣಯಿಸಿ ನೋಡಿದರೆ ರಾಗದ್ವೇಷಿಯಂತಿಹನು　　　　　　॥ ೮೬ ॥

ಹಾವಿನಲಿ, ಹಾರದಲಿ, ಶಿಲೆಯಲಿ,।ಹೂವಿನಲಿ, ಹೆಂಟೆಯಲಿ, ಮಣಿಯಲಿ।
ಭಾವೆಯಲಿ, ತೃಣದಲ್ಲಿ, ಶತ್ರುವಿನಲ್ಲಿ, ಮಿತ್ರರಲಿ, ॥
ಭಾವಭೇದವ ಬಿಟ್ಟು, ಸಮತೆಯ । ಸಾವಧಾನದಿ ವಿಹರಿಸುತ್ತಿಹ ।
ಪಾವನಾಶ್ರಮಗಳಲಿ ಜೀವನ್ಮುಕ್ತ ಕೇಳೆಂದ　　　　　　॥ ೮೭ ॥

ಆಸೆಯೆಂಬುದ ಸುಟ್ಟು ಬೂದಿಯ । ಪೂಸಿಯಾತ್ಮವಿಚಾರದಿಂ ಸಂ ।
ತೋಷವೆಂಬುವ ಕುಂಡಲಂಗಳ ಧರಿಸಿ ದೃಢವಾಗಿ, ॥
ಸೂಸದಿಹ ಮನವೆಂಬ ಕೌಪಿನ । ಕಾಸಿಯನು ಬಿಗಿದುಟ್ಟು, ಪಂಚ ।
ಕ್ಲೇಶವಳಿದವ ಪರಮಪದಸುಖದಿಂದಲಿರುತಿಹನು　　　　　　॥ ೮೮ ॥

---

೭೩. ಧರ್ಮವಂತೆ-ನನ್ನದೆಂಬಭಿಮಾನವಿಲ್ಲದಿರುವಿಕೆ (ಮೊದಲಾದ ಗುಣಗಳಿಂದ ಕೂಡಿದ ಬ್ರಹ್ಮವೇ).

೮೫. ಸೋಪಾಧಿಕದ ಮಣಿಯಂತೆ– ಬಗೆಬಗೆಯ ಬಣ್ಣದ ಹೂಗಳ ಹತ್ತಿರದಲ್ಲಿರುವ ಸ್ಫಟಿಕದಂತೆ.

೮೭. ವಿಹರಿಸುತ್ತಿಹ–ಸಂಚರಿಸುತ್ತಿರುವವನು. ಈ ಪದ್ಯಕ್ಕೆ ಸಮಾನಾರ್ಥವಾಗಿ ರಾವಣಕೃತ ಶಿವತಾಂಡವ ಸ್ತೋತ್ರದಲ್ಲಿರುವದೇನೆಂದರೆ :– "ದೃಷದ್ವಿಚಿತ್ರತಲ್ಪಯೋರ್ಭುಜಂಗಮೌಕ್ತಿಕಸ್ರಜೋಃ । ಗರಿಷ್ಠರತ್ನಲೋಷ್ಠಯೋಃ ಸುಹೃದ್ವಿಪಕ್ಷಪಕ್ಷಯೋಃ ॥ ತೃಣಾರವಿಂದಚಕ್ಷುಷೋಃ ಪ್ರಜಾಮಹೀಮಹೇಂದ್ರಯೋಃ । ಸಮಂ ಪ್ರವರ್ತಯನ್ಮನಃ ಕದಾ ಸದಾಶಿವಂ ಭಜೇ ॥"

ತನ್ನ ದೇಹದೊಳಾದ ಕುರುವಿಂ । ಗನ್ನವಸ್ತ್ರವ ಕಟ್ಟುವಂದದಿ ।
ತನ್ನ ತನುವಿಪ್ಪನ್ನ ವಸನಾಶನವ ಪಡೆಯುತ್ತ ॥
ಅನ್ಯತರುಣಿಯರನ್ನು ಕಂಡರೆ । ತನ್ನ ಮಾನಕೆ ವಿಕಾರವಿಲ್ಲದೆ ।
ಸಣ್ಣವಳ ಕಂಡಂತೆ ಕಾಂಬನು ಪೂರ್ಣನಹ ಯೋಗಿ ॥ ೬೯ ॥

ಮೊದಲು ಕಾರಣವಾದುಪಾಧಿಯ । ಲುದಿಸಿದೀಶ್ವರಭಾವವಳಿದಂ ।
ತದರ ಕಾರ್ಯೋಪಾಧಿಜೀವತ್ವವನು ಕಳೆದುಳಿದ ॥
ಸದಮಲಾನಂದಾಬ್ಧಿಯಾಗಿಹ । ಹದನ ಯೋಗಿಯನೀಶ್ವರನ ಭಾ ।
ವದಲಿ ಪೂಜಿಸಿ ಭಜಕರಿಷ್ಟಾರ್ಥಗಳ ಪಡೆದಿಹರು ॥ ೯೦ ॥

ಸತ್ತು ಚಿತ್ತಾನಂದವಹ ಪರ । ವಸ್ತುವನು ತಿಳಿದೊಡನವಿದ್ಯೆ ಸ ।
ಮಸ್ತವಾಸನೆ ಸಹಿತವಳಿಯಲು ವೃತ್ತಿ ಕೆಟ್ಟಾಗ ॥
ಚಿತ್ತುಮಾತ್ರದಲಿರ್ದು ಜೀವ । ನ್ಮುಕ್ತಿದಾಳುತೆ ಪ್ರಾರಬ್ಧ ಮುಗಿ ।
ಯುತ್ತಲವನಿಹೆನಾಗ ನೋಡೆ ವಿದೇಹಮುಕ್ತಿಯಲಿ ॥ ೯೧ ॥

---

೮೮. ಸೂಸದಿಪ—ಹೊರಮುಖವಾಗಿ ಹೋಗದೆ ಇರುವ. ಪಂಚಕ್ಲೇಶ-೧ ಅ. ೨೨ ಪ. ವನ್ನು ನೋಡಿ.

೮೯. ಅನ್ನ ವಸ್ತ್ರವ—ಬೇಯಿಸಿದ ಹಿಟ್ಟನ್ನೂ ಬಟ್ಟೆಯನ್ನೂ.

೯೦. ಪೂಜಿಸಿ... .ಪಡೆದಿಹರು — "ಆತ್ಮಜ್ಞಂ ಹ್ಯರ್ಚಯೇದ್ಭೂತಿಕಾಮಃ' (ಮುಂ).

೯೧. ಜೀವನ್ಮುಕ್ತಿದಾಳುತೆ . ..ವಿದೇಹ ಮುಕ್ತಿಯಲಿ · ಜೀವನ್ಮುಕ್ತನ ಪ್ರಾರಬ್ಧದ ವಿಷಯದಲ್ಲಿ ಹಿಂದೆ ೮೩ ನೇ ಪದ್ಯದಲ್ಲಿ ಹೇಳಿದೆಯಷ್ಟೆ. ಪ್ರಾರಬ್ಧವು ಮುಗಿದ ಮೇಲೆ ವಿದೇಹಮುಕ್ತಿಯಾಗುವದೆಂಬುದು ವ್ಯವಹಾರದೃಷ್ಟಿಯ ಮಾತು. ದೇಹವು ನಿಜವಾಗಿ ಇರುವದೆಂಬುದೂ ಇದರ ಕರ್ಮಾದಿಗಳು ಆತ್ಮನಿಗುಂಟೆಂಬುದೂ ಅಜ್ಞರದೃಷ್ಟಿಯೆಂದೂ ದೇಹವೇ ಇಲ್ಲವೆಂಬುದೂ ಕರ್ಮಾದಿಗಳ ಸಂಬಂಧವು ಆತ್ಮನಿಗೆಂದಿಗೂ ಇಲ್ಲವೆಂಬುದೂ ಆದ್ದರಿಂದ ಅವನು ಯಾವಾಗಲೂ ಮುಕ್ತನೇ ಎಂಬುದೂ ಪರಮಾರ್ಥದೃಷ್ಟಿಯೆಂದೂ ಇದನ್ನರಿಯುವದಕ್ಕೇ ವ್ಯವಹಾರದಲ್ಲಿ ಮುಕ್ತಿ ಎನ್ನುವರೆಂದೂ ಶ್ರೀ ಶಂಕರಾಚಾರ್ಯರು ಬ್ರಹ್ಮಸೂತ್ರದ ಅನೇ ಸೂತ್ರದ ಭಾಷ್ಯದಲ್ಲಿಯೂ ಇನ್ನೂ ಎಷ್ಟೋ ಕಡೆಯಲ್ಲಿಯೂ ಘಂಟಾಘೋಷದಿಂದ ವಿವರಿಸಿದ್ದಾರೆ. ಮತ್ತು ಅಜ್ಞರಿಗೆ ಕಾಣುವ ಈ ದೇಹವು ಬಿದ್ದಮೇಲೆ ಮತ್ತೆ ದೇಹದ ಸಂಬಂಧವು ಜ್ಞಾನಿಗೆ ಆಗುವದಿಲ್ಲವೆಂಬ ದೃಷ್ಟಿಯಿಂದ ವಿದೇಹಮುಕ್ತಿಯನ್ನು ಶ್ರುತಿಯು ಗುಣವಾಗಿ ಹೇಳುವದೆಂದು ಬೃಹದಾರಣ್ಯಕ

ಎರಡುಪರಿಯಲಿ ಯೋಗಿಗಳು ಸಂಚರಿಸುವರು ಶುಕಯೋಗಿಮೌನಿಯು ।
ಪರಮಹಂಸಾಶ್ರಮದಿ ಜಡಭರತಾದಿಗಳ ತೆರದಿ ॥
ಇರಲು, ವೈಯಾಕರಣಯೋಗೀ । ಶ್ವರರು ಜನಕಾದ್ಯರು ಸಮಾಧಿಯ ।
ಪರಿಪರಿಯ ಭೇದದಲಭೇದವ ಪಡೆದು ಚರಿಸುವರು ॥ ೯೨ ॥

---

೪-೪-೬ನೆ "ಬ್ರಹ್ಮೈವ ಸನ್ ಬ್ರಹ್ಮಾಪ್ಯೇತಿ" ಎಂಬ ಮಂತ್ರಭಾಗದ ಭಾಷ್ಯದಲ್ಲಿ ವಿಸ್ತಾರವಾಗಿ ಹೇಳಿದ್ದಾರೆ.

೯೨. ಎರಡು ಪರಿಯಲಿ-ಮೌನಿಗಳು ಮತ್ತು ವೈಯಾಕರಣರು ಎಂಬೆರಡು ರೀತಿಯಿಂದ. ಮೌನಿಯು-ಸಮಾಧಿನಿಷ್ಠನಾಗಿರುವವನು. ಜಡಭರತನ ವಿಷಯಕ್ಕೆ ಪೀಠಿಕೆಯನ್ನು ನೋಡಿ. ಇಲ್ಲಿ ಇನ್ನೊಂದು ವಿಷಯವನ್ನು ನೆನಪಿಡಬೇಕಾಗಿದೆ. ಮೌನಿಗಳು ಅನಧಿಕಾರಿಗಳ ಮುಂದೆ ತಮ್ಮ ಉಪದೇಶವನ್ನು ವ್ಯರ್ಥಮಾಡಿಕೊಳ್ಳಬಾರದೆಂದು ಅವರು ಬಹುಮಟ್ಟಿಗೆ ಮೌನದಲ್ಲಿಯೇ ಇರುವರೇ ಹೊರತು ಸರಿಯಾದ ಅಧಿಕಾರವನ್ನು ಕಂಡ ಒಡನೆ ಅವರು ತಮ್ಮ ಮೌನಮುದ್ರೆಯನ್ನೊಡೆದು ಉಪದೇಶ ಮಾಡುವರು. ಈ ಅರ್ಥಕ್ಕೂ ಜಡಭರತನೇ ನಿದರ್ಶನ. ಸೌವೀರರಾಜನು ಕಪಿಲ ಋಷಿಗಳ ಕಡೆಗೆ ಉಪದೇಶಕ್ಕಾಗಿ ಹೋಗುವಾಗ ಆವನ ಆಳುಗಳು ಪಲ್ಲಕ್ಕಿಯನ್ನು ಹೊರುವದಕ್ಕೆ ಜಡಭರತನನ್ನು ಬಿಟ್ಟೀಹಿಡಿದರು. ತಾನು ಹಿಂದಿನ ಜನ್ಮದಲ್ಲಿ ಜಿಂಕೆಯ ಮೇಲಿಟ್ಟಿದ್ದ ಆಸಕ್ತಿ ಮುಂತಾದ ಪಾಪವು ಹೋಗಲೆಂದು ಜಡಭರತನು ಎರಡನೆಯ ಮಾತಾಡದೆ ಆ ಕೆಲಸಕ್ಕೆ ಹೋದನು. ಆದರೆ ಅವನು ಮೆಲ್ಲಗೆ ಹೆಜ್ಜೆಯನ್ನಿಡುತ್ತಿದ್ದುದನ್ನು ಕಂಡು ರಾಜನು 'ನೀನು ಸ್ಥೂಲ' ನೆಂದು ಮುಂತಾಗಿ ಹೇಳಲು ಅವನು ಆತ್ಮನು ಸ್ಥೂಲನಲ್ಲವೆಂದು ಮುಂತಾಗಿ ಬ್ರಹ್ಮೋಪದೇಶವನ್ನು ಮಾಡಿಯೇ ಬಿಟ್ಟನು. ಜಡಭರತಾದಿಗಳೆಂಬಲ್ಲಿರುವ ಆದಿಪದದಿಂದ ಋಷಭಯೋಗೀಶ್ವರರನ್ನು ತೆಗೆದುಕೊಳ್ಳಬೇಕು. ಇನ್ನು ವ್ಯಾಕರಣಯೋಗಿಗಳಾದರೂ ಕಂಡಕಂಡವರಿಗೆಲ್ಲ ತತ್ತ್ವವನ್ನು ಸೂರೆಮಾಡಿರುವರೆಂದೂ ತಿಳಿಯಬಾರದು. ಅವರೂ ಅಧಿಕಾರಿಗಳಿಗೆ ಮಾತ್ರವೇ ತತ್ತ್ವವನ್ನು ಹೇಳುವರು. ಉಳಿದವರಿಗೆ ಚಿತ್ತಶುದ್ಧಿಯ ಸಾಧನಗಳನ್ನು ಹೇಳುತ್ತಿರುವರು. ಮೌನಿಯೋಗಿಗಳು ಈ ಕೆಲಸವನ್ನು ಮಾಡುವದಿಲ್ಲ. ಇಷ್ಟೇ ಭೇದ. ವೈಯಾಕರಣಯೋಗೀಶ್ವರರು—ಧರ್ಮಪ್ರಚಾರವನ್ನು ಮಾಡುವ ಸಿದ್ಧಪುರುಷರು. ಜನಕಾದ್ಯರು—ಮಹಾಜ್ಞಾನಿಗಳಾದರೂ ಲೋಕಸಂಗ್ರಹಾರ್ಥವಾಗಿ ರಾಜ್ಯಭಾರವನ್ನು ಕೂಡ ನಿರ್ವಹಿಸಿದ ಜನಕ, ಅಶ್ವಪತಿ ಮೊದಲಾದ ಚಕ್ರವರ್ತಿಗಳು. ಪರಿಪರಿಯ ಭೇದ-ಸಮಾಧಿಯ ಆರು ವಿಧಗಳು (೬ ಅ. ೫೫ ಪ. ವನ್ನು ನೋಡಿ.)

೯೩. ಚೋಹ-ವೇಷ (ನಾಟಕದಲ್ಲಿ ವೇಷವನ್ನು ಹಾಕಿಕೊಂಡಿರುವವನಿಗೆ ತನ್ನ

ತನ್ನ ನಿಜವನು ತಿಳಿದ ಪುರುಷನೆ । ಧನ್ಯನಾತನೆ ಯೋಗಿಯಾತನೆ ।
ನಿರ್ಣಯಿಸೆ ಸಂನ್ಯಾಸಿಯಾತನೆ ದೇವತಾಮಯನು ; ॥
ವರ್ಣಧರ್ಮಾಶ್ರಮಗಳೇತಕೆ । ಪೂರ್ಣವಹ ಪರವಸ್ತುವಾದಗೆ? ।
ಜನ್ಮವೆಂಬುದು ಜೋಹವಂತ್ಯಾಶ್ರಮಿಗೆ ಕೇಳಿಂದ ॥ ೯೩ ॥

ಆವ ವರ್ಣಾಶ್ರಮದ ತೊಡಕಿ । ಲ್ಲಾವ ವೈದಿಕಲೌಕಿಕಂಗಳು ।
ಯಾವವೂ ತನಗಿಲ್ಲ ; ಬಗೆಯನು ವಿಧಿನಿಷೇಧಗಳ ; ॥
ಕೇವಲಾನಂದಾನುಭವಪತಿವ । ಭಾವವೇ ತಾನಾಗಿ ಸರ್ವವ ।
ಪಾವನವ ಮಾಡುತ್ತ ಜೀವನ್ಮುಕ್ತನಾಗಿಹನು ॥ ೯೪ ॥

ನಿತ್ಯಗಾಯತ್ರಿಯಲಿ ಪೇಳಿ । ಪರ್ಥವನು ಗುರುಮುಖದಿ ತಿಳಿದಾ ।
ವರ್ತಿಸುತ, ಮನದಲ್ಲಿ ದಿವ್ಯಜ್ಞಾನವನು ಪಡೆದು ॥
ಪ್ರತ್ಯಗಾತ್ಮಜ್ಯೋತಿ ಬುದ್ಧಿಯ । ವೃತ್ತಿಯೊಡನೇಕತ್ವವಾಗಲು ।
ಮುಕ್ತಿಯಾಗದೆ ಮಗನೆ ಸಂನ್ಯಾಸದಲಿ ಫಲವೇನು ? ॥ ೯೫ ॥

ಬ್ರಹ್ಮವೇ ತಾನಾದ ಮನುಜನು । ಹಮ್ಮಳಿದು ನಿಸ್ಸಂಗನಾಗಿಹ ।
ಧರ್ಮವೇ ಸಂನ್ಯಾಸವಲ್ಲದೆ ನಿತ್ಯಕರ್ಮಗಳ ॥
ಸುಮ್ಮನೇ ಬಿಟ್ಟಾತ್ಮಚಿಂತೆಯ । ಲೊಮ್ಮೆಯೂ ಮನವಿಡದೆ, ಬರಿದೇ ।
ಹೆಮ್ಮೆಗವ ಸಂನ್ಯಾಸಿಯಾದುದರಿಂದ ಫಲವೇನು ?

ಕಾಯದಲಿ ಸಂನ್ಯಾಸಿವೇಷವ, । ಬಾಯೊಳಗೆ ಬ್ರಹ್ಮವನ, ಮನದಲಿ ।
ರಾಯಪಟ್ಟವ ಕಟ್ಟಿಕೊಳಬೇಕೆಂಬುದನು ತಳೆದು ॥
ಜಾಯೆಯೊಬ್ಬಳ ಬಿಟ್ಟೆನೆಂಬೀ । ನ್ಯಾಯದವ ತಾ ವಾದಿಯಲ್ಲವೆ ।
ಮಾಯೆಯಳಿದಾತ್ಮಜ್ಞನೇ ? ಸಂನ್ಯಾಸಿಯವನಲ್ಲ ॥ ೯೭ ॥

---

ವೇಷಕ್ಕೆ ಸಂಬಂಧಪಟ್ಟ ವರ್ಣಾಶ್ರಮಧರ್ಮಗಳು ಹೇಗೆ ಇಲ್ಲವೋ ಹಾಗೆ ಅಂತ್ಯಾಶ್ರಮಿಗೆ ತನ್ನ ಜನ್ಮದಿಂದ ಬಂದಂಥ ವರ್ಣಾಶ್ರಮಧರ್ಮಗಳೇನೂ ಇಲ್ಲ.)

೯೪. ತೊಡಕು+ಇಲ್ಲ–ತೊಡಕೂ ಇಲ್ಲ.

೯೫. ಆವರ್ತಿಸುತ–ಜಪಿಸುತ್ತ ಸಂನ್ಯಾಸದಲಿ–ಸಂನ್ಯಾಸದ ವೇಷಮಾತ್ರದಿಂದ.

೯೭. ಜಾಯೆಯೊಬ್ಬಳ–ಒಬ್ಬ ಹೆಂಡತಿಯನ್ನು. ಆತ್ಮಜ್ಞನೇ ?–ಆತ್ಮಜ್ಞನಲ್ಲವೆಂದಭಿಪ್ರಾಯ.

ಬಗೆಯೆ 'ನಿಸ್ಸಂಗೋಽಯ'ಮೆಂದೀ । ಜಗವರಿಯೆ ಸಾರಲ್ಕೆ ಶ್ರುತಿಶಿರ, ।
ಮಗನೆ 'ಸಂನ್ಯಾಸೋಽಯ'ಮೆಂಬುದನಾತ್ಮವರ್ಗವಹ ॥
ಬಗೆಯ ತನುಕರಣಾದಿಗಳಿಗೋ? । ಬಗೆಯಳಿದ ಬ್ರಹ್ಮಕ್ಕೊ? ತಿಳಿಯಲು ।
ನಗೆಯಲಾ! ಸಂನ್ಯಾಸ ಬರಿದೇ ಭ್ರಾಂತಿ ನೋಡೆಂದ ॥ ೯೮ ॥

ಆವನೊಬ್ಬ ಗೃಹಸ್ಥಧರ್ಮದಿ ।ವ್ಯಾವಹಾರಿಕನಾಗಿ ಮಿಗೆ ಸ ।
ದ್ಭಾವ ಶಮೆ ದಮೆ ಶಾಂತಿ ವೈರಾಗ್ಯಗಳನಳವಡಿಸಿ, ॥
ಜೀವಪರಮಾತ್ಮೈಕ್ಯಪದವನು । ಭಾವಿಸುತ್ತಿಹನವನೆ ಸಂನ್ಯಾ ।
ಸಾವಲಂಬನನವನೆ ಜೀವನ್ಮುಕ್ತ ನೋಡೆಂದ ॥ ೯೯ ॥

ಬಿಸಿಲದೊರೆಯಂದದಲಿ ತೋರುವ। ಹುಸಿಯ ಸಂಸಾರದಲಿ ಯೋಗಿಯು।
ವಿಷಯಗಳನನುಭವಿಸುವುದು ದಿಟವೆಂದು ತೋರಿದರು ॥
ಮುಸಗಿ ಮನದಲಿ ಬ್ರಹ್ಮದಲ್ಲಿಯೆ । ವ್ಯಸನಿಯಾಗಿಹನುತ್ತಮಾಂಗದ ।
ಲಿಸೆವ ಕಲಶದಲಿಟ್ಟು ಬುದ್ಧಿಯ ಕುಣಿವನಟನಂತೆ ॥ ೧೦೦ ॥

ಮಗನೆ, ವೈಯಾಕರಣಿಯಾ ಪರಿ । ಜಗದೊಳಗೆ ಸಂಸಾರಿಯಂದದಿ ।
ಬಗೆಯಳಿದು, ಭ್ರಮೆಯಡಗಿ, ಮೋಹಾವೇಶವಿಲ್ಲದೆಯೆ ॥
ಅಗಣಿತದ ವಿಷಯಗಳನುಂಬನು । ಹಗರಣಿಗನಂದದಲಿ ; ಯೋಗಿಯೆ ।
ಬಗೆಯಗೋಚರವರಿಯಲಳವಲ್ಲೆಂದನಾ ಮುನಿಪ ॥ ೧೦೧ ॥

ಆದ ಗರ್ಭವನಿಳುಹಿ ಬಿಸುಡುವ । ಹಾದರಿಯ ತೆರನಂತೆ, ಕಂಬವ ।
ಮೋದಿ ಮುರಿದೀಡಾಡಿ ಮದಗಜ ಹೋದ ತೆರನಂತೆ, ॥
ಪಾದರಜವನು ಕೊಡಹಿ ಬಿಸುಟಂ । ತಾದರದಿ ಸಂಸೃತಿಯ ಪಾಶವ ।
ಭೇದಿಸುತ್ತ ಸಮಾಧಿಯೊಳಗಿರುತಿಹನು ಕೇಳೆಂದ ॥ ೧೦೨ ॥

---

೯೮. "ನಿಸ್ಸಂಗೋಽಯಂ"--ಈ ಶ್ರುತಿವಾಕ್ಯಕ್ಕೆ ಪರಿಶಿಷ್ಟವನ್ನು ನೋಡಿ. ಬ್ರಹ್ಮವು ಸಂಗವಿಲ್ಲದ್ದೆಂದರ್ಥ. ಸಂನ್ಯಾಸೋಽಯಂ—ಈ ಸಂನ್ಯಾಸದ ವೇಷವೆಂಬುವದು. ಸಂನ್ಯಾಸ ಬರಿದೇ ಭ್ರಾಂತಿ—ಸಂನ್ಯಾಸದ ಬರೀವೇಷವು ಭ್ರಾಂತಿಯೇ ಸರಿ.

೯೯. ಸಂನ್ಯಾಸಾವಲಂಬನನು--ಸಂನ್ಯಾಸವನ್ನು ತೆಗೆದುಕೊಂಡಿರುವವನು.

೧೦೦. ವ್ಯಸನಿ--ಬಿಟ್ಟಿರಲಾರದವನು.

೧೦೧. ಹಗರಣಿಗನಂದದಲಿ--ಕಷ್ಟಜೀವಿಯಾದ ಸಂಸಾರಿಯಂತೆ, ಬಗೆಯು+ಅಗೋಚರವು+ಅರಿಯಲು+ಅಳವಲ್ಲ.

೧೦೨. ಮೋದಿ--ಹಾದು, ಗುದ್ದಿ. ಪಾದರಜವನು--ಕಾಲ ಧೂಳಿಯನ್ನು.

ಮೂಕಭಾವವನೈದಿ, ತಾನೇಕಾಕಿಯಾಗಿ, ದಿಗಂಬರತ್ವವ ।
ಸ್ವೀಕರಣವನು ಮಾಡಿ, ಪಾಣಿಯೆ ಪಾತ್ರೆಯಾಗಿರಲು, ॥
ಶಾಕವಾಗಲಿ ಷಡುರಸಾನ್ನದ । ಪಾಕವಾಗಲಿ ಉಂಡು, ತನಗಿದು ।
ಬೇಕು ಬೇಡೆಂದೆನ್ನನವ ಶುಕಯೋಗಿ ಕೇಳೆಂದ ॥ ೧೦೩॥

ಒಮ್ಮೆ ಶಾಕದಲೂಟವಾತಂ । ಗೊಮ್ಮೆ ಶಾಲ್ಯನ್ನದಲಿ ; ಭೂಮಿಯ ।
ಲೊಮ್ಮೆ ಮಲಗುವ; ಹಾಸುಮಂಚದಲೊಮ್ಮೆ ಪವಡಿಸುವ ; ॥
ಒಮ್ಮೆ ದಿವ್ಯಾಂಬರವನುಟ್ಟಿಹ । ನೊಮ್ಮೆ ಕಂಥಾಧಾರಿಯಾಗಿಹ ; ।
ಹೆಮ್ಮೆಳಿದ ನಿಜಯೋಗಿ ಸುಮ್ಮನೆ ಚರಿಸುತಿಹನೆಂದ ॥ ೧೦೪ ॥

ಅಶನವಿಲ್ಲವೆ ಭಿಕ್ಷಮಾತ್ರವ । ನೊಸೆದು ಬೇಡಲು ಮನೆಮನೆಗಳಲಿ ? ।
ತೃಷೆಗೆ ಕೆರೆತೊರೆಬಾವಿಗಳು ಬತ್ತಿದವೆ ? ಭೂಮಿಯಲಿ ॥
ಮಸಗಿ ಮಲಗಲು ಠಾವು ದೊರಕದೆ?।ವಸುಧೆಯೊಳುವಿಷಯಗಳಬಯಕೆಯ।
ವ್ಯಸನವಳಿದ ಮಹಾನುಭಾವನೆ ಯೋಗಿ ಕೇಳೆಂದ ॥ ೧೦೫ ॥

ಕೆಲರು ದ್ವಿಜನೆಂದೆಂಬರಾತನ ; । ಕೆಲರು ತಾಪಸನೆಂಬರಾತನ ; ।
ಕೆಲರು ತತ್ತ್ವಜ್ಞಾನಿಯೆಂಬರು ; ಮೂಕಜಡನೆಂದು ॥
ಕೆಲರು ನುಡಿವರು ; ಶೂದ್ರನೆಂದೇ । ಕೆಲರು ಬಗೆವರು ; ನೋಡಲವರಿಗೆ ।
ಹಲವು ಪರಿಯಲಿ ತೋರ್ಪ ಯೋಗಿಯ ತಿಳಿಯಲರಿದೆಂದ ॥ ೧೦೬ ॥

ಪುಣ್ಯಫಲದಾಸೆಗಳು ಯೋಗಿಗೆ । ಹೊನ್ನಗುಬ್ಬಿಯ ತೆರದಿ ಬಾಲಗೆ; ।
ಸನ್ನುತನೆ, ಯಮನವರ ಭೀತಿಯು ಗುಮ್ಮನೆಂಬಂತೆ; ॥

---

೧೦೩. ದಿಗಂಬರತ್ವವ--ಬಟ್ಟೆಯಿಲ್ಲದೆ ಇರುವಿಕೆಯನ್ನು. ಶಾಕವಾಗಲಿ--ಕಾಯಿಪಲ್ಯವಾಗಲಿ. ಷಡುರಸಾನ್ನ--೧ ಪ. ೩೨ ಪ. ಪಲ್ಲಿ ಬಂದಿದೆ.

೧೦೪. ಶಾಲ್ಯನ್ನದಲಿ--ನೆಲ್ಲಕ್ಕಿಯ ಅನ್ನದಲ್ಲಿ. ಕಂಥಾಧಾರಿ--ಹರಕುಬಟ್ಟೆಯನ್ನು ಹೊದ್ದವನು. ಈ ಪದ್ಯವು ಭರ್ತೃಹರಿಕೃತನೀತಿಶತಕದ ಈ ಕೆಳಗಿನ ಪದ್ಯವನ್ನು ಬಹಳ ಹೋಲುತ್ತದೆ. "ಕ್ವಚಿದ್ಭೂಮೌ ಶಯ್ಯಾ ಕ್ವಚಿದಪಿ ಚ ಪರ್ಯಂಕಶಯನಃ । ಕ್ವಚಿಚ್ಛಾಕಾಹಾರೀ ಕ್ವಚಿದಪಿ ಚ ಶಾಲ್ಯೋದನರುಚಿಃ । ಕ್ವಚಿತ್ಕಂಥಾಧಾರೀ ಕ್ವಚಿದಪಿ ಚ ದಿವ್ಯಾಂಬರಧರೋ।ಮನಸ್ವೀ ಕಾರ್ಯಾರ್ಥೀ ನ ಗಣಯತಿ ದುಃಖಂ ನ ಚ ಸುಖಮ್॥"

ಜನ್ಮ ಜರೆ ಮರಣಾದಿಗಳು ದು । ಷ್ಕರ್ತ್ರವವು ಮೃಗತೃಷ್ಣೆಯಂದದಿ ; ।
ನಿರ್ಣಯಿಸೆ ನಿಜವಾದ ಯೋಗಿಗೆ ಮಗನೆ ಕೇಳೆಂದ ॥ ೧೦೭ ॥

ವಾಸನೆಯ ಕೆಡಿಸುವೊಡೆ, ಮನವ ವಿ । ನಾಶವನುಮಾಡುವೊಡೆ, ಬಹಳಾ।
ಭ್ಯಾಸವದು ಬೇಕೆಂಮು ಬರಿದೇ ಭಂಗಪಡಲೇಕೆ ? ॥
ಈ ಸಕಲವೆಲ್ಲವನು ತನ್ನ ವಿ । ಲಾಸವೆಂದರಿದಿರ್ಪುದೇ ನಿ ।
ರ್ವಾಸನೆ ; ನಿಜಾನಂದ ತಾನಾಗಿರೆ ಮನೋನಾಶ ॥ ೧೦೮ ॥

ಮನವದೆತ್ತಲು ಪೋದೊಡೇನದು ? । ತನುವು ತಾನೇನಾದೊಡೇನದು?।
ಬಿನುಗಿನಿಂದ್ರಿಯನಿಕರವೆತ್ತಲು ತಿರುಗಲದಕೇನು ? ॥
ಘನಪರಂಜ್ಯೋತಿಪ್ರಕಾಶನು, । ನೆನೆಯು ಬಾರದಚಿಂತ್ಯನವ್ಯಯ ।
ನೆನಿಸುವಚಲಾನಂದಗದರಿಂದೇನು ಭಯವೆಂದ ॥ ೧೦೯ ॥

ಕಳಿತ ಹಣ್ಣದು ಮರಳಿ ತಾನಾ । ಎಳೆಯ ಕಸುಗಾಯಹುದೆ ? ಆತ್ಮನ ।
ತಿಳಿದು ನಿಶ್ಚಲವಾದ ಯೋಗಿಯ ಚಿತ್ತ ಹಳೆಯಂತೆ ॥
ಕಲುಷವಹುದೇ ? ಕಾಮ ಮೊದಲಹ । ಬಲುಹಿನರಿಷಟ್ಕವನುಳಿದು ನಿ ।
ರ್ಮಲ ನಿಜಾನಂದೈಕಪದವಾಗಿಹುದು ಕೇಳೆಂದ ॥ ೧೧೦ ॥

ಕ್ಷೀರಮಥನದಿ ಪಡೆದ ಮೇಲಾ । ಕ್ಷೀರವಹುದೇ ಆಜ್ಯ ? ಕಡುನಿ ।
ಸ್ಸಾರಕಾಷ್ಠದೊಳಿರ್ದ ವಹ್ನಿಯ ಪಡೆಯಲಾ ವಹ್ನಿ ॥
ದೀರ ಕೇಳ್ಕೆ ಕಾಷ್ಠವಪ್ಪುದೆ ? । ಪಾರಮಾರ್ಥಿಕವಾದ ನಿಜವದು ।
ಘೋರಮಾಯಾಕಾರ್ಯವಪ್ಪುದೆ ? ಮಗನೆ ಕೇಳೆಂದ ॥ ೧೧೧ ॥

---

೧೦೭. ಹೊನ್ನಗುಬ್ಬಿಯು ತೆರದಿ ಹುಡುಗರು ಬಂಗಾರದ ಗುಬ್ಬಿಯನ್ನೊಂದು ಆಟದ ಗುಬ್ಬಿಯೆಂದು ತಿಳಿಯುವರೇ ಹೊರತು. ಬಂಗಾರದ ಬೆಲೆಯನ್ನು ತಿಳಿಯುವದಿಲ್ಲ. ಅವರಂತೆ ಯೋಗಿಯು ಪುಣ್ಯದ ಫಲಗಳನ್ನು ಲೆಕ್ಕಿಸುವದಿಲ್ಲ. ಗುಮ್ಮನೆಂಬಂತೆ-ಗುಮ್ಮನೆಂಬುದಕ್ಕೆ ಹೇಗೆ ಹೆದರಬೇಕಾದದ್ದಿಲ್ಲವೋ ಹಾಗೆ.

೧೦೮. ಕೆಡಿಸುವೊಡೆ-ನಾಶಮಾಡಬೇಕಾದರೆ.

೧೦೯. ನೆನೆಯು ಬಾರದ-ಧ್ಯಾನಮಾಡಬೇಕೆಂದರೆ ಮನಸ್ಸಿಗೆ ಸಿಕ್ಕದೆ ಇರುವಂಥ.

೧೧೦. ಅರಿಷಟ್ಕ-೧ ಅ. ೨೨ ಪ. ದಲ್ಲಿ ಬಂದಿದೆ.

ದೇಹವೇ ತಾನೆಂದು ತನ್ನೊಳು । ಮೋಹಿಸಲು ಭವಭವದ ಬೀಜವು ; ।
ದೇಹವದು ತಾನಲ್ಲ, ಸಾಕ್ಷಾದ್ಬ್ರಹ್ಮ ತಾನೆಂದು ॥
ಊಹಿಸಲು ಭವಬೀಜನಾಶನ : । ದಾಹಕಾಷ್ಠವನುಳಿದ ವಹ್ನಿಯ ।
ದಾಹದಂದದಿ ಬೀಜವಳಿಯಲು ಜನ್ಮವೆಲ್ಲಿಯದು ? ॥ ೧೧೨ ॥

ಜನ್ಮನೇ ಮೊದಲಿಲ್ಲದಾತನು । ಬ್ರಾಹ್ಮಣಸದೆಂತಹನು ? ಬ್ರಾಹ್ಮಣ ।
ಧರ್ಮವಿಲ್ಲದ ಮನುಜಗಾಶ್ರಮಧರ್ಮವೆಲ್ಲಿಯದು ? ॥
ಬ್ರಹ್ಮಚರ್ಯಾದ್ಯಾಶ್ರಮಂಗಳಿ । ನೆಮ್ಮದಾತಗೆ ಶಾಸ್ತ್ರವೇತಕೆ ? ।
ಸುಮ್ಮನೇ ಸುಜ್ಞಾನಿ ತೂಷ್ಣೀಂಭಾವದಿಂದಿಹನು ॥ ೧೧೩ ॥

ಹುರಿದ ಬೀಜವು ಹುಟ್ಟಲರಿಯದ । ತೆರದಿ ಹಮ್ಮಳಿದುಳಿದ ವಸ್ತುವ ।
ನರಿದ ಯೋಗೀಶ್ವರಗೆ ಪುನರಾವರ್ತಿಯೆಲ್ಲಿಹುದು ? ॥
ಮರೆದು ಬಾಹ್ಯವನರಿಯದೇ ವ್ಯವ । ಹರಿಪ ಜೀವನ್ಮುಕ್ತ ಸತ್ತ್ವ ।
ಸ್ಫುರಣಮಾತ್ರದಿ ತೋರುತಿರ್ಪನು ದಗ್ಧಪಟದಂತೆ ॥ ೧೧೪॥

ಈ ಪರಿಯ ಯೋಗಿಗಳು ಸಂಸ್ಕೃತಿ । ಲೇಪವಿಲ್ಲದೆ ವಿಹರಿಸುತ್ತಿರೆ ।
ಕಾಪಥರು ನಿಂದಿಸುವರವರ ಚರಿತ್ರೆಗಳ ಕಂಡು ; ॥
ಸೋಪಹಾಸವ ಮಾಡಿ ನರಕದ । ಕೂಪದೊಳು ಪಾಪಿಗಳು ಕೆಡೆವರು ; ।
ಶ್ರೀಪತಿಯ ರೂಪಿಗಳು ಯೋಗಿಗಳವರು ಪರಬ್ರಹ್ಮ ॥ ೧೧೫ ॥

ಅದಃನಿಮಿತ್ತದಲಾ ಮಹಾತ್ಮನ । ಪದಪಯೋಜವ ಪಿಡಿದು, ಬ್ರಹ್ಮವ ।
ವಿದಿತವಾಗಿಯೆ ತಿಳಿದು, ಸಂಸ್ಕೃತಿಬಂಧವನು ಹರಿದು, ॥

---

೧೧೨. ಭವಭವದ—ಮತ್ತೆ ಮತ್ತೆ ಹುಟ್ಟುವಂತೆ ಮಾಡುವ ಅಥವಾ ಸಂಸಾರವನ್ನುಂಟುಮಾಡುವ.

೧೧೪. ಸತ್ತ್ವಸ್ಫುರಣಮಾತ್ರದಿ--ತಾನೊಬ್ಬನಿರುವೆನೆಂಬಿಷ್ಟು ಮಾತ್ರದ ತಿಳಿವಳಿಕೆಯಿಂದ. ದಗ್ಧಪಟದಂತೆ--ಸುಟ್ಟ ಬಟ್ಟೆಯು ಬಟ್ಟೆಯಂತೆಯೇ ಕಾಣುತ್ತಿದ್ದರೂ ಹೊದಿಯುವದಕ್ಕೆ ಉಪಯೋಗವಾಗದೆ ಬರೀ ತೋರುವಿಕೆಯು ಮಾತ್ರವಾಗಿರುವಂತೆ.

೧೧೫. ಕಾಪಥರು--ದುರಾಚಾರಿಗಳು. ಸೋಪಹಾಸವ—ಅಪಹಾಸ್ಯವನ್ನು. ಕೆಡೆವರು—ಬೀಳುವರು.

ಸದಮಲಾನಂದಾನುಭವವೆನಿ । ಪ್ಪುವಧಿಯೊಳಗೋಲಾಡಿ, ಕಾಲನ ।
ಸದನವನು ತುಳಿದೈದುವವದು ಸಾಯುಜ್ಯನಿಜಪದವ || ೧೧೬ ||

ಪರುಷ ಮುಟ್ಟಿದ ಲೋಹವಾ ಕ್ಷಣ । ಹಿರಿದೆನಿಸುವಪರಂಜಿಯಾದಂ ।
ತರರೆ ! ಬ್ರಹ್ಮದ ಗಟ್ಟಿ ತಾನೇ ಚರಿಸುವಂದದಲಿ ||
ಚರಿಸಿ ಜಂಗಮತೀರ್ಥವೆನಿಸುವ । ಗುರುಕಟಾಕ್ಷವ ಪಡೆದು ಸಾಕ್ಷಾ ।
ತ್ಕರಿಸಿ ಬ್ರಹ್ಮವೆ ಆಗಿ ಯೋಗಿಗಳೆನಿಸಿ ವಿಹರಿಸರು || ೧೧೭ ||

ಯೋಗವರ್ಗದಿ ರಾಜಯೋಗವೆ । ಯೋಗ; ವಿದ್ಯೆಯೊಳಾತ್ಮವಿದ್ಯೆಯ ।
ದಾಗಲಾ ಮುಕ್ತಿಯೊಳು ನಿಜಸಾಯುಜ್ಯವೇ ಮುಕ್ತಿ ; ||
ಯೋಗಗಳೆ? ರೋಗಗಳು ಮಿಕ್ಕವು; । ಕೂಗಿ ಸಾವುತಲಿರ್ಪ ವಿದ್ಯೆಗ ।
ಳಾಗಿ ; ಸಾಯುಜ್ಯವನುಳಿದ ಮುಕ್ತಿಗಳು ಮಿಥ್ಯಗಳು || ೧೧೮ ||

ವ್ರತಗಳೊಳು ಶಿವರಾತ್ರಿ, ಮಂತ್ರ । ಪ್ರತತಿಯೊಳು ಗಾಯತ್ರಿ, ವಿದ್ಯಾ ।
ವಿತತಿಯೊಳಗಧ್ಯಾತ್ಮವಿದ್ಯೆಯು, ಮತಗಳೊಳು ಶೈವ, ||
ಕ್ರತುಗಳೊಳು ಜಪಯಜ್ಞ, ಪೂಜಾ । ಸ್ಥಿತಿಯೊಳಗೆ ನಿರ್ಗುಣವು, ದೇವೋ ।
ನ್ನತಿಯೊಳಗೆ ಶ್ರೀಮಲ್ಲಿಕಾರ್ಜುನದೇವನೇ ದೇವ || ೧೧೯ ||

ಸೇವಿಸುವ ಮೃದ್ದಾರು ಶಿಲೆಗಳ । ದೇವತಾಪ್ರತಿಮೆಗಳು ಬುದ್ಧಿಯ ।
ಭಾವದಿಂ ಕಲ್ಪಿತಗಳಾಗಿಯು ದೈವವೆನಿಪಾಗ ||

---

೧೧೬. ಕಾಲನ--ಯಮನ. ಐದುವದು—(ಸಾಯುಜ್ಯವೆಂಬ ಮುಕ್ತಿಯನ್ನು ಪಡೆಯಬೇಕು.

೧೧೭. ಪರುಷ–ಸ್ಪರ್ಶಮಣಿ. ಜಂಗಮತೀರ್ಥ–ಓಡಾಡುವ ಪುಣ್ಯಜಲ.

೧೧೮. ಯೋಗವರ್ಗದಿ--ಬೇರೆ ಬೇರೆ ಅನೇಕ ಯೋಗಗಳಲ್ಲಿ (ಮಂತ್ರಯೋಗ, ಲಯಯೋಗ, ಹಠಯೋಗ, ಅಮನಸ್ಕಯೋಗ, ರಾಜಯೋಗ, ಮೊದಲಾದವುಗಳಲ್ಲಿ), ಮಿಕ್ಕವು--ಉಳಿದ ಯೋಗಗಳು. ಕೂಗಿ.......ವಿದ್ಯೆಗಳಾಗಿ–ಉಳಿದ ವಿದ್ಯೆಗಳೆಲ್ಲ ಕೂಗಿ ಸಾಯುವ ವಿದ್ಯೆಗಳೆಂದರ್ಥ.

೧೧೯. ಅಧ್ಯಾತ್ಮವಿದ್ಯೆಯು— 'ಅಧ್ಯಾತ್ಮವಿದ್ಯಾ ವಿದ್ಯಾನಾಂ' (ಗೀ). ಶೈವ— ಶಿವೋಪಾಸನೆಯು. ಜಪಯಜ್ಞ—'ಯಜ್ಞಾನಾಂ ಜಪಯಜ್ಞೋಽಸ್ಮಿ' (ಗೀ).

೧೨೦. ಮೃದ್ದಾರುಶಿಲೆಗಳ—ಮಣ್ಣು, ಕಟ್ಟಿಗೆ, ಕಲ್ಲು ಇವುಗಳ. ಅವ ಕಲ್ಪಿತವು—ಯಾವಕಲ್ಪನೆಯೂ.

ಆವ ಕಲ್ಪಿತವಿಲ್ಲದಿರ್ಪ, ಸ್ವ । ಭಾವಸಿದ್ಧವೆ ಆಗಿ ಬೆಳಗುವ, ।
ಕೇವಲಾನಂದಸ್ವರೂಪನು ದೇವನೇಕಲ್ಲ? ॥ ೧೨೦ ॥

ದೇಹವೇ ದೇವಾಲಯವು ದಿಟ; । ದೇಹಿಯೆನಿಸುವ ಜೀವ ದೇವನು; ।
ಮೋಹವೇ ನಿರ್ಮಾಲ್ಯವಂತದ ನೇತಿಗಳೆದುಳಿಬ ॥
ಊಹಿಸಲು ಬಾರದ ಸ್ವಯಂಪ್ರಭೆ । ಸೋಽಹಮೆಂಬುದೆ ಪೂಜೆ; ತನುವಿನ
ಗಾಹಿನಾಹಾರಗಳೆ ಉಪಚಾರಗಳು ಕೇಳೆಂದ ॥ ೧೨೧

ಜ್ಞಾನದಿಂದಲಿ ಸಂಚಿತವು ಮಿಗೆ । ಮಾನನಿಧಿ, ಆಗಾಮಿಕರ್ಮವು ।
ಹಾನಿಯೆಪ್ಪುವು ವಂದಿಪರ ನಿಂದಿಪರ ದೆಸೆಯಿಂದ ; ॥
ತಾನು ತನುವಿಪ್ಪನ್ನವುಂಬನು ; । ಜ್ಞಾನಿಯಾಗಿಯು ಬಿಡದು ತನುವಿನ ।
ಹಾನಿಯಹ ಪರಿಯಂತಲೆಲೆ ಪ್ರಾರಬ್ಧಕರ್ಮಗಳು ॥ ೧೨೨ ॥

ಸಗರಸಂತತಿ, ಭಾರ್ಗವನು, ಶಶಿ, । ಗಗನಮಣಿ, ದೇವೇಂದ್ರನಾತನ ।
ಮಗನು, ಮುಮ್ಮಗ, ಮೊದಲು ಸ್ವೇಚ್ಛಾಪ್ರಾಪ್ತಿಫಲಯುತರು ; ॥
ಮಗನೆ, ಕೇಳು ಪರೇಚ್ಛೆಯವರನು । ಜಗದಲಿ ಹರಿಶ್ಚಂದ್ರ, ಕಲಶಜ ।
ರಗಣಿತರನಿಚ್ಛೆಯಲಿ ಪಾಂಡವಾರ್ಜುನಾದಿಗಳು ॥ ೧೨೩ ॥

---

೧೨೧. ದೇಹವೇ ದೇವಾಲಯವು—ಇದಕ್ಕೆ ಆಧಾರವಾದ ಪುರಾಣಶ್ಲೋಕವೇನೆಂದರೆ—"ದೇಹೋ ದೇವಾಲಯಃ ಪ್ರೋಕ್ತೋ ಜೀವೋ ದೇವಸ್ಸನಾತನಃ ॥ ತ್ಯಜೇದಜ್ಞಾನನಿರ್ಮಾಲ್ಯಂ ಸೋಽಹಂಭಾವೇನ ಪೂಜಯೇತ್ ॥" ಗಾಹಿನಾಹಾರ—ರಕ್ಷಣಾರ್ಥವಾಗಿ ಉಣ್ಣುವ ಊಟ.

೧೨೨. ಸಂಚಿತವು—ಹಿಂದೆಮಾಡಿದ ಪುಣ್ಯಪಾಪಗಳ ಸಮೂಹವು. ಆಗಾಮಿ—ಮುಂದೆಮಾಡುವ ಪುಣ್ಯಪಾಪಗಳು. ವಂದಿಪರ ... ದೆಸೆಯಿಂದ—ಜ್ಞಾನಿಯಪುಣ್ಯವು ಜ್ಞಾನಿಯನ್ನು ವಂದಿಸುವವರಿಗೂ ಜ್ಞಾನಿಯ ಪಾಪವು ಜ್ಞಾನಿಯನ್ನು ನಿಂದಿಸುವವರಿಗೂ ಹೋಗಿ ಕೊನೆಗೆ ಜ್ಞಾನಿಯು ತನ್ನ ಭಾಗಕ್ಕೆ ಯಾವ ಪುಣ್ಯಪಾಪವೂ ಇಲ್ಲದವನಾಗುವನು. ತಾನು ತನುವಿಪ್ಪನ್ನವುಂಬನು—ಶರೀರವಿರುವವರೆಗೂ ಪ್ರಾರಬ್ಧವನ್ನನುಭವಿಸುವನು. (ಈ ಸಂದರ್ಭದಲ್ಲಿ ಹಿಂದಿನ ೮೩ನೆ ಪದ್ಯವನ್ನೂ ನೋಡಿ.)

೧೨೩. ಮಗನು—ಮಗನಾದ ಅರ್ಜುನನು. ಮುಮ್ಮಗ—ಅಭಿಮನ್ಯು. ಸ್ವೇಚ್ಛಾಪ್ರಾಪ್ತಿ—ತಾನಾಗಿ ಬಯಸಿ ಪಡೆದುಕೊಂಡ ಫಲವನ್ನು ಅನುಭವಿಸಿದವರು. ಪರೇಚ್ಛೆಯವರು—ಇತರರ ದಾಕ್ಷಿಣ್ಯಕ್ಕಾಗಿ ಸುಖದುಃಖಗಳನ್ನು ಅನುಭವಿಸಿದವರು,

